ಮುರಳೀಧರ ಉಪಾಧ್ಯ, ಹಿರಿಯಡಕ

# ಕೊಂಕಣಿ ಭಾಷೆ-ಸಾಹಿತ್ಯ



ಕೊಂಕಣಿ ಅಧ್ಯಯನ ಪೀಠ
ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ,
ಉಡುಪಿ – 576 102.

## ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ

ಉಡುಪಿ

-- : --

### ಕೊಂಕಣಿ ಭಾಷೆ-ಸಾಹಿತ್ಯ

ಈ ಗ್ರಂಥದಲ್ಲಿ ಕೊಂಕಣಿ ಭಾಷೆಯ ಇತಿಹಾಸ- ವರ್ತಮಾನಗಳನ್ನು ಕುರಿತು ಎಂ. ಗೋವಿಂದ ಪೈ, ಸೇಡಿಯಾಪು ಕೃಷ್ಣ ಭಟ್ಟ, ಸುನೀತಿ ಕುಮಾರ ಚಟರ್ಜಿ, ಡಾ। ಒಲಿವಿನ್ಹೊ ಗೋಮ್ಸ್, ಜೋಸ್ ಪಿರೇರಾ, ನಾ. ಡಿ'ಸೋಜ, ಗೌರೀಶ ಕಾಯ್ಕಿಣಿ, ಕೃಷ್ಣಾನಂದ ಕಾಮತ್, ಡಾ। ವಿಲಿಯಂ ಮಾಡ್ತಾ, ಕೆ. ಕೆ. ಪೈ, ಎಂ. ವಿ. ಕಾಮತ್ ಮತ್ತಿತರ ವಿದ್ವಾಂಸರು ಬರೆದಿರುವ ಹದಿನೈದು ಲೇಖನಗಳಿವೆ.

ಈ ಗ್ರಂಥದ ಸಂಪಾದಕರಾದ ಮುರಳೀಧರ ಉಪಾಧ್ಯ ಹಿರಿಯಡಕ ಅವರು ಈ ಶತಮಾನದ ಮಹತ್ವದ ಪ್ರಕಟಣೆಗಳಲ್ಲೊಂದು ಎಂದು ವಿಮರ್ಶಕರ ಮೆಚ್ಚುಗೆ ಗಳಿಸಿರುವ '*ಗೋವಿಂದ ಪೈ ಸಂಶೋಧನ ಸಂಪುಟ*' (೧೯೯೫)ದ ಸಂಪಾದಕದ್ವಯರಲ್ಲೊಬ್ಬರು. ಶ್ರೀ ಉಪಾಧ್ಯರು ಉಡುಪಿಯ ಶ್ರೀ ಪೂರ್ಣಪ್ರಜ್ಞ ಸಂಜೆ ಕಾಲೇಜಿನಲ್ಲಿ ಕನ್ನಡ ವಿಭಾಗದ ಮುಖ್ಯಸ್ಥರಾಗಿದ್ದಾರೆ.

# ಕೊಂಕಣಿ ಭಾಷೆ-ಸಾಹಿತ್ಯ


*ಸಂಪಾದಕ*

ಮುರಳೀಧರ ಉಪಾಧ್ಯ ಹಿರಿಯಡಕ





ಕೊಂಕಣಿ ಅಧ್ಯಯನ ಪೀಠ

ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ,

ಉಡುಪಿ- ೫೭೬೧೦೨.

**KONKANI BHAASHE - SAAHITYA** (Collection of Kannada Articles on Konkani Language and Literature written by different authors.) Edited by Muraleedhara Upadhya Hiriadka. Published by Rashtrakavi Govind Pai Samshodhana Kendra, Mahatma Gandhi Memorial College, Udupi- 576102- Karnataka, INDIA. Printed at Manipal power press, Manipal -576119.

First Impression : 1995

Pages : xx + 182



ರಕ್ಷಾಪುಟದ ವಿನ್ಯಾಸ- ಜಯದೇವ, ಮಣಿಪಾಲ

ಮೊದಲ ಮುದ್ರಣ- ೧೯೯೫.

ಬೆಲೆ ರೂ.- **75/=**

ಕಂಪ್ಯೂಟರ್ ಅಕ್ಷರ ಜೋಡಣೆ:'ನವದುರ್ಗಾ ಲೇಸರ್‌ಟೆಕ್' C/o. ಶ್ಯಾಮಲ ಸದನ,
ಕಟ್ಟೆ ಆಚಾರ್ಯ ಮಾರ್ಗ, ಕುಂಜಿಬೆಟ್ಟು, ಉಡುಪಿ-೨.
ಮುದ್ರಣ: ಮಣಿಪಾಲ ಪವರ್ ಪ್ರೆಸ್, ಮಣಿಪಾಲ.

# ಪರಿವಿಡಿ

## ಅನುಬಂಧ



*

# ಪ್ರಕಾಶಕರ ಮಾತು

ನಮ್ಮ ಸಂಸ್ಥೆ ೧೯೭೮ರಲ್ಲಿ ಆರಂಭಿಸಿದ 'ತುಳು ನಿಘಂಟು' ಯೋಜನೆ ಈಗ ಮುಕ್ತಾಯದ ಹಂತದಲ್ಲಿದೆ. ತುಳು ನಿಘಂಟುವಿನ ಮೂರು ಸಂಪುಟಗಳು ಈಗಾಗಲೇ ಪ್ರಕಟವಾಗಿವೆ.

ತುಳು ಭಾಷೆಗೆ ಐತಿಹಾಸಿಕ ಮಹತ್ವದ ಕೊಡುಗೆ ನೀಡಿದ ಗೋವಿಂದ ಪೈ ಸಂಶೋಧನ ಕೇಂದ್ರವು ಕೊಂಕಣಿಯನ್ನು ಕುರಿತ ತನ್ನ ಸಾಂಸ್ಕೃತಿಕ ಜವಾಬ್ದಾರಿಯನ್ನು ನಿರ್ವಹಿಸಲು ಸಿದ್ಧತೆ ನಡೆಸುತ್ತಿದೆ.

ಗೋವಿಂದ ಪೈ ಸಂಶೋಧನ ಕೇಂದ್ರದಲ್ಲಿ 'ಕೊಂಕಣಿ ಅಧ್ಯಯನ ಪೀಠ'ವನ್ನು ೧೯೯೨ರಲ್ಲಿ ಆರಂಭಿಸಲಾಯಿತು. ಮಣಿಪಾಲದ 'ಡಾ। ಟಿ. ಎಂ. ಎ. ಪೈ ಕೊಂಕಣಿ ಪ್ರತಿಷ್ಠಾನ'ದವರು ನೀಡಿರುವ ಒಳ್ಳೆಯ ಕೊಂಕಣಿ ಗ್ರಂಥಾಲಯ ನಮ್ಮಲ್ಲಿದೆ.

ಇದೀಗ ಕೊಂಕಣಿ ಅಧ್ಯಯನ ಪೀಠದ ಮೊದಲ ಪ್ರಕಟಣೆಯಾಗಿ 'ಕೊಂಕಣಿ-ಭಾಷೆ, ಸಾಹಿತ್ಯ' ಎಂಬ ಕನ್ನಡ ಗ್ರಂಥವನ್ನು ಪ್ರಕಟಿಸುತ್ತಿದ್ದೇವೆ. ಕರ್ನಾಟಕದಲ್ಲಿರುವ ಕನ್ನಡ ಬಲ್ಲ ಕೊಂಕಣಿಗರಿಗೆ ಮತ್ತು ಕನ್ನಡಿಗರಿಗೆ ಕೊಂಕಣಿ ಭಾಷೆಯ ಇತಿಹಾಸ-ವರ್ತಮಾನಗಳನ್ನು ಪರಿಚಯಿಸುವುದು ಈ ಪುಸ್ತಕದ ಉದ್ದೇಶ. ನಮ್ಮ ಸಂಸ್ಥೆಯ ಪ್ರಕಟಣ ಸಲಹಾ ಮಂಡಳಿಯ ಸದಸ್ಯರಾಗಿರುವ, ವಿಮರ್ಶಕ ಪ್ರೊ। ಮುರಳೀಧರ ಉಪಾಧ್ಯ ಹಿರಿಯಡಕ ಅವರ ಎರಡು ವರ್ಷಗಳ ಪರಿಶ್ರಮದ ಫಲವಾಗಿ ಈ ಗ್ರಂಥ ರೂಪುಗೊಂಡಿದೆ. ಶ್ರೀ ಮುರಳೀಧರ ಉಪಾಧ್ಯರಿಗೆ ಮತ್ತು ಈ ಗ್ರಂಥದ ಲೇಖಕರೆಲ್ಲರಿಗೆ ನಮ್ಮ ಕೃತಜ್ಞತೆಗಳು. ನಮ್ಮ ವಿನಂತಿಗೆ ಒಪ್ಪಿ ಈ ಪುಸ್ತಕಕ್ಕೆ ಮುನ್ನುಡಿ ಬರೆದು ಪ್ರೋತ್ಸಾಹಿಸಿರುವ 'ತರಂಗ' ಸಂಪಾದಕ ಶ್ರೀ ಸಂತೋಷಕುಮಾರ ಗುಲ್ವಾಡಿಯವರಿಗೆ ನಾವು ಆಭಾರಿಗಳಾಗಿದ್ದೇವೆ.

ಮಣಿಪಾಲದ ಡಾ। ಟಿ. ಎಂ. ಎ. ಪೈ ಕೊಂಕಣಿ ಪ್ರತಿಷ್ಠಾನದ ಅಧ್ಯಕ್ಷರೂ ನಮ್ಮ ಕಾಲೇಜಿನ ಆಡಳಿತ ಮಂಡಳಿ ಅಧ್ಯಕ್ಷರೂ ಆಗಿರುವ ಶ್ರೀ ಕೆ. ಕೆ. ಪೈ ಅವರು ಈ ಪುಸ್ತಕದ ಪ್ರಕಟಣೆಯ ಬಗ್ಗೆ ವಿಶೇಷ ಆಸಕ್ತಿ ವ್ಯಕ್ತಪಡಿಸಿ, ಬೆಂಬಲಿಸಿದ್ದಾರೆ. ಈ ಪುಸ್ತಕದ ಪ್ರಕಟಣೆಗೆ ಧನಸಹಾಯ ನೀಡಿದ ಡಾ। ಟಿ. ಎಂ. ಎ. ಪೈ ಕೊಂಕಣಿ ಪ್ರತಿಷ್ಠಾನದವರಿಗೆ, ಪ್ರತಿಷ್ಠಾನದ ಕಾರ್ಯದರ್ಶಿ ಶ್ರೀ ಎಚ್. ವಿ. ಕಾಮತರಿಗೆ ನಮ್ಮ ಕೃತಜ್ಞತೆಗಳು.

ಈ ಪುಸ್ತಕದ ಕಂಪ್ಯೂಟರ್ ಅಕ್ಷರ ಜೋಡಣೆ ಮಾಡಿರುವ ಡಾ। ಕೆ. ಪದ್ಮನಾಭ ಕೇಕುಣ್ಣಾಯ ಅವರಿಗೆ, ಮುದ್ರಿಸಿರುವ ಮಣಿಪಾಲ ಪವರ್ ಪ್ರೆಸ್ ನವರಿಗೆ, ಮುಖಪುಟ ವಿನ್ಯಾಸ ರಚಿಸಿದ ಕಲಾವಿದ ಶ್ರೀ ಜಯದೇವ ಅವರಿಗೆ ನಮ್ಮ ಕೃತಜ್ಞತೆಗಳು.

ವಿಶ್ವ ಕೊಂಕಣಿ ಸಮ್ಮೇಳನ ಸಂದರ್ಭದಲ್ಲಿ ಪ್ರಕಟವಾಗುತ್ತಿರುವ ಈ ಪುಸ್ತಕವನ್ನು ನೀವೆಲ್ಲ ಕೊಂಡಾಡುತ್ತೀರೆಂದು ನಾವು ನಂಬಿದ್ದೇವೆ.

*ಗೋವಿಂದ ಪೈ ಸಂಶೋಧನ ಕೇಂದ್ರ,*
*ಉಡುಪಿ-೫೭೬ ೧೦೨*
*ವಿನಾಯಕ ಚತುರ್ಥೀ*
*೨೯-೮-೧೯೯೫*

**ಹೆರಂಜೆ ಕೃಷ್ಣ ಭಟ್ಟ,**
*ನಿರ್ದೇಶಕ*

# ಸಂಪಾದಕೀಯ

## ಮುರಳೀಧರ ಉಪಾಧ್ಯ ಹಿರಿಯಡಕ

> "ಕೊಂಕಣಿಯ ಜೊತೆಗೆ ಕನ್ನಡ ಮಾತನಾಡಿ
> ಒಂದುಗೂಡಿದವು ಎರಡು ಜೀವನಾಡಿ
> ಎರಡು ಪಕಳೆಯ ಹೂವು ಮಿಡಿಯಾಗಿ ಕಾಯಿ
> ಕಾಯಿ ಹಣ್ಣಾದೊಡನೆ ಜೀವನ ಮಿಠಾಯಿ"
>
> – ದಿನಕರ ದೇಸಾಯಿ.

೧

ಭಾರತದಲ್ಲಿ ಐವತ್ತು ಲಕ್ಷಕ್ಕಿಂತ ಹೆಚ್ಚು ಮಂದಿ ಕೊಂಕಣಿ ಮಾತನಾಡುವವರಿದ್ದಾರೆ. ಇವರಲ್ಲಿ ಸುಮಾರು ಅರ್ಧಾಂಶ ಕೊಂಕಣಿಗರು – ೨೫ ಲಕ್ಷಕ್ಕಿಂತ ಹೆಚ್ಚು – ಕರ್ನಾಟಕದಲ್ಲಿದ್ದಾರೆ. ಕರ್ನಾಟಕದಲ್ಲಿರುವ ಕೊಂಕಣಿಗರು ಕೊಂಕಣಿಯನ್ನು ಕನ್ನಡ ಲಿಪಿಯಲ್ಲೆ ಬರೆಯುತ್ತಿದ್ದಾರೆ. ಎಂ. ಗೋವಿಂದ ಪೈ, ಪಂಜೆ ಮಂಗೇಶರಾವ್, ಹಟ್ಟಿಯಂಗಡಿ ನಾರಾಯಣರಾವ್, ಗುಲ್ವಾಡಿ ವೆಂಕಟ ರಾಯರು, ಗುಲ್ವಾಡಿ ಅಣ್ಣಾಜಿರಾಯರು, ಬೋಳಾರ ಬಾಬುರಾಯರು, ಬೆನಗಲ್ ರಾಮರಾಯರು, ಪಡುಕೋಣೆ ರಮಾನಂದ ರಾಯರು, ಎಂ. ಎನ್. ಕಾಮತ್, ಕುಡ್ವಿ ವಾಸುದೇವ ಶೆಣೈ, ಗೌರೀಶ ಕಾಯ್ಕಿಣಿ, ದಿನಕರ ದೇಸಾಯಿ, ಯಶವಂತ ಚಿತ್ತಾಲ, ಗಿರೀಶ ಕಾರ್ನಾಡ್, ಆರ್. ಡಿ. ಕಾಮತ್, ಸುಂದರ ನಾಡಕರ್ಣಿ, ಕೃಷ್ಣಾನಂದ ಕಾಮತ್, ಅರವಿಂದ ನಾಡಕರ್ಣಿ, ಜಯಂತ ಕಾಯ್ಕಿಣಿ, ನಾ. ಡಿಸೋಜ, ಡಾ। ಸೂರ್ಯನಾಥ ಕಾಮತ್, ಎಂ. ಮುಕುಂದ ಪ್ರಭು, ಸಂತೋಷ ಕುಮಾರ ಗುಲ್ವಾಡಿ –ಹೀಗೆ ಹಲವಾರು ಮಂದಿ ಕೊಂಕಣಿ ಮಾತೃಭಾಷೆಯ ಲೇಖಕರು ಕನ್ನಡ ಸಾಹಿತ್ಯವನ್ನು ಸಮೃದ್ಧಗೊಳಿಸಿದ್ದಾರೆ.

ಕೊಂಕಣಿ ಭಾಷೆ ಸಾಹಿತ್ಯಗಳ ಇತಿಹಾಸ ಮತ್ತು ವರ್ತಮಾನಗಳನ್ನು ಚರ್ಚಿಸುವ ಕನ್ನಡ ಲೇಖನಗಳ ಸಂಕಲನವೊಂದರ ಸಂಪಾದನೆ ಈ ಗ್ರಂಥದ ಉದ್ದೇಶ. ಕನ್ನಡದಲ್ಲಿ ಕೊಂಕಣಿ ಭಾಷೆಯ ಹೋರಾಟದ ವಿವಿಧ ಮುಖ ಗಳನ್ನು ಚಿತ್ರಿಸುವ ಇಂಥ ಗ್ರಂಥ ಇದುವರೆಗೆ ಲಭ್ಯವಿರಲಿಲ್ಲ.

ರಾಜಕೀಯ ನಿರ್ಧಾರಗಳಿಗೂ ಒಂದು ಭಾಷೆಯ ಏಳು–ಬೀಳಿಗೂ ನಿಕಟ ಸಂಬಂಧವಿದೆ. ಗೋವಾದಲ್ಲಿ ಬಲಾತ್ಕಾರದ ಮತಾಂತರಗಳನ್ನು ಆರಂಭಿಸಿದ ಪೋರ್ತುಗೀಸರು, ಕೊಂಕಣಿ ಭಾಷೆಯ ಬಳಕೆಗೆ ನಿಷೇಧ ಹೇರಿ, (೧೬೮೪) ಪೋರ್ತುಗೀಸ್ ಭಾಷೆಯನ್ನು ಅಧಿಕೃತ ಭಾಷೆಯೆಂದು ಘೋಷಿಸಿದರು. ಮೂರ್ತಿಭಂಜನೆಯ ಜತೆಯಲ್ಲೆ ಕೊಂಕಣಿಯನ್ನು ಕೊಲ್ಲಲು ಯತ್ನಿಸಿದ ಪೋರ್ತುಗೀಸರ ದೌರ್ಜನ್ಯಗಳ ವಿವರಗಳು ಎಂ. ಗೋವಿಂದ ಪೈಗಳ 'ನಮ್ಮ ಹಿರಿಯರನ್ನು ಕುರಿತು' ಲೇಖನದಲ್ಲಿವೆ. ಈ ಲೇಖನರಚನೆಗೆ

ಪೂರ್ವಸಿದ್ಧತೆಯಾಗಿ ಗೋವಿಂದ ಪೈಗಳು ಗೋವಾಕ್ಕೆ ಹೋಗಿ ಕ್ಷೇತ್ರಕಾರ್ಯ ಮಾಡಿದ್ದರು.

ಪೋರ್ತುಗೀಸರು ತನ್ನ ಕೊರಳಿಗೆ ಬಿಗಿದ ಉರುಳಿನಿಂದಾಗಿ ಕೊಂಕಣಿ ಆಘಾತಕ್ಕೊಳಗಾಯಿತು. ಕೊಂಕಣಿ ಒಂದು ಸ್ವತಂತ್ರ ಭಾಷೆ ಹೌದೇ? ಅದು ಮರಾಠಿಯ ಉಪಭಾಷೆಯೇ? ಎಂಬ ಚರ್ಚೆ ಹಲವು ದಶಕಗಳ ಕಾಲ ನಡೆಯಿತು. ಸೆಬಾಸ್ಟಿಯಾನೊ ರೊಡೊಲ್ಫೊ ಡಲ್ಗಾಡೊ (೧೮೫೫ – ೧೯೨೨), ಜೂಲ್ಸ್‌ಬ್ಲಾಕ್(೧೮೫೦ – ೧೯೫೩), ವಾಮನ್ ವರ್ದೆ ವಾಲವಲೀಕರ್ (೧೮೭೭ –೧೯೪೬), ಜೋಸ್ ಪಿರೇರಾ, ಸುಮಿತ್ರ ಮಂಗೇಶ ಕತ್ರೆ (ಜನನ-೧೯೦೬), ಸುನೀತಿ ಕುಮಾರ ಚಟರ್ಜಿ (೧೮೯೦-೧೯೭೭)- ಹೀಗೆ ಹಲವರು ವಿದ್ವಾಂಸರು, ಭಾಷಾ ವಿಜ್ಞಾನಿಗಳು ಕೊಂಕಣಿ ಒಂದು ಸ್ವತಂತ್ರ ಭಾಷೆ ಎಂಬ ವಾದವನ್ನು ಸಮರ್ಥವಾಗಿ ಮಂಡಿಸಿದರು.

ಬಿಹಾರದ ತ್ರಿಹೋತ್ರ (ತಿರ್ಯಾತ್)ದಲ್ಲಿ ನೆಲೆಸಿದ್ದ ಸಾರಸ್ವತರು ಮಾಗಧಿ ಪ್ರಾಕೃತವನ್ನು ಬಳಸುತ್ತಿದ್ದರು. ಅಲ್ಲಿಂದ ಅವರು ಕೊಂಕಣ ಪ್ರದೇಶಕ್ಕೆ ವಲಸೆ ಬಂದ ಮೇಲೆ ಅವರ ಭಾಷೆ 'ಕೊಂಕಣಿ' ಎಂಬ ಹೆಸರು ಪಡೆಯಿತು. ಗೋವಿಂದ ಪೈಗಳು ಹೇಳುವಂತೆ, "ಮರಾಠಿ ಭಾಷೆ ಹುಟ್ಟಿದುದು ಸಂಸ್ಕೃತದ ಮಹಾರಾಷ್ಟ್ರ ಪ್ರಾಕೃತದಿಂದ; ಆದರೆ ಅದಕ್ಕಿಂತ ಎಷ್ಟೊ ಹಳೆಯದಾದ ಮಾಗಧೀ ಪ್ರಾಕೃತದಿಂದ ಕೊಂಕಣಿಯು ಜನ್ಮವೆತ್ತಿತು". (ಗೋವಿಂದ ಪೈ-೧೯೫೯.) "ಕೊಂಕಣಿ ಭಾಷೆಯನ್ನು ಪ್ರಾಕೃತವೆಂದು ಕರೆದ ವಿಭೇದದಿಂದ ರೂಪಾಂತರವಾದುದೆನ್ನುವುದಕ್ಕಿಂತ ಶೌರಸೇನೀ ಮತ್ತು ಮಹಾರಾಷ್ಟ್ರ ಪ್ರಾಕೃತಗಳ ಮಿಶ್ರರೂಪವಾಗಿದ್ದ 'ಆವಂತೀ' ವಿಭೇದದಿಂದ ರೂಪಾಂತರವಾದುದೆನ್ನುವುದು ಹೆಚ್ಚು ಸಮರ್ಪಕವಾಗಿದೆ." ಎಂದು 'ಕೊಂಕಣಿ ಮತ್ತು ಮರಾಠಿ ಇವುಗಳ ತುಲನಾತ್ಮಕ ವಿಮರ್ಶೆ ಹಾಗೂ ಸಾರಸ್ವತ ಬ್ರಾಹ್ಮಣರ ಪ್ರಾಚೀನ ಇತಿಹಾಸ' (೧೯೬೮) ಗ್ರಂಥದ ಲೇಖಕ ಬಸ್ತಿ ಪುಂಡಲೀಕ ವೆಂಕಟೇಶ ಶೆಣೈ ಅವರು ಅಭಿಪ್ರಾಯಪಟ್ಟಿದ್ದಾರೆ. ಸೆಬಾಸ್ಟಿನೊ ರೊಡೊಲ್ಫೊ ಡಲ್ಗಾಡೊ ಅವರ ಪ್ರಕಾರ ಕೊಂಕಣಿ ಪೈಶಾಚಿ ಪ್ರಾಕೃತದ ಪ್ರಭಾವಕ್ಕೊಳಗಾಗಿದೆ. ಪೋರ್ತುಗೀಸ್, ಮರಾಠಿ, ಕನ್ನಡ, ತುಳು, ಮಲಯಾಳಮ್, ಇಂಗ್ಲಿಷ್ ಭಾಷೆಗಳ ಒಡನಾಟದಿಂದ ಕೊಂಕಣಿ ತನ್ನ ಶಬ್ದ ಭಂಡಾರವನ್ನು ಬೆಳೆಸಿಕೊಂಡಿದೆ.

ಕೊಂಕಣಿ ಪೋರ್ತುಗೀಸರ ಪ್ರಹಾರದಿಂದ ನಿಧಾನವಾಗಿ ಚೇತರಿಸಿಕೊಂಡಿತು. 'ಕಡಿದರೂ ಚಿಗುರುವ ಅಶ್ವತ್ಥ'ದಂತೆ ಏಳು ಕವಲಾಗಿ ಹರಿಯಿತು, ಸಪ್ತಸ್ವರದಲ್ಲಿ ಅರಳಿತು. ಶಷ್ಟಿ, ಕಾರ್ವಾರಿ, ಬಾರ್ದೇಶೀ, ಮಂಗ್ಳೂರಿ, ಕೊಡಿಯಾಳಿ, ಅಂತ್ರೂಝಿ, ಕೇರಳಿ ಇವು ಕೊಂಕಣಿಯ ಏಳು ಉಪಭಾಷೆಗಳು. ಈ ಉಪಭಾಷೆಗಳಲ್ಲಿ ನಡೆದಿರುವ ಸಾಹಿತ್ಯಕೃಷಿಯ ಸ್ಥೂಲಪರಿಚಯ ಡಾ| ಒಲಿವಿನ್ಹೊ ಗೋಮ್ಸ್ ಅವರ 'ಕೊಂಕಣಿ ಒಂದು ಮೇಲ್ನೋಟ' ಲೇಖನದಲ್ಲಿದೆ.

ಸೇಡಿಯಾಪು ಕೃಷ್ಣ ಭಟ್ಟರ 'ಕೊಂಕಣ ಶಬ್ದಾರ್ಥ' ಲೇಖನದಲ್ಲಿ ಕೊಂಕಣ ಶಬ್ದವನ್ನು ಕುರಿತ ಅಪೂರ್ವ ಒಳನೋಟಗಳಿವೆ- "ಕೊಂಕ ಹಾಗೂ

ಕೋಂಕ ಎಂಬಿವು ಒಂದೇ ಶಬ್ದದ ಎರಡು ರೂಪಗಳು; ಅವೆರಡೂ ದ್ರಾವಿಡ ರೂಪಗಳೇ ಆಗಿವೆ; ಅವೆರಡರ ಅರ್ಥವೂ ಅಭಿನ್ನ; ಅವೆರಡಕ್ಕೂ ವಕ್ರ, ನಿಮ್ನೋನ್ನತ ಎಂಬ ವಿಶೇಷಾರ್ಥಗಳೂ, 'ಅಂಕು ಡೊಂಕಾದ ವಸ್ತು' ಮತ್ತು 'ಉಬ್ಬಿದ ವಸ್ತು' ಎಂಬ ನಾಮಾರ್ಥಗಳೂ ಇವೆ; ಅಷ್ಟು ಮಾತ್ರವಲ್ಲ, ನೇರವಾಗಿ ಗುಡ್ಡ ಎಂಬರ್ಥವೂ ಇದ್ದಿರುವಂತಿದೆ. 'ಕೇರ' ಎಂಬುದಕ್ಕೆ ಸಂಸ್ಕೃತದ ಲ-ಪ್ರತ್ಯಯ ಸೇರಿ ಕೇರಲ-ಕೇರಳವಾದಂತೆಯೇ, 'ಕೋಂಕ'ಕ್ಕೂ ಸೇರಿ, ಕೋಂಕಲ-ಕೋಂಕಳ, ಕೊನೆಗೆ 'ಕೋಂಕಣ' ಎಂದು ಪರಿಣಮಿಸಿದೆ. ಅದುವೇ 'ಕೊಂಕಣ' ಎಂದು ತದಭಿನ್ನವಾಗಿ ಕನ್ನಡದಲ್ಲಿ ರೂಢವಾಗಿದೆ. ಕೊಂಕಣ-ಕೋಂಕಣ ಎಂಬ ಶಬ್ದದ ಅರ್ಥವೂ ಕೇರಳ ಎಂಬ ಶಬ್ದದ ಮೂಲಾರ್ಥದಂತೆಯೇ 'ಪರ್ವತಪ್ರಾಯ' ಎಂದಾಗಿದೆ".

ಕೊಂಕಣಿ ಬಹುಲಿಪಿಯ ಭಾಷೆ. ಅದು ರೋಮನ್, ದೇವನಾಗರಿ, ಕನ್ನಡ, ಮಲೆಯಾಳಮ್ ಲಿಪಿಗಳನ್ನು ಬಳಸುತ್ತಿದೆ. ಕೊಂಕಣಿಯ ಬಹುಲಿಪಿಯ ಸಮಸ್ಯೆಯನ್ನು ಸುನೀತಿಕುಮಾರ ಚಟರ್ಜಿ, ಗೌರೀಶ ಕಾಯ್ಕಿಣಿ ಮತ್ತು ಡಾ। ವಿಲಿಯಂ ಮಾಡ್ತ ಅವರು ಚರ್ಚಿಸಿದ್ದಾರೆ. ಕೊಂಕಣಿಗರಲ್ಲಿ ಬಹುಸಂಖ್ಯಾಕರು ಕರ್ನಾಟಕದಲ್ಲಿರುವುದರಿಂದ ಕನ್ನಡ ಲಿಪಿಯನ್ನು ಕೈಬಿಡುವಂತಿಲ್ಲ. ದೇವನಾಗರಿ ಮತ್ತು ಕನ್ನಡ ಈ ದ್ವಿಲಿಪಿಗಳ ಭಾಷೆಯಾಗಿ ಕೊಂಕಣಿಯನ್ನು ಬೆಳೆಸಬೇಕು. ಇದು ಒತ್ತಾಯ ಹೇರದೆ, ನಿಧಾನವಾಗಿ ಆಗಬೇಕಾದ ಕೆಲಸ.

ಕೊಂಕಣಿ ತನ್ನ ಅಸ್ತಿತ್ವಕ್ಕಾಗಿ ನಡೆಸಿದ ಹೋರಾಟ ಮತ್ತು ಅದರ ಇಂದಿನ ಸ್ಥಿತಿ-ಗತಿಯ ವಿವರಗಳು ಕೃಷ್ಣಾನಂದ ಕಾಮತ್, ನಾ. ಡಿ'ಸೋಜ ಮತ್ತು ಕೆ. ಕೆ. ಪೈ ಅವರ ಲೇಖನಗಳಲ್ಲಿವೆ.

ಜೋಸ್ ಪಿರೇರಾ, ಡಾ। ಜ್ಯೋತ್ಸ್ನಾ ಕಾಮತ್ ಮತ್ತು ಕ್ಯಾಥರಿನ್ ರಾಡ್ರಿಗಸ್ ಅವರ ಲೇಖನಗಳಲ್ಲಿ ಕೊಂಕಣಿ ಜನಪದ ಸಾಹಿತ್ಯದ ಮೇಲ್ನೋಟ ಕಾಣಸುತ್ತದೆ. ತುಳು ಜಾನಪದ ಸಂಗ್ರಹ, ಸಂಶೋಧನೆಯ ಕೆಲಸ, ಪ್ರಮಾಣ ಮತ್ತು ಗುಣಮಟ್ಟಗಳಲ್ಲಿ ತೃಪ್ತಿಕರವಾಗಿ ಮುನ್ನಡೆಯುತ್ತಿದೆ. ಕೊಂಕಣಿ ಜಾನಪದ ಕ್ಷೇತ್ರದಲ್ಲಿ ಆಗಿರುವ ಕೆಲಸ ಏನೇನೂ ಸಾಲದು.

ಕೊಂಕಣಿ ರಂಗಭೂಮಿ ಸಮೃದ್ಧವಾಗಿದೆ. ಉಡುಪಿಯ ರಂಗಭೂಮಿ ಏರ್ಪಡಿಸುತ್ತಿರುವ ಡಾ। ಟಿ. ಎಂ. ಎ. ಪೈ ಕೊಂಕಣಿ ನಾಟಕ ಸ್ಪರ್ಧೆಯಲ್ಲಿ ವಿವಿಧ ರಾಜ್ಯಗಳ ಹತ್ತಾರು ಕೊಂಕಣಿ ನಾಟಕ ಸಂಘಗಳು ಉತ್ಸಾಹದಿಂದ ಭಾಗವಹಿಸುತ್ತಿವೆ. ಬಿ. ಎಸ್. ಬಾಳಿಗಾ ಮತ್ತು ಅಲ್ಫಾನ್ಸೊ ಡೆಕೋಸ್ತಾ ಅವರು ಬರೆದಿರುವ ಕೊಂಕಣಿ ನಾಟಕ ಸ್ಪರ್ಧೆಯ ಸಮೀಕ್ಷೆಗಳು ಕೊಂಕಣಿ ರಂಗಭೂಮಿಯ ಸ್ಥೂಲ ಪರಿಚಯ ನೀಡುತ್ತವೆ.

ಡಾ। ವಿಲಿಯಂ ಮಾಡ್ತ ಮತ್ತು ಎಂ. ವಿ. ಕಾಮತರು ಕೊಂಕಣಿ ಭಾಷೆಯ ಅಭಿವೃದ್ಧಿ ಮತ್ತು ಭವಿಷ್ಯದ ಕುರಿತು ಬರೆದಿದ್ದಾರೆ. ಇಂಗ್ಲಿಷ್‌ನ ಪ್ರಭಾವದ ಕುರಿತು ಎಂ. ವಿ. ಕಾಮತರು ನೀಡಿರುವ ಎಚ್ಚರಿಕೆಯನ್ನು ಕೊಂಕಣಿಗರೆಲ್ಲರೂ ಗಂಭೀರವಾಗಿ ಪರಿಗಣಿಸಬೇಕು-"ಕೊಂಕಣಿಗೆ ಪಂಥಾಹ್ವಾನ ನೀಡುತ್ತಿರುವುದು ಮರಾಠಿ, ಕನ್ನಡ, ಮಲಯಾಳಮ್‌ಗಳಲ್ಲ; ಇಂಗ್ಲಿಷ್, ಕೊಂಕಣಿಗೆ ಪಂಥಾಹ್ವಾನ ನೀಡುತ್ತಿದೆ. ಮರಾಠಿ, ಹಿಂದೀ, ಬಂಗಾಳಿಗಳಂಥ

ಬೆಳೆದ ಭಾಷೆಗಳಿಗೂ ಇಂಗ್ಲಿಷ್ ಪಂಥಾಹ್ವಾನ ನೀಡುತ್ತಿದೆ. ಕಾರಣ ಸ್ಪಷ್ಟವಾಗಿದೆ. ಇಂಗ್ಲಿಷ್ ಬೃಹದಾಕಾರವಾಗಿ ಬೆಳೆದು ಅಂತಾರಾಷ್ಟ್ರೀಯ ಭಾಷೆಯಾಗಿದೆ, ಅದ್ಭುತ ಶಬ್ದಭಂಡಾರವನ್ನು ಪಡೆದಿದೆ. ಅದು ವ್ಯಾಪಾರ ವಾಣಿಜ್ಯಗಳ ಭಾಷೆಯಾಗಿದೆ. ಅದರ ಎದುರು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವುದು ಭಾರತದ ಬೆಳೆದ ಭಾಷೆಗಳಿಗೂ ಕಷ್ಟವಾಗುತ್ತದೆ. ಮಧ್ಯಮ ವರ್ಗದವರು ತಮ್ಮ ಮಕ್ಕಳನ್ನು ಇಂಗ್ಲಿಷ್ ಮಾಧ್ಯಮ ಶಾಲೆಗಳಿಗೆ ಕಳುಹಿಸುತ್ತಿದ್ದಾರೆ. ಹೀಗಿರುವಾಗ ಕೊಂಕಣಿ ಯಂಥ ವರ್ಧಮಾನ ಭಾಷೆ ತಾಯ್ನುಡಿಯಾಗಿರುವ ಮಕ್ಕಳ ಗತಿಯೇನು?''

ಇಪ್ಪತ್ತನೆಯ ಶತಮಾನದ ಆರಂಭದಲ್ಲಿ ಕೊಂಕಣಿ ಸಾಹಿತ್ಯದ ಸ್ಥಿತಿ ಚೆನ್ನಾಗಿರಲಿಲ್ಲ. ಎಂ. ಗೋವಿಂದ ಪೈಗಳು ತನ್ನ ಕನ್ನಡ ಸಾಹಿತ್ಯ ಸಮ್ಮೇಳನ ಅಧ್ಯಕ್ಷ ಭಾಷಣದಲ್ಲಿ (೧೯೫೦), "ನಾನು ಎರಡು ತಾಯಂದಿರ ಕೂಸು. ಕೊಂಕಣಿ ನನ್ನ ಹೆತ್ತ ತಾಯಿ. ಕನ್ನಡ ನನ್ನ ಸಾಕು ತಾಯಿ. ನನ್ನನ್ನು ಸಾಕಿದ ದಾಯಿ...ಆದರೆ ತಾಯಿಯ ಮೊಲೆಯಲ್ಲಿ ಹಾಲಿಲ್ಲ, ಕೊಂಕಣಿಯಲ್ಲಿ ಸಾಹಿತ್ಯವಿಲ್ಲ. ಆಕೆ ಆ ಬಗ್ಗೆ ನನ್ನನ್ನು ಕನ್ನಡದ ಮೊರೆಯಲ್ಲಿ ಹಾಕಿದಳು." ಎಂಬುದಾಗಿ ಬರೆದಿದ್ದಾರೆ. ಗೋವಾ ಸ್ವಾತಂತ್ರ್ಯ ಚಳವಳಿಯ ಜತೆಯಲ್ಲಿ ಕೊಂಕಣಿ ಸಾಹಿತ್ಯ ಚಳವಳಿಯೂ ತೀವ್ರಗೊಂಡಿತು. ೧೯೩೯ರಲ್ಲಿ ಸ್ಥಾಪನೆಗೊಂಡ ಅಖಿಲ ಭಾರತ ಕೊಂಕಣಿ ಸಾಹಿತ್ಯ ಪರಿಷತ್ತು ಇದುವರೆಗೆ ಇಪ್ಪತ್ತು ಸಾಹಿತ್ಯ ಸಮ್ಮೇಳನಗಳನ್ನು ನಡೆಸಿದೆ. ಇವುಗಳಲ್ಲಿ ಏಳು ಸಮ್ಮೇಳನಗಳು ಕರ್ನಾಟಕದ ಕಾರವಾರ, ಉಡುಪಿ, ಮಣಿಪಾಲ, ಮಂಗಳೂರು, ಬೆಂಗಳೂರುಗಳಲ್ಲಿ ಜರಗಿವೆ. ಈ ವರ್ಷ (೧೯೯೫) ಮಂಗಳೂರಿನಲ್ಲಿ ವಿಶ್ವ ಕೊಂಕಣಿ ಸಮ್ಮೇಳನ ನಡೆಯಲಿದೆ. ಕನ್ನಡ ಲಿಪಿಯಲ್ಲಿ ಹದಿನೈದು ಕೊಂಕಣಿ ಪತ್ರಿಕೆಗಳು ಪ್ರಕಟವಾಗುತ್ತಿವೆ. ಗೋವಾ ಸ್ವಾತಂತ್ರ್ಯ ಹೋರಾಟಗಾರರ ಕನಸು ೧೯೬೧ರಲ್ಲಿ ನನಸಾಯಿತು. ಡಿಸೆಂಬರ್ ೨೧, ೧೯೬೧ ರಂದು ಭಾರತದ ಸೈನ್ಯ ಗೋವಾವನ್ನು ಪೋರ್ತುಗೀಸ್ ವಸಾಹತುಶಾಹಿ ಆಳ್ವಿಕೆಯಿಂದ ಮುಕ್ತಗೊಳಿಸಿತು. ೧೯೭೫ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಕೊಂಕಣಿಗೆ ಮನ್ನಣೆ ನೀಡಿದ್ದು ಕೊಂಕಣಿಯ ಇತಿಹಾಸದ ಒಂದು ಮಹತ್ವದ ಘಟನೆ. ೧೯೯೨ರಲ್ಲಿ ನೇಪಾಳಿ, ಮಣಿಪುರಿಗಳ ಜತೆಯಲ್ಲಿ ಕೊಂಕಣಿಯನ್ನು ಭಾರತ ಸಂವಿಧಾನ ಎಂಟನೆಯ ಅನುಸೂಚಿಯಲ್ಲಿ, ರಾಷ್ಟ್ರಭಾಷೆಗಳಲ್ಲಿ ಒಂದೆಂದು ನಮೂದಿಸಲಾಯಿತು.

ವಿ. ಆರ್. ವರ್ದೆ ವಾಲವಲೀಕರ್ (ಶೆಣೈ ಗೊಂಯೆಂ ಬಾಬ್ – ೧೮೭೭–೧೯೪೬) ಆಧುನಿಕ ಕೊಂಕಣಿ ಸಾಹಿತ್ಯದ ಕಣ್ವಋಷಿಯಾಗಿದ್ದಾರೆ. ಕಾವ್ಯಕ್ಷೇತ್ರದಲ್ಲಿ ಆರ್. ವಿ. ಪಂಡಿತ್, ಮನೋಹರ್ ಸರ್‌ದೇಸಾಯಿ, ಬಾಕೀಬಾಬ್ ಬೋರ್ಕರ್, ಜೆ. ಬಿ. ಮೊರಾಯಸ್, ಪ್ರಕಾಶ್ ಪಡ್‌ಗಾಂವ್ ಕರ್, ಸಿ. ಎಫ್. ಡಿಕೊಸ್ತಾ, ರಮೇಶ್ ವೆಲುಸ್‌ಕರ್, ನಾಗೇಶ್ ಕರ್ಮಲಿ, ಕಾದಂಬರಿಯಲ್ಲಿ ದಾಮೋದರ ಮಾವ್‌ಜೊ, ನಾಟಕದಲ್ಲಿ ಪುಂಡಲೀಕ ನಾರಾಯಣ ನಾಯಕ್, ಸಣ್ಣಕತೆಯಲ್ಲಿ ಚಂದ್ರಕಾಂತ ಕೇಣಿ, ಮೀನಾ ಕಾಕೋಡ್ಕರ್, ಮಹಾಬಲೇಶ್ವರ ಸಯಿಲ್, ಗೋಕುಲದಾಸ್ ಪ್ರಭು, ಗದ್ಯದಲ್ಲಿ ರವೀಂದ್ರ ಕೇಳೇಕರ್, ಲಕ್ಷ್ಮಣರಾವ್ ಸರ್‌ದೇಸಾಯಿ, ಹಾಸ್ಯದಲ್ಲಿ ದತ್ತಾರಾಮ್ ಸುಕ್ತಂಕರ್– ಇವರೆಲ್ಲ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಪಡೆದಿದ್ದಾರೆ.

ಎ. ಟಿ. ಲೋಬೊ, ಎನ್. ಡಿ. ಸೋಂದೆ, ಜೆ. ಎಸ್. ಆಲ್ವಾರಿಸ್, ಜೆ. ಬಿ. ಸಿಕ್ವೇರಾ, ಎಡ್ವಿನ್ ಜೆ. ಎಫ್. ಡಿಸೋಜ, ಫಾ। ಲಿಯೊ ಕುಟಿನ್ಹಾ, ಒಲಿವಿನ್ಹೊ ಗೋಮ್ಸ್, ಪಾಂಡುರಂಗ ಭಾಂಗಿ, ಲ್ಯಾನ್ಸಿ ಪಿಂಟೊ ನಾಯಕ್, ಗ್ಲೇಡಿಸ್ ರೇಗೊ ಇವರೆಲ್ಲ ವಿಮರ್ಶಕರ ಮನ್ನಣೆ ಗಳಿಸಿದ್ದಾರೆ. ಕೊಂಕಣಿ ಸಾಹಿತ್ಯದ ಇತ್ತೀಚಿಗಿನ ಪ್ರವೃತ್ತಿಗಳನ್ನು ಕುರಿತ ಲೇಖನಗಳನ್ನು ಈ ಗ್ರಂಥಕ್ಕಾಗಿ ಆಯ್ಕೆಮಾಡುವುದಾಗಲಿ, ಬರೆಸುವುದಾಗಲಿ, ಸಾಧ್ಯವಾಗಲಿಲ್ಲ. ಕೊಂಕಣಿ ವಿಮರ್ಶೆ ಇನ್ನೂ ವರ್ಧಮಾನದಲ್ಲಿರುವುದು ಇದಕ್ಕೆ ಕಾರಣ. ಈ ಕೊರತೆಯನ್ನು ಸ್ವಲ್ಪಮಟ್ಟಿಗೆ ನೀಗಿಸಲಿಕ್ಕಾಗಿ ಕೊಂಕಣಿ ಸಾಹಿತ್ಯ–ಸಾಹಿತಿಗಳನ್ನು ಕುರಿತ ವಿಸ್ತೃತ ಅನುಬಂಧವೊಂದನ್ನು ಈ ಗ್ರಂಥದಲ್ಲಿ ನೀಡಿದ್ದೇವೆ.

ಗೋವಾದಲ್ಲಿ ಪ್ರಕಟವಾಗಿರುವ, ಶ್ರೀಪಾದ ರಘುನಾಥ ದೇಸಾಯಿ ಅವರು ಸಂಪಾದಿಸಿರುವ, ಮೂರು ಸಂಪುಟಗಳ 'ಕೊಂಕಣಿ ಶಬ್ದಕೋಶ್' (೧೯೮೦–೧೯೯೦), ಕೇರಳದಲ್ಲಿ ಪ್ರಕಟವಾಗಿರುವ ಡಾ। ಎಲ್. ಸುನೀತಾ ಬ್ಯಾ ಅವರು ಸಂಪಾದಿಸಿದ 'ಕೊಂಕಣಿ ಡಿಕ್ಷನರಿ' (೧೯೮೭) – ಇವು ಇತ್ತೀಚಿಗಿನ ಕೊಂಕಣಿ ನಿಘಂಟುಗಳು. ಕೊಂಕಣಿಯ ಏಳು ಪ್ರಾದೇಶಿಕ– ಸಾಮಾಜಿಕ ಉಪಭಾಷೆಗಳ ವಿಸ್ತೃತ ಕ್ಷೇತ್ರಕಾರ್ಯ ಸಮೀಕ್ಷೆ ನಡೆಸಿ, 'ತುಳು ನಿಘಂಟು'ವಿನ ಮಾದರಿಯ ಕೊಂಕಣಿ ನಿಘಂಟೊಂದನ್ನು ತಯಾರಿಸುವ ಯೋಜನೆಯನ್ನು ಆದಷ್ಟು ಬೇಗನೆ ಆರಂಭಿಸಬೇಕಾಗಿದೆ. ಈ ನಿಘಂಟಿನಲ್ಲಿ ಕೊಂಕಣಿ ಶಬ್ದಗಳಿಗೆ ಹಿಂದೀ, ಕನ್ನಡ, ಮಲಯಾಳಮ್ ಮತ್ತು ಇಂಗ್ಲಿಷ್‌ಗಳಲ್ಲಿ ಅರ್ಥವನ್ನು ನೀಡಬೇಕು.

ಅರವಿಂದ ಬ್ಹೆಂಬ್ರೊ ಅವರ ಒಂದು ಕಥಾಸಂಕಲನದ ಹೆಸರು– 'ಪಣಜಿ ಆತಾಂ ಮಾತಾರಿ ಜಾಲ್ಯಾ' (ಪಣಜಿ ಈಗ ಮುದುಕಿಯಾಗಿದ್ದಾಳೆ). ಪಣಜಿ ಮುದುಕಿಯಾಗಿರಬಹುದು, ಆದರೆ ಕೊಂಕಣಿ ಯೌವನದ ಹೊಸ್ತಿಲಲ್ಲಿ ಕನಸು ಕಾಣುತ್ತಿದ್ದಾಳೆ. ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಹೇಳುವಂತೆ, "ಆಲಿಸುವುದಕ್ಕೆ ಹಿತಕರವಾದ, ಸ್ವತಂತ್ರ ಆಧುನಿಕ ಭಾಷೆಯಾದ ಕೊಂಕಣಿ ಭಾರತೀಯ ಭಾಷೆಗಳ ನಡುವಣ 'ಸಿಂಡ್ರೆಲ್ಲಾ' ಎನ್ನಬಹುದು." ಈ ಸಿಂಡ್ರೆಲ್ಲಾ ಈಗ ಕಾಮನ ಬಿಲ್ಲಿನ ಏಳು ಬಣ್ಣಗಳ ಉಡುಪು ಧರಿಸಿಕೊಂಡು ಕಂಗೊಳಿಸು ತ್ತಿದ್ದಾಳೆ.

೨

ಕೊಂಕಣಿ ಸಾಹಿತ್ಯವನ್ನು ಅಧ್ಯಯನ ಮಾಡಲು ನನಗೆ ಪ್ರೇರಣೆ ನೀಡಿದವರು ಶ್ರೀ ಸಂತೋಷಕುಮಾರ ಗುಲ್ವಾಡಿ. ೧೯೮೯ರ ಮಣಿಪಾಲ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಕೊಂಕಣಿಯನ್ನು ಕುರಿತ ಸುನೀತಿ ಕುಮಾರ್ ಚಟರ್ಜಿಯವರ ಲೇಖನವನ್ನು ಇಂಗ್ಲಿಷಿನಿಂದ ಕನ್ನಡಕ್ಕೆ ಭಾಷಾಂತರಿಸಲು ಗುಲ್ವಾಡಿಯವರು ನನ್ನನ್ನು ವಿನಂತಿಸಿದರು. ಅನಂತರ ಕೊಂಕಣಿಯನ್ನು ಕುರಿತ ನನ್ನ ಕುತೂಹಲ ಹೆಚ್ಚಿತು. ಈ ಗ್ರಂಥಕ್ಕೆ ಮುನ್ನುಡಿ ಬರೆದಿರುವ ಮಿತ್ರ ಗುಲ್ವಾಡಿಯವರಿಗೆ ನಾನು ಋಣಿಯಾಗಿದ್ದೇನೆ.

ಮೈಸೂರಿನ ಕಾವ್ಯಾಲಯದವರು ಗೋವಿಂದ ಪೈಗಳ ಒಂದು ಲೇಖನ ಮತ್ತು ಎರಡು ಕವನಗಳನ್ನು ಪ್ರಕಟಿಸಲು ಅನುಮತಿ ನೀಡಿದ್ದಾರೆ. ಸೇಡಿಯಾಪು ಕೃಷ್ಣಭಟ್ಟ, ಡಾ। ಒಲಿವಿನ್ಹೋ ಗೋಮ್ಸ್, ಕೃಷ್ಣಾನಂದ ಕಾಮತ್,

ನಾ. ಡಿ'ಸೋಜ, ಗೌರೀಶ ಕಾಯ್ಕಿಣಿ, ಕೆ. ಕೆ. ಪೈ, ಡಾ। ವಿಲಿಯಂ ಮಾಡ್ತ, ಎಂ.ವಿ. ಕಾಮತ್, ಬಿ. ವಿ. ಬಾಳಿಗಾ, ಡಾ। ಜ್ಯೋತ್ಸ್ನಾ ಕಾಮತ್, ಕ್ಯಾಥರಿನ್ ರಾಡ್ರಿಗಸ್, ಬಿ. ಎಸ್. ಬಾಳಿಗಾ ಮತ್ತು ಅಲ್ಫಾನ್ಸೋ ಡೆಕೋಸ್ತಾ ತಮ್ಮ ಲೇಖನಗಳನ್ನು ನೀಡಿದ್ದಾರೆ. ಡಾ। ಪದ್ಮನಾಭ ಕೇಕುಣ್ಣಾಯ ಮತ್ತು ಶಾಂಭವಿ ಉಪ್ಪಿನಕೋಟೆ ಅವರು ಎರಡು ಲೇಖನಗಳನ್ನು ಭಾಷಾಂತರಿಸಿದ್ದಾರೆ. ಇವರೆಲ್ಲರಿಗೆ ನನ್ನ ಕೃತಜ್ಞತೆಗಳು.

ಗೋವಾ ವಿಶ್ವವಿದ್ಯಾನಿಲಯ ಸಮಾಜಶಾಸ್ತ್ರ ವಿಭಾಗದ ಪ್ರಾಧ್ಯಾಪಕ ಡಾ। ವಿಲ್ಲಿ ಡಿ'ಸಿಲ್ವ, ಪಣಜಿ ಆಕಾಶವಾಣಿಯ ಅಧಿಕಾರಿ ಶ್ರೀಮತಿ ಜಯಶ್ರೀ ಶ್ಯಾನುಭಾಗ- ಸಲಹೆ ಸಹಕಾರ ನೀಡಿದ್ದಾರೆ. ಉಡುಪಿ ರಂಗಭೂಮಿಯ ಕಾರ್ಯದರ್ಶಿ ಶ್ರೀ ಆನಂದ ಗಾಣಿಗ, ಕೊಂಕಣಿ ಭಾಷಾ ಮಂಡಳದ ಅಧ್ಯಕ್ಷ ಶ್ರೀ ಬಸ್ತಿ ವಾಮನ ಶೆಣೈ, ಮಂಗಳೂರಿನ 'ರಾಕ್ಣೊ' ಪತ್ರಿಕೆಯ ಶ್ರೀ ಎಡ್ವಿನ್, ಜೆ. ಎಫ್. ಡಿ'ಸೋಜ, ಗೋವಾ ವಿಶ್ವವಿದ್ಯಾನಿಲಯದ ಕೊಂಕಣಿ ವಿಭಾಗದ ಮುಖ್ಯಸ್ಥ ಡಾ। ಒಲಿವಿನ್ಹೊ ಗೋಮ್ಸ್, ಉಡುಪಿಯ ಶ್ರೀ ಅಲ್ಫಾನ್ಸೋ ಡೆಕೋಸ್ತಾ, ಶ್ರೀ ಕೊಚ್ಚಿಕಾರ್ ರಘುರಾಮ ಪೈ, ಮಂಗಳೂರಿನ ಶ್ರೀ ನಾಗರಾಜ ರಾವ್ ಜವಳಿ ಇವರೆಲ್ಲ ಈ ಪುಸ್ತಕದ ಅನುಬಂಧಕ್ಕೆ ಬೇಕಾದ ಮಾಹಿತಿಗಳನ್ನು ಒದಗಿಸಿದ್ದಾರೆ. ಕೊಂಕಣಿ ಲೇಖಕರ- ಪುಸ್ತಕಗಳನ್ನು ಬರೆಯುವಾಗ ನಾನು ಲಿಪ್ಯಂತರ ಸಮಸ್ಯೆಯನ್ನು ಎದುರಿಸಬೇಕಾಯಿತು. ಶ್ರೀ ಎಂ. ಮುಕುಂದ ಪ್ರಭು, ಶ್ರೀ ಎಡ್ವಿನ್. ಜೆ. ಎಫ್. ಡಿ'ಸೋಜ, ಕ್ಯಾಥರಿನ್ ರಾಡ್ರಿಗಸ್ ಮತ್ತು ಅಲ್ಫಾನ್ಸೋ ಡೆಕೊಸ್ತಾ ಲಿಪ್ಯಂತರ ಮತ್ತು ಪ್ರೂಫ್ ತಿದ್ದುವುದರಲ್ಲಿ ಸಹಕಾರ ನೀಡಿದ್ದಾರೆ ಇವರೆಲ್ಲರ ಉಪಕಾರವನ್ನು ನಾನು ಮರೆಯಲಾರೆ.

ಈ ಪುಸ್ತಕ ಪ್ರಕಾಶಕರಾದ ಗೋವಿಂದ ಪೈ ಸಂಶೋಧನ ಕೇಂದ್ರದ ನಿರ್ದೇಶಕ ಪ್ರೊ। ಹೆರಂಜೆ ಕೃಷ್ಣ ಭಟ್ಟ, ಮಾಜಿ ನಿರ್ದೇಶಕ ಪ್ರೊ। ಕು. ಶಿ. ಹರಿದಾಸ ಭಟ್ಟ, ಮಣಿಪಾಲದ ಡಾ। ಟಿ. ಎಂ. ಎ. ಪೈ ಕೊಂಕಣಿ ಪ್ರತಿಷ್ಠಾನದ ಶ್ರೀ ಕೆ. ಕೆ. ಪೈ ಮತ್ತು ಶ್ರೀ ಎಚ್. ವಿ. ಕಾಮತರಿಗೆ ನಾನು ಋಣಿಯಾಗಿದ್ದೇನೆ.

# ಮುನ್ನುಡಿ

## ಕೊಂಕಣಿ ಕಣ್ಣುಮುಚ್ಚಾಲೆಯಾಟ

**- ಸಂತೋಷಕುಮಾರ ಗುಲ್ವಾಡಿ**

ಇಂದು ಕೊಂಕಣಿ ಭಾಷೆಗೆ ಅದರ ಇತಿಹಾಸದಲ್ಲೇ ಗ್ರಹಣ ಕಾಲ ಕಳೆದು ಮೊತ್ತ ಮೊದಲ ಬಾರಿ ರಾಜಾಶ್ರಯ ದೊರೆತು, ಒಳ್ಳೆಯ ದೆಸೆ ಆರಂಭವಾಗಿರುವಂತೆ ಕಾಣುತ್ತದೆ. ಅಂಥ ಸಂಧಿಯಲ್ಲಿ ಉಡುಪಿಯ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರದವರು 'ಕೊಂಕಣಿ – ಭಾಷೆ ಸಾಹಿತ್ಯ' ಎಂಬ ಈ ಕಿರು ಹೊತ್ತಗೆಯನ್ನು ಪ್ರಕಟಿಸುತ್ತಿರುವುದು ಅತ್ಯಂತ ಸಮಯೋಚಿತ, ಶ್ಲಾಘನೀಯ, ಅಭಿನಂದನೀಯ.

ಹಿರಿಯರಾದ ಎಂ. ಗೋವಿಂದ ಪೈ, ಪ್ರೊ। ಸುನೀತಿಕುಮಾರ ಚಟರ್ಜಿ, ಸೇಡಿಯಾಪು ಕೃಷ್ಣ ಭಟ್ಟ, ಡಾ। ಒಲಿವಿನ್ಹೊ ಗೋಮ್ಸ್, ಡಾ। ಕೃಷ್ಣಾನಂದ ಕಾಮತ್, ನಾ. ಡಿಸೋಜ, ಗೌರೀಶ ಕಾಯ್ಕಿಣಿ, ಕೆ.ಕೆ. ಪೈ, ಎಂ.ವಿ. ಕಾಮತ್, ಜೋಸ್ ಪಿರೇರಾ, ಡಾ। ಜ್ಯೋತ್ನಾ ಕಾಮತ್, ಕ್ಯಾಥರೀನ್ ರಾಡ್ರಿಗಸ್, ಬಿ.ಎಸ್. ಬಾಳಿಗಾ ಮತ್ತು ಅಲ್ಫಾನ್ಸೊ ಡಿಕೋಸ್ತಾ ಮೊದಲಾದ ವಿದ್ವಾಂಸರು, ಬರಹಗಾರರು ಭಾಷಾಭಿಮಾನಿಗಳ ಲೇಖನಗಳಿಂದ ಕೂಡಿದ ಈ ಕಿರು ಹೊತ್ತಗೆಗೆ ವಾಸ್ತವಿಕವಾಗಿ ಯಾರ ಮುನ್ನುಡಿಯೂ ಬೇಕಾಗಿಲ್ಲ. ಬಹುಶಃ ನಾನೂ ಇದರಲ್ಲಿ ಒಂದು ಲೇಖನ ಬರೆಯಲು ಒಪ್ಪಿ, ಅದನ್ನು ಸಮಯಕ್ಕೆ ಸರಿಯಾಗಿ ಕೊಡಲಾರದ ಅಪರಾಧಕ್ಕೆ ತಪ್ಪು ಕಾಣಿಕೆಯಾಗಿ ಮುನ್ನುಡಿ ಬರೆಸುವ ಗೌರವದ ಪ್ರಾಯಶ್ಚಿತ್ತವನ್ನು ಮಿತ್ರರಾದ ಶ್ರೀ ಕೃಷ್ಣ ಭಟ್ಟರು ಹಾಗೂ ಶ್ರೀ ಮುರಳೀಧರ ಉಪಾಧ್ಯ, ಹಿರಿಯಡಕ ಇವರು ನನಗೆ ವಿಧಿಸಿದ್ದಾರೆ ಎಂಬ ಗುಮಾನಿ ಇದೆ. ಅದನ್ನು ಸಂತೋಷದಿಂದ ಅನುಭವಿಸುತ್ತೇನೆ.

ಸಹ್ಯಾದ್ರಿ ಖಂಡದಲ್ಲಿ ಈ ಪರಶುರಾಮ ಸೃಷ್ಟಿಯ ವರ್ಣನೆ ಮಾಡುವಾಗ ಕೊಂಕಣದ ಪ್ರಸ್ತಾಪ ಬರುತ್ತದೆ–

**ಕೇರಳಾಶ್ಚ ತುಲಂಗಾಶ್ಚ ತಥಾ ಸೌರಾಷ್ಟ್ರವಾಸಿನಃ ।**
**ಕೊಂಕಣಾಃ ಕರಹಾಟಾಶ್ಚ ಕರಾನಾಟಾಶ್ಚ ಬರ್ಬರಾಃ ॥**

ಸೂರ್ಪಾರಕ ಅಂದರೆ ಗೆರಸೆಯಾಕಾರದ ಕೊಂಕಣ ಪಟ್ಟಿ. ತಪತಿ ಅಥವಾ ನರ್ಮದಾ ನದಿಯಿಂದ ಕನ್ಯಾಕುಮಾರಿಯ ವರೆಗೆ ಹಬ್ಬಿದ ಪರಶುರಾಮ ಸೃಷ್ಟಿಯು ೧೦೦ ಯೋಜನ ಉದ್ದ ಮತ್ತು ಮೂರು ಯೋಜನ ಅಗಲ (೮೦೦ ಮೈಲಿ 24 ಮೈಲಿ) ಪ್ರದೇಶ. ಚೀನೀ ಪ್ರವಾಸಿ ಹುಯೇನ್

ತ್ಸಾಂಗ್ ಉಲ್ಲೇಖಿಸಿದ ಕೊಂಕಣ ಪ್ರದೇಶಗಳಲ್ಲಿ ಬನವಾಸಿ, ಬೆಳಗಾವಿ, ಧಾರವಾಡಗಳೂ ಸೇರಿದ್ದುವು. ವರಾಹಮಿಹಿರನ 'ಬೃಹತ್ ಸಂಹಿತೆ', ಕಲ್ಹಣನ 'ರಾಜತರಂಗಿಣಿ' ಗ್ರಂಥಗಳಲ್ಲಿ, ಚಾಲುಕ್ಯರ ಶಿಲಾಲೇಖಗಳಲ್ಲಿ, ಪೆರಿಪ್ಲಸ್, ಪ್ಲಾಯ್ನಿ, ಟಾಲೆಮಿ, ಸ್ಟ್ರೆಬೊ, ಅಲ್‌ಬರೂನಿ ಮೊದಲಾದವರ ಉಲ್ಲೇಖದಲ್ಲಿ ಕೊಂಕಣದ ಪ್ರಸ್ತಾವ ಬಂದಿದೆ. ಮುಂಬಯಿಯ ಉತ್ತರಕ್ಕಿರುವ ಠಾಣೆ, ದಕ್ಷಿಣಕ್ಕಿರುವ ಕುಲಾಬಾ, ರತ್ನಗಿರಿ ಮತ್ತು ಗೋಮಂತ ಈ ನಾಲ್ಕು ಜಿಲ್ಲೆಗಳೇ ಅಚ್ಚ ಕೊಂಕಣ ಪ್ರದೇಶಗಳು. ಉತ್ತರಕ್ಕೆ ವೈತರಣೆ ಅಥವಾ ದಂತುರಾ, ಮತ್ತು ದಕ್ಷಿಣಕ್ಕೆ ಆಲಿಶಾ ಅಥವಾ ಕಾಳಿ ನದಿಯೇ ಗಡಿಗಳು.

ಇತಿಹಾಸದಲ್ಲಿ ಕೊಂಕಣ ಎಂದೂ ಒಂದು ರಾಜ್ಯ ಆಗಿರಲಿಲ್ಲ. ಕ್ರಿಸ್ತ ಪೂರ್ವಕಾಲದಿಂದ ಮೌರ್ಯರ ಆಡಳಿತದಲ್ಲಿದ್ದ ಕೊಂಕಣ ಏಳನೆಯ ಶತಮಾನ ದಲ್ಲಿ ಚಾಲುಕ್ಯ ಪುಲಕೇಶಿಯ ವಶಕ್ಕೆ ಬಂತು. ಅಲ್ಲಿಂದ ದೇವಗಿರಿ ಪತನದ ವರೆಗೆ ೧೨೪೨ರ ತನಕ ನಡುವೆ ಸುಮಾರು ೪೫೦ ವರ್ಷ ಬಿಟ್ಟರೆ ಕೊಂಕಣ ವನ್ನು ಕನ್ನಡದ ಕದಂಬ, ರಾಷ್ಟ್ರಕೂಟ, ಯಾದವ ಅರಸರೇ ಆಳಿದರು. ಅನಂತರ ಅದನ್ನು ಮುಸಲ್ಮಾನವರು ಗೆದ್ದುಕೊಂಡರು. ವಿಜಯನಗರ ಸಾಮ್ರಾಜ್ಯ ಒಡೆದು ಐದು ಹೋಳಾಗಿ ಗೋಮಂತಕ ಅಥವಾ ಗೋವೆ, ಆದಿಲ್‌ಷಾಹನ ವಶಕ್ಕೆ ಹೋಯಿತು. ಆತನಿಂದ ಪೋರ್ಚುಗೀಸ್ ಅಫೊನ್ಸೊ ಅಲ್ಬುಕರ್ಕ್ ಗೋವೆಯನ್ನು ೧೫೧೦ರಲ್ಲಿ ಕಸಿದುಕೊಂಡು ಅದು ಅವರ ವಸಾಹತು ಆಯಿತು. ಗೋವೆಯಲ್ಲಿ ನಡೆದ ಇನ್‌ಕ್ವಿಷನ್, ಕೊಂಕಣಿ ಜನರ ಮತಾಂತರಗಳಿಂದ ಅವರು ಚಲ್ಲಾಪಿಲ್ಲಿಯಾಗಿ ಚದುರಿ ಹೋದರು. ಕೊಂಕಣಿ ಜನರ ಭಾಷಾ ಸಾಹಿತ್ಯದ ಮೇಲೆ ಬರ್ಬರ ದೌರ್ಜನ್ಯವಾಯಿತು.

ಒಂದು ದೃಷ್ಟಿಯಲ್ಲಿ ಕೊಂಕಣಿ ಭಾಷಿಕರಿಗೆ ಭೌಗೋಲಿಕ ಸ್ವರೂಪದ ಸ್ವತಂತ್ರ ರಾಜ್ಯವೇ ಭಾರತದಲ್ಲಿ ಇಲ್ಲದುದರಿಂದ ಅವರಲ್ಲಿ ಭಾಷಾ ಸಂಕು ಚಿತ ಪ್ರವೃತ್ತಿಯೇ ಬೆಳೆಯಲಿಲ್ಲ. ಅವರು ಎಲ್ಲಿ ಹೋದರೋ ಅಲ್ಲಿಯವರೇ ಆಗಿಬಿಟ್ಟರು. ಆದರೆ ತಮ್ಮ ಭಾಷೆಯನ್ನು ಜೀವಂತವಾಗಿ ಉಳಿಸಿಕೊಂಡರು. ವ್ಯಾಪಾರ ಮತ್ತು ಕುಲಕಸುಬುಗಳನ್ನು ಎಲ್ಲಿ ಬೇಕಾದರೂ ಮಾಡಲು ಸಿದ್ಧ ವಿರುವ ಈ ಜನರು ಬೇರೆ ಬೇರೆ ಕಡೆಗಳಿಗೆ ಹೋಗಿ ನೆಲೆ ನಿಂತರು. ವಿದ್ಯಾ ವಂತರು ರಾಜಾಶ್ರಯ ಪಡೆದರು. ಇತ್ತೀಚೆಗೆ ದೊರೆತ ದಾಖಲೆಗಳ ಪ್ರಕಾರ ಗೋವೆಯಿಂದ ಕೊಂಕಣಿ ಜನರು ೧೫೬೦ಕ್ಕೆ ಮೊದಲೇ ವಲಸೆ ಹೋಗಿದ್ದರು. ಕೊಚ್ಚಿಯ ಅರಸನಲ್ಲಿಗೆ ಹಲವು ಕೊಂಕಣಿ ಜನರು ಗೋವಾದಿಂದ ೧೭೯೪ ರಲ್ಲೇ ರಾಜಾಶ್ರಯ ಹುಡುಕಿ ಹೋಗಿದ್ದರು. ಶಿಕ್ಷಣಕ್ಕೆ ಮಹತ್ವ ಕೊಟ್ಟಿದ್ದರಿಂದ ಹೆಚ್ಚಿನವರು ಗ್ರಾಮಗಳಲ್ಲಿ ಕರಣೀಕರು, ಶ್ಯಾನುಭೋಗರು ಆದರು. ಇಂಗ್ಲಿಷ್ ವಿದ್ಯಾಭ್ಯಾಸವನ್ನು ಮೊತ್ತ ಮೊದಲು ಪಡೆದವರಲ್ಲಿ ಕೊಂಕಣಿ ಜನರೇ ಪ್ರಥಮರು.

ಗೋವೆಯಿಂದ ಕರ್ನಾಟಕಕ್ಕೆ ಬಂದ ಕೊಂಕಣಿ ಜನರಿಗೆ ನಗರದ ಅರಸರು ಆಶ್ರಯವಿತ್ತರು. ದಕ್ಷಿಣಕ್ಕೆ ಬಂದಂತೆ ಅಲ್ಲಲ್ಲಿಯ ತುಂಡರಸು, ಪಾಳೇಯಗಾರರು ಬುದ್ಧಿವಂತರೆಂಬ ಕಾರಣದಿಂದ ಕೊಂಕಣಿ ಜನಗಳಿಗೆ ತಮ್ಮಲ್ಲಿ ಕೆಲಸ ಕೊಟ್ಟರು. ಹೆಚ್ಚಿನವರು ಹಳ್ಳಿಹಳ್ಳಿಗಳಲ್ಲಿ ಶ್ಯಾನುಭೋಗಿಕೆ ಮಾಡಿಕೊಂಡು ಆಯಾ ಊರಿನವರೇ ಆಗಿಬಿಟ್ಟರು. ಜನಪದದಲ್ಲಿ ಒಂದಾದರು. ಈ ಪ್ರವಾಹ ಕೊಚ್ಚಿಯವರೆಗೆ ಮುಂದುವರಿಯಿತು. ಅಂದಿಗೂ ಇಂದಿಗೂ ಕೊಂಕಣಿ ಮಾತೃಭಾಷೆ ಇರುವ ಜನಗಳಿಗೆ ಭಾಷೆಯ ಬಗ್ಗೆ ದುರಭಿಮಾನವಿಲ್ಲ. ತಮ್ಮ ಮಾತೃಭಾಷೆಯ ಬಗ್ಗೆ ಮಮತೆ ಇದೆ. ಆದರೆ ಇತರ ಭಾಷಾ ಪ್ರವಾಹಗಳ ಜತೆ ಕೊಂಕಣಿ ಭಾಷಿಕರು ತಮ್ಮದನ್ನು ಮಾತ್ರ ವರ್ಧಿಸಿಕೊಳ್ಳುವಷ್ಟು ಸ್ವಾರ್ಥಿಗಳಲ್ಲವೇನೊ. ಮರಾಠಿ, ತಮಿಳು, ಬಂಗಾಳಿ, ಮಲಯಾಳಂನವರಂತೆ ಕೊಂಕಣಿ ಭಾಷಿಕರು ಆಕ್ರಮಣಕಾರಿಗಳೂ ಅಲ್ಲ. ಇತಿಹಾಸದಲ್ಲಿ ಇದು ಒಂದು ದೌರ್ಬಲ್ಯವೆಂದೇ ಪರಿಗಣಿಸಲ್ಪಟ್ಟದ್ದು ದುರ್ದೈವ. ಆದರೆ ಅಷ್ಟೇ ವಾಸ್ತವ.

ಕೊಂಕಣಿ ಭಾಷೆಯ ಮೇಲೆ ಅನೇಕ ಆರೋಪಗಳೂ ಇವೆ. ಅವು ಅಜ್ಞಾನದಿಂದಲೂ ಅಸೂಯೆಯಿಂದಲೂ ಬಂದಿರಬಹುದು. ಉದಾಹರಣೆಗೆ ಕೊಂಕಣಿಗೆ ಸ್ವತಂತ್ರ ಲಿಪಿ ಇಲ್ಲ ಎಂದು ಮರಾಠಿಗರು ದೂರಿದ್ದುಂಟು. ಅನೇಕ ಕೊಂಕಣಿ ಭಾಷಿಕರು ತಮ್ಮ ಭಾಷೆಯ ಕುರಿತ ಅಜ್ಞಾನದಿಂದ ಇದನ್ನು ಒಪ್ಪಿಕೊಂಡೂ ಇದ್ದರು. ಇಂಗ್ಲಿಷು, ಸಂಸ್ಕೃತ, ಹಿಂದಿ, ಮರಾಠಿ ಮೊದಲಾದ ಭಾಷೆಗಳಿಗೂ ಸ್ವತಂತ್ರ ಲಿಪಿ ಇಲ್ಲವೇ ಇಲ್ಲ. ಅವು ಸ್ವತಂತ್ರ ಭಾಷೆಗಳಾಗಿ ಬೆಳೆಯಲಿಲ್ಲವೇ?

ಕೊಂಕಣಿ ಭಾಷೆಯನ್ನು ದೇವನಾಗರಿ, ಕನ್ನಡ, ರೋಮನ್ ಮತ್ತು ಮಲಯಾಳೀ ಲಿಪಿಯಲ್ಲಿ ಬರೆಯುತ್ತಾರೆ ಎಂಬುದು ಇನ್ನೊಂದು ಆರೋಪ. ಜಗತ್ತಿನಲ್ಲಿ ಅನೇಕ ಭಾಷೆಗಳನ್ನು ಎರಡು ಅಥವಾ ಹೆಚ್ಚಿನ ಲಿಪಿಗಳಲ್ಲಿ ಬರೆಯುತ್ತಾರೆ. ಸಿಂಧಿ ಭಾಷೆಯನ್ನು ಪರ್ಷಿಯನ್, ಅರೆಬಿಕ್, ಗುರುಮುಖಿ, ದೇವನಾಗರಿಗಳಲ್ಲಿ ಬರೆಯುತ್ತಾರೆ. ಕಾಶ್ಮೀರಿ ಭಾಷೆಗೆ ಐದು ಲಿಪಿಗಳಿವೆ – ಪರ್ಷಿಯನ್, ಶಾರದಾ, ಅರೆಬಿಕ್, ದೇವನಾಗರಿ ಮತ್ತು ರೋಮನ್. ಜರ್ಮನ್ ಭಾಷೆಯನ್ನು ಗೊಥಿಕ್ ಮತ್ತು ರೋಮನ್ ಲಿಪಿಗಳಲ್ಲಿ ಬರೆಯುತ್ತಾರೆ. ಕೊಂಕಣಿಗೆ ಇದೊಂದು ಬಗೆಹರಿಯದ ಸಮಸ್ಯೆಯಲ್ಲ. ದೇವನಾಗರಿಯಲ್ಲೇ ಕೊಂಕಣಿ ಸಾಹಿತ್ಯ ಸೃಷ್ಟಿಯಾಗಬೇಕೆಂಬ ನಿಲುವು ಇತ್ತೀಚೆಗೆ ಬಲವಾಗುತ್ತದೆ. ಕ್ರಮೇಣ ಇದು ಸರಿಹೊಂದಬಹುದು.

ಕೊಂಕಣಿಯಲ್ಲಿ ಸಾಕಷ್ಟು ಸಾಹಿತ್ಯವಿಲ್ಲ ಎನ್ನುವವರು ದಯವಿಟ್ಟು ಸರಿಯಾಗಿ ಕಣ್ಣುಬಿಟ್ಟು ನೋಡಬೇಕು. ಮೌಖಿಕವಾಗಿ ಅತ್ಯಂತ ಜೀವಂತವಿರುವ ಕೊಂಕಣಿ ತನ್ನ ಹಲವು ಉಪಭಾಷೆಗಳಿಂದ ಉತ್ತಮ ಸಾಹಿತ್ಯ ನಿರ್ಮಿಸುತ್ತಿದೆ. ಫೀನಿಕ್ಸ್‌ನಂತೆ ಬೂದಿಯಿಂದ ಮತ್ತೆ ಜೀವಂತವಾಗಿ ಎದ್ದು ಬಂದ ಈ ಭಾಷಾ ಸಾಹಿತ್ಯ ಇನ್ನಷ್ಟು ಸಮೃದ್ಧವಾಗಿ ಬೆಳೆಯಲು ತುಸು ಅವಕಾಶ ಕೊಡಬೇಕು.

ಭಾಷಾವಾರು ಪ್ರಾಂತ್ಯವಾದ ಬಳಿಕ ತಮ್ಮ ದೇಶದಲ್ಲಿ ಭಾಷೆಗಳ ಬಗ್ಗೆ ಬಹಳ ಸಂಕುಚಿತ ದೃಷ್ಟಿಯೇ ಬೆಳೆದಿದೆ. ಒಂದು ಭಾಷೆ ಖಂಡಿತವಾಗಿಯೂ ಇನ್ನೊಂದು ಭಾಷೆಯ ಬೆಳವಣಿಗೆಗೆ ತೊಡಕು ಅಲ್ಲ. ಹೆಚ್ಚಿನ ಭಾರತೀಯರು ಬಹುಭಾಷೆಗಳನ್ನಾಡುವ ಅಭ್ಯಾಸ ಉಳ್ಳವರು. ಭಾರತದ ಎಲ್ಲ ಭಾಷೆಗಳಲ್ಲೂ ಒಂದು ಏಕಸೂತ್ರತೆ ಇದೆ. ಅವು ಒಂದಕ್ಕೊಂದು ಪೂರಕ. ಪರಸ್ಪರ ಬೆಳೆಯಲಿಕ್ಕೆ, ಸಮೃದ್ಧಿಗೆ ಅನುಕೂಲ. ರಾಜಕೀಯ ಮಂದಿಯ ಸಂಕುಚಿತ ಮನೋಭಾವದಿಂದ ಭಾಷೆಗಳ ಬೆಳವಣಿಗೆ, ಅವುಗಳ ಕುರಿತ ಪ್ರೀತಿಗಳ ಬಗ್ಗೆ ಇರುವ ಭಾವನಾತ್ಮಕ ಸಂಬಂಧ ಸೃಜನಾತ್ಮಕವಾಗಿ ಅಥವಾ ರಚನಾತ್ಮಕವಾಗಿ ಬೆಳೆಯಲಿಲ್ಲ. ಅದಕ್ಕೆ ನಾವು ಸೃಷ್ಟಿಸಿಕೊಂಡ ಭಾಷಾಗೊಂದಲ, ಭಾಷಾ ದ್ವೇಷಗಳೇ ಕಾರಣ. ಈ ಮನೋಭಾವದಿಂದ ಎಲ್ಲ ಭಾಷೆಗಳಿಗೂ ಒಂದು ರೀತಿಯ ಉಸಿರುಗಟ್ಟಿಸುವ ಸಂದರ್ಭ ಬಂದಿದೆ. ಮತ-ಧರ್ಮಗಳ ಬಗ್ಗೆ ಸಹಿಷ್ಣುವಾಗಿದ್ದ- ಈಗಲೂ ಆಗಿರುವ - ಈ ದೇಶದಲ್ಲಿ ಭಾಷೆಗಳ ಬಗ್ಗೆ ಅನಾವಶ್ಯಕ ಗೊಂದಲ ನಿರ್ಮಿಸಿ ನಮ್ಮ ಪ್ರಗತಿಗೆ ನಾವೇ ಕಲ್ಲು ಹಾಕಿಕೊಂಡಿದ್ದೇವೆ. ಈ ಸನ್ನಿವೇಶದಲ್ಲಿ ಕೊಂಕಣಿಯಂಥ ಬೆಳೆಯುತ್ತಿರುವ ಭಾಷೆಗಳಿಗೆ ಅನ್ಯಾಯವೂ ಆಗಿದೆ.

ಕೊಂಕಣಿಯು ಸಂಸ್ಕೃತಕ್ಕೆ ಅತ್ಯಂತ ಹತ್ತಿರದ ಭಾಷೆ. ಪ್ರಾಕೃತ ಮೂಲದಿಂದ ನೇರವಾಗಿ ಬಂದ ಕೊಂಕಣಿಯಲ್ಲಿ ಸಂಸ್ಕೃತದ ಶಬ್ದಗಳು ಹೇರಳವಾಗಿವೆ. ಕೊಂಕಣಿಯು ಇತರ ಭಾಷೆಗಳಿಂದ ಶಬ್ದಗಳನ್ನು ಪಡೆದುಕೊಂಡಂತೆ ಕೊಂಕಣಿಗರಿಂದ ಕನ್ನಡಕ್ಕೆ ಬಂದ ಶಬ್ದಗಳು ಅನೇಕ- ಉಡುಗೊರೆ, ಹುಡುಗ, ಪಕ್ಕಾಸು, ಇಟ್ಟಿಗೆ, ಉದ್ದು, ಊದುಬತ್ತಿ, ಗುಡ್ಡ, ಕಮ್ಮಾರ, ಅಪರೂಪ, ಒದರು, ಗಾದೆ, ಅಪ್ಪಂತ, ಅನನಾಸು, ಬಂಗಾರ, ಬಾವಿ, ಮೋಡ, ಮಾಡು, ನೊಗ, ಬೋಳಿಸು, ಕಜ್ಜಿ, ಕಣಸು, ಮಡಲು ಮೊದಲಾದ ಶಬ್ದಗಳು ಕನ್ನಡ ಭಾಷೆಗೆ ಕೊಂಕಣಿಯ ಕೊಡುಗೆ. ಈ ಬಗ್ಗೆ ಹೆಚ್ಚಿನ ಅಧ್ಯಯನ, ಸಂಶೋಧನೆ ಆಗಬೇಕು.

ಭಾಷೆ ಬೆಳೆಯುವುದು ಮನೆಯಲ್ಲಿ. ಸಾಹಿತ್ಯ ಹುಟ್ಟುವುದು ಜೋಗುಳದ ಹಾಡು, ಗದ್ದೆಗಳಲ್ಲಿ, ಪ್ರೇಮ-ಪ್ರಣಯ, ಪ್ರವಾಸಗಳಲ್ಲಿ. ಅಂಥ ಅವಕಾಶ ಕೊಂಕಣಿ ಭಾಷೆಯ ಜನರಿಗೆ ಇಂದು ದೊರೆತಿದೆ. ಬಹುಶಃ ಇತಿಹಾಸದಲ್ಲಿ ಇಷ್ಟೊಂದು ಅನುಕೂಲವಾದ ಕಾಲ ಕೊಂಕಣಿ ಭಾಷಿಕರಿಗೆ ಎಂದೂ ಸಿಕ್ಕಿರಲಿಲ್ಲ. ಗೋವೆಯ ಕೊಂಕಣಿ ರಾಜ್ಯ, ಕರ್ನಾಟಕ, ಮಹಾರಾಷ್ಟ್ರ, ಕೇರಳಗಳಲ್ಲಿ ದೊರೆತ ಮಾನ್ಯತೆ, ಕೇಂದ್ರ ಸಾಹಿತ್ಯ ಅಕಾಡೆಮಿ ಮತ್ತು ಎಂಟನೆಯ ಶೆಡ್ಯೂಲ್‌ನ ಮಾನ್ಯತೆ ಇವು ಕೊಂಕಣಿಯ 'ಟೇಕ್ ಆಫ್'ಗೆ ಸರ್ವ ಸನ್ನಾಹ ಪೂರಕವಾಗಿವೆ.

ಕೊಂಕಣಿಯಲ್ಲಿ ಅಪ್ಪ-ಅಮ್ಮನಿಗೆ ಬಾಪೊಯ್, ಬಾಪ್ಪಾ (ಸಂಸ್ಕೃತದ 'ಬಪ್ಪ'ದಿಂದ) ಮತ್ತು ಆವೋಯ್ (ಸಂಸ್ಕೃತದ 'ಆರ್ಯಾ'ದಿಂದ) ಎನ್ನುತ್ತಿದ್ದರು.

ಈಗ ಅದು ಮರೆತುಹೋಗಿ ಮಮ್ಮಿ-ಡ್ಯಾಡಿಯೇ ಹೆಚ್ಚು ಪ್ರಚಲಿತವಿದೆ. ಅದು ಭಾರೀ ಗೌರವ ಮತ್ತು ಮಟ್ಟದ ಸಂಕೇತವೆಂದು ಹೆತ್ತವರೂ ಮಕ್ಕಳೂ ತಿಳಿದುಕೊಂಡಿದ್ದಾರೆ. ಕೊಂಕಣಿ ಅಭಿವೃದ್ಧಿ ಇಲ್ಲಿಂದಲೇ ಆರಂಭವಾಗಬೇಕು. ಅದುವೆ ಕೊಂಕಣಿ ಭಾಷೆ ಮತ್ತು ಸಾಹಿತ್ಯದ ಬೆಳವಣಿಗೆಯಲ್ಲಿ ಭದ್ರವಾದ ಬುನಾದಿಯಾಗುತ್ತದೆ. ಅಂಥ ಆತ್ಮವಿಶ್ವಾಸ ಮತ್ತು ಸ್ವಾಭಿಮಾನದ ಮನೋಭಾವ ಕೊಂಕಣಿ ಭಾಷಿಕರಲ್ಲಿ ಚಿಗುರಿದೆಯೇ? ಈ ಉಪಯುಕ್ತ ಗ್ರಂಥ ಅಂಥ ಮನೋಭಾವಕ್ಕೆ ಪ್ರೇರಣೆ ಕೊಡಲಿ ಎಂದು ಹಾರೈಸುತ್ತೇನೆ.

ಮಣಿಪಾಲ

೨೫-೧೨-೧೯೯೪.

# ನಮ್ಮ ಹಿರಿಯರನ್ನು ಕುರಿತು

– ಎಂ. ಗೋವಿಂದ ಪೈ

---

*ಋಗ್ವೇದದ 'ಪುರುಷ ಸೂಕ್ತ X -90 ರಲ್ಲಿ*

> **'ಬ್ರಾಹ್ಮಣೋಽಸ್ಯ ಮುಖಮಾಸೀದ್**
> **ಬಾಹೂ ರಾಜನ್ಯಃ ಕೃತಃ ।**
> **ಊರೂ ತದಸ್ಯ ಯದ್ವೈಶ್ಯಃ**
> **ಪದ್ಭ್ಯಾಂ ಶೂದ್ರೋ ಅಜಾಯತ ॥**

ಎಂದು ಹೇಳಿರುವುದರಿಂದ ವೇದಕಾಲೀನ ಆರ್ಯರ ಸಮಾಜ ರಚನೆಯಲ್ಲಿ ಆ ವರೆಗೆ ಇದ್ದ ಆರ್ಯ–ಅನಾರ್ಯರೆಂಬಷ್ಟೇ ಭೇದವಲ್ಲದೆ, ಬಹುಶಃ ಆ ಕಾಲದಿಂದಲೆ ಆರ್ಯರಲ್ಲಿಯೂ ಅವರವರ ಪ್ರವೃತ್ತಿಗೆ ಅನುಗುಣವಾಗಿ ಆಂತರಿಕ ಪೃಥಕ್ಕರಣವು ಉಂಟಾಗಲಿಕ್ಕೆ ತೊಡಗಿದ್ದಂತೆ ಕಾಣುತ್ತದೆ. ಅಂಥ ಭೇದಗಳು ಗೀತೆಯಲ್ಲಿ ಹೇಳಿರುವಂತೆ ಪ್ರಥಮತಃ "ಗುಣಕರ್ಮ ವಿಭಾಗಶಃ" ನಿರ್ಣೀತ ವಾದುದಾಗಿರಬೇಕು; ಮಾತ್ರವಲ್ಲ, ಬಹುಶಃ ಆಗಣ ಆರ್ಯರು ಹೊಸ ಹೊಸ ನೆಲೆಗಳಿಗೆ ಮುಂದರಿಯುತ್ತಲೆ ಆಯಾ ನೆಲೆಗಳಲ್ಲಿ ನಿವಾಸವನ್ನು ಮಾಡಿ ಕೊಂಡ ಕಾರಣದಿಂದಲೂ ಉಂಟಾಗಿರಬಹುದು; ಅಲ್ಲದೆ, ಈಗಣ ಕಾಲದಲ್ಲಿ ಇಷ್ಟು ಕಡಿದಾಗಿ ನಿಂತಿರುವ ಜಾತಿ ಭೇದಗಳಂತೆ ಜನ್ಮದೊಂದೇ ಹೇತುವಿಂದ ನಿಶ್ಚಿತವಾದುದಾಗಿರಲಾರವು. ಯಾವೊಂದು ಜನಾಂಗವು ಒಂದೆಡೆಯಿಂದ ಇನ್ನೊಂದೆಡೆಗೆ "ಅಲ್ಲಿಂದ ಮತ್ತೊಂದೆಡೆಗೆ, ಹಾಗೆಯೇ ಮುಂದೆ ಮುಂದೆ ಸಂಚರಿ ಸುತ್ತಲೇ ಇರುವಂದು, ಒಂದೆಡೆಯಲ್ಲಿ ನೆಲಸಿದವರಿಗೂ ಬೇರೊಂದೆಡೆಯಲ್ಲಿ ನೆಲಸಿ ದವರಿಗೂ ಕಾಲಕ್ರಮೇಣ ಆಚಾರ ವಿಚಾರಗಳಲ್ಲಿ ಮೆಲ್ಲಮೆಲ್ಲನೆ ವ್ಯತ್ಯಾಸಗಳು ಒದಗುವುದೂ, ಅವೇ ಮುಂದಕ್ಕೆ ಬಿಗುವಾಗುವುದೂ, ಕಟ್ಟಕಡೆಗೆ ಆ ಕಾರಣ ಗಳಿಂದ ತಾವು ಅನ್ಯಾನ್ಯರೆಂಬಂತೆ ಅವರು ಪರಸ್ಪರ ಭಾವಿಸಿಕೊಳ್ಳುವುದೂ ಆ ಪ್ರಾಚೀನ ಕಾಲದ ಜನಾಂಗಗಳಲ್ಲಿ ಸಹಜವೇ. ಹೀಗಾಗಿ ಬಹಳ ಹಿಂದಣ ಕಾಲ ದಿಂದಲೇ ಆಗಣ ಸಮಾಜದಲ್ಲಿ ಚಾತುರ್ವರ್ಣ್ಯವು ಉಂಟಾಯಿತು; ಆ ಬಳಿಕ ಬರುತ್ತಾ ಬರುತ್ತಾ ಪ್ರತ್ಯೇಕ ವರ್ಣವು ಅಂತರ್ಭಿನ್ನವಾಗಿ ಅದರಲ್ಲಿ ಇನ್ನೂ ಇನ್ನೂ ಭೇದಗಳು ಕ್ರಮಶಃ ಉಂಟಾದವು. ಹೀಗಾಗಲಿಕ್ಕೂ ಆಯಾ ವರ್ಣದವರ ಪ್ರವಾಸ–ನಿವಾಸಗಳೇ ಮೂಲ ಕಾರಣವಾಗಿರಬೇಕು; ಏವಂಚ ಆಗಣ

ಬ್ರಾಹ್ಮಣರೆಂಬವರಲ್ಲಿ ಮೊತ್ತಮೊದಲಲ್ಲಿ ಈ ಕಾರಣಗಳಿಂದ ತಾನೇ ಭೇದಗಳು ಉಂಟಾದುವಲ್ಲದೆ ಅನ್ಯಥಾ ಅಲ್ಲವೆಂದು ತೋರುತ್ತದೆ.

ಗೌಡ-ದ್ರಾವಿಡರೆಂಬೀ ಹೆಸರುಗಳಿಂದ ಬ್ರಾಹ್ಮಣರಲ್ಲಿ ಇಷ್ಟು ದೃಢವಾಗಿರುವ ಈ ಭೇದವು ಯಾವಂದಿನಿಂದ ಮೊದಲಾಯಿತೆಂದು ನಿಷ್ಕೃಷ್ಟ ಮಾಡಲಿಕ್ಕೆ ಸಾಧ್ಯವಲ್ಲದಿರಬಹುದಾದರೂ, ಅದು, ಬ್ರಾಹ್ಮಣರೂ ಬ್ರಾಹ್ಮಣ ಧರ್ಮವೂ ವಿಂಧ್ಯಾದ್ರಿಯನ್ನು ದಾಟಿ ದಕ್ಷಿಣ ಭಾರತದಲ್ಲಿ ನೆಲಸುವುದಕ್ಕೆ ಮುಂಚೆ ಉಂಟಾಗಿರಲಾರದು ಎಂಬುದಿಷ್ಟು ಕಂಡಿತವೆಂದು ಹೇಳಬಹುದು; ಏಕೆಂದರೆ ಉತ್ತರ ಭಾರತದಲ್ಲಿದ್ದ ಬ್ರಾಹ್ಮಣರು ದಕ್ಷಿಣ ಭಾರತವೆಂಬೀ ದ್ರಾವಿಡ ಭೂಮಿಯಲ್ಲಿ ಕಾಲೂರುವುದಕ್ಕೆ ಮುಂಚೆ ದ್ರಾವಿಡ ಎಂಬೀ ಭೇದವೆಲ್ಲಿಂದ?

ಗೌಡ-ಬ್ರಾಹ್ಮಣರಲ್ಲಿ ಪಂಚಗೌಡರೆಂದೂ, ದ್ರಾವಿಡರಲ್ಲಿ ಪಂಚದ್ರಾವಿಡರೆಂದೂ ಪರಸ್ಪರ ಒಳಭೇದಗಳಿವೆಯಷ್ಟೇ; ಇವಾದರೂ ಯಾವಂದು ಮೊದಲಾದುವು ಎಂಬುದನ್ನು ಹೇಳಲು ಶಕ್ಯವಲ್ಲವಾದರೂ ಇವನ್ನು ಕುರಿತು ಇವೆರಡು ಸಂಗತಿಗಳನ್ನು ನಿರ್ಧರಿಸಬಹುದು:-

(೧) ಈ ಹತ್ತು ವಿಧದ ಬ್ರಾಹ್ಮಣರ ಹೆಸರುಗಳೆಲ್ಲವು ಅವರವರು ನೆಲಸಿದ್ದ ಆಯಾ ದೇಶನಾಮಗಳಿಂದಲೆ ಬಂದಿವೆ; ಪಂಚಗೌಡರೆಂಬವರ ಹೆಸರುಗಳು ವಿಂಧ್ಯಾದುತ್ತರ ಭಾರತದಲ್ಲಿಯ ದೇಶಗಳಿಂದ, ಪಂಚದ್ರಾವಿಡರೆಂಬವರವು ವಿಂಧ್ಯಾದ್ದಕ್ಷಿಣ ಭಾರತದಲ್ಲಿಯ ದೇಶಗಳಿಂದ, ಅವರವರಿಗೆ ಹೊಂದಿಕೆಯಾಗಿವೆ.

(೨) ಆದುದರಿಂದ ಇವರಲ್ಲಿ ಆಯಾ ವಿಧದವರು ಆಯಾ ದೇಶಗಳಿಗೆ ಹೋಗಿ ಅಲ್ಲಿ ನೆಲಸಿದ ಬಳಿಕ, ಮತ್ತು ಹಾಗೆ ಅಲ್ಲಿ ನೆಲಸಿದುದರಿಂದ ತಾನೆ ಅವರವರಿಗೆ ಆಯಾ ದೇಶನಾಮಗಳು ಹೊಂದಿಕೆಯಾಗಿರಬೇಕು.

ಇದರಿಂದ ಉತ್ಪನ್ನವಾಗುವುದೊಂದು ಕಂಡಿತವಾದ ಸಿದ್ಧಾಂತವೆಂದರೆ, ಪಂಚಗೌಡ ಮತ್ತು ಪಂಚದ್ರಾವಿಡ ಎಂದು ರೂಢಿಯಲ್ಲಿರುವ ಈ ಹೆಸರುಗಳು ಯಥಾರ್ಥವಾಗಿ ಆಲೋಚಿಸಿದರೆ ತೀರ ತಪ್ಪು ಹೆಸರುಗಳೇ: ಏಕೆಂದರೆ ಪಂಚಗೌಡರೆಂದು ಕರೆಯಲ್ಪಡುವವರಲ್ಲಿ ಒಂದಾಗಿರುವ ಗೌಡರೆಂಬ ಬ್ರಾಹ್ಮಣರು ಮಾತ್ರ ಗೌಡ ದೇಶದಲ್ಲಿ ನೆಲಸಿದ್ದು ಆ ದೇಶದ ಹೆಸರಿಂದ ಕರೆಯಲ್ಪಟ್ಟುದು ಸರಿಯಲ್ಲದೆ, ಮಿಕ್ಕ ನಾಲ್ಕು ಬಗೆಯವರು ಇತರತ್ರ ನೆಲಸಿ ಆಯಾ ದೇಶಗಳ ಹೆಸರುಗಳಿಂದ ಕರೆಯಲ್ಪಟ್ಟುದು ಸರಿಯಾದರೂ, ಅವರೂ ಗೌಡರೆಂದು ಕರೆಯಲ್ಪಡುವುದು ಯಥಾರ್ಥವಲ್ಲ, ಸರಿಯಲ್ಲ; ಹಾಗೆಯೇ ಪಂಚದ್ರಾವಿಡರೆಂಬವರಲ್ಲಿ ಒಂದಾಗಿರುವ ದ್ರಾವಿಡರೆಂಬವರು ಮಾತ್ರ ತಮಿಳ-ದ್ರಮಿಳ-ದ್ರಾವಿಡರೆಂಬ ದೇಶದಲ್ಲಿ ನೆಲಸಿದ್ದುದರಿಂದ ಆ ಹೆಸರಿಗೆ ಪಾತ್ರರಲ್ಲದೆ, ಆ ತಮಿಳು ದೇಶದಲ್ಲಿ ನೆಲಸದೆ ಇತರತ್ರ ಆಂಧ್ರ-ಕರ್ಣಾಟಕಾದಿ ದೇಶಗಳಲ್ಲಿ ನೆಲಸಿದ ಮಿಕ್ಕ ನಾಲ್ಕು ವಿಧದವರೂ ದ್ರಾವಿಡರೆಂದು ಕರೆಯಲ್ಪಟ್ಟುದು ಎಂದಿಗೂ ಯಥಾರ್ಥವಲ್ಲ,

ಸರಿಯಲ್ಲ. ಐತಿಹಾಸಿಕ ದೃಷ್ಟ್ಯಾ ವಿಚಾರಿಸುವಲ್ಲಿ, ಈಗಣ ಬಂಗಾಳವೇ ಮೊದಲಾದ ಪ್ರಾಂತಗಳನ್ನು ಒಳಕೊಂಡಿರುವ ಗೌಡವೆಂಬ ಹೆಸರ ದೇಶದಲ್ಲಿದ್ದವರೇ ಯಥಾರ್ಥವಾದ ಗೌಡರು; ಅವರಂತೆಯೇ ಉತ್ತರ ಭಾರತ ನಿವಾಸಿಗಳಾದ ಸಾರಸ್ವತ-ಕಾನ್ಯಕುಬ್ಜ-ಮೈಥಿಲ-ಉತ್ಕಲರೆಂಬ ಬ್ರಾಹ್ಮಣರನ್ನು ಅವರೊಂದಿಗೆ ಕೂಡಿಸಿ, ಅವರೆಲ್ಲರನ್ನೂ ಪಂಚಗೌಡರೆಂದುದು ಬರೇ ರೂಢಿಯಷ್ಟೆ; ಹಾಗೆಯೇ ಈಗಣ ತಮಿಳುನಾಡಿನ ಯಥಾರ್ಥವಾಗಿ ದ್ರಾವಿಡರಾಗಿರುವ ಬ್ರಾಹ್ಮಣರೊಂದಿಗೆ ಮಿಕ್ಕ ಆಂಧ್ರ-ಕರ್ಣಾಟ-ಮಹಾರಾಷ್ಟ್ರ-ಗುರ್ಜರರೆಂಬ ದಕ್ಷಿಣ ಭಾರತ ನಿವಾಸಿಗಳಾದ ಮಿಕ್ಕ ನಾಲ್ಕು ವಿಧದ ಬ್ರಾಹ್ಮಣರನ್ನು ಸೇರಿಸಿ, ಅವರೆಲ್ಲವರನ್ನು ಪಂಚ ದ್ರಾವಿಡರೆಂದಿರುವುದೂ ರೂಢಿ ಮಾತ್ರವಲ್ಲದೆ ಇತಿಹಾಸಕ್ಕೆ ಸರಿಯಾಗದು. ಆದುದರಿಂದ ಉತ್ತರ ಹಿಂದೂಸ್ಥಾನದ ಪಂಚವಿಧ ಬ್ರಾಹ್ಮಣರನ್ನು ಪಂಚ ಗೌಡರೆಂದೂ ದಕ್ಷಿಣ ಹಿಂದೂಸ್ಥಾನದ ಪಂಚವಿಧದವರನ್ನು ಪಂಚದ್ರಾವಿಡರೆಂದೂ ಹೆಸರಿಸಿರುವುದು ಬರೇ ಸೌಕರ್ಯದ ಬಗ್ಗೆ (for convenience sake) ತಾನೇ ಎಂಬುದನ್ನು ಜಾಗ್ರತೆಯಾಗಿ ನೆನಪಿನಲ್ಲಿ ಇಟ್ಟುಕೊಳ್ಳಬೇಕು. ಯಥಾರ್ಥ ನಾಮಗಳಿಂದ ಕರೆವುದಾದರೆ, ಗೌಡಾದಿ ಪಂಚವಿಧದ ಬ್ರಾಹ್ಮಣರು, ದ್ರಾವಿಡಾದಿ ಪಂಚವಿಧದ ಬ್ರಾಹ್ಮಣರು ಎಂದೆನ್ನಬೇಕು.

ಹೀಗೆ ಪಂಚಗೌಡರೆಂದು ಕರೆಯಲ್ಪಡುವ ಬ್ರಾಹ್ಮಣರಲ್ಲಿ, ಗೌಡರೆಂಬವರ ಹೆಸರು ಬಂಗಾಳಕ್ಕೂ ಅದರ ಪಕ್ಕದಲ್ಲಿರುವ ಕೆಲವು ಪ್ರಾಂತಗಳಿಗೂ ಆ ಕಾಲದಲ್ಲಿದ್ದ ಗೌಡದೇಶ ಎಂಬ ಹೆಸರಿಂದ ಬಂತು. ಕಾನ್ಯಕುಬ್ಜರೆಂಬವರದು ಈಗಣ ಸಂಯುಕ್ತ ಪ್ರಾಂತ (United Provinces) ಗಳಲ್ಲಿರುವ 'ಕನೋಜ್' ಎಂಬ ಹೆಸರಿಂದಾಯಿತು- ಇದು "ರಾಮಾಯಣ" ದ ಕಾಲದಲ್ಲಿ ಗಾಧಿರಾಯನ ರಾಜ್ಯವು, ಐತಿಹಾಸಿಕ ಕಾಲದಲ್ಲಿ ಪ್ರಸಿದ್ಧನಾದ ಹರ್ಷವರ್ಧನನೆಂಬ ಚಕ್ರವರ್ತಿಯ ರಾಜ್ಯವು. ಮೈಥಿಲರೆಂಬವರ ಹೆಸರು ಈಗ "ತಿರಹೂತ್" (Tirahut) ಅಥವಾ ಉತ್ತರ ವಿಹಾರವೆಂದು ಕರೆಯಲ್ಪಡುವ ಆಗಣ ತ್ರಿಹೋತ್ರ ಅಥವಾ ತೀರಭುಕ್ತಿ ಎಂಬ ವಿದೇಹ ರಾಜ್ಯದ ಹೆಸರಿಂದ ಬಂತು- ಇದು ಸೀತಾದೇವಿಯ ತಂದೆಯಾದ ಜನಕರಾಯನ ರಾಜ್ಯವು. "ಉತ್ಕಲ" ಎಂಬವರದು ಈಗಣ ಒರಿಸ್ಸಾ ಎಂಬ ಕಳಿಂಗ ಅಥವಾ ಉತ್ಕಳಿಂಗ ದೇಶದ ಹೆಸರಿಂದಾಯಿತು-ಇದೇ ವಡ್ಡಿ, ಉಡಿಯಾ ಎಂಬುದು; ಪ್ರಸಿದ್ಧವಾದ ಜಗನ್ನಾಥನ ದೇವಾಲಯವು ಈ ದೇಶದಲ್ಲಿ ಪೂರ್ವಸಮುದ್ರ ತೀರದಲ್ಲಿದೆ.

ಈಗ "ಸಾರಸ್ವತ" ಬ್ರಾಹ್ಮಣರ ಹೆಸರು ಹೇಗೆ ಬಂತೆಂಬುದನ್ನು ವಿಚಾರಿಸೋಣ. ಋಗ್ವೇದದಲ್ಲಿ ಹೇಳಲ್ಪಟ್ಟಿರುವ ಕೆಲವು ನದಿಗಳಲ್ಲಿ ಸರಸ್ವತೀ ನದಿ ಮಿಕ್ಕ ಎಲ್ಲವುಗಳಿಗಿಂತ ಶ್ರೇಷ್ಠನದಿ ಎಂದು ಮಾನ್ಯವಾಗಿದೆ ಎಂದು ಹೇಳಬೇಕೆಂದಿಲ್ಲ; ಸರಸ್ವತಿಯನ್ನು ಕುರಿತು ಉಳ್ಳಷ್ಟು ಋಕ್ಕುಗಳು ಬೇರಾವ ನದಿಯನ್ನು

ಕುರಿತಾದರೂ ಋಗ್ವೇದದಲ್ಲಿಲ್ಲ. ಅಂಥವುಗಳಿಂದ ಎರಡನ್ನೇ ಇಲ್ಲಿ ಹೇಳುವುದಾದರೆ, (VII ೯೫ ೧-೨)

**ಪ್ರಕ್ಷೋದಸಾ ಧಾಯಸಾ ಸಸ್ರ ಏಷಾ**
**ಸರಸ್ವತೀ ಧರುಣಮಾಯಸೀ ಪೂಃ ।**
**ಪ್ರಬಾಬಧಾನಾ ರಥ್ಯೇವ ಯಾತಿ**
**ವಿಶ್ವಾ ಅಪೋ ಮಹಿನಾ ಸಿಂಧುರನ್ಯಾಃ ॥**
**ಏಕಾ ಚೇತತ್ಸರಸ್ವತೀ ನದೀನಾಂ**
**ಶುಚಿರ್ಯತೀ ಗಿರಿಭ್ಯ ಆಸಮುದ್ರಾತ್ ।**
**ರಾಯಶ್ಚೇತಂತೀ ಭುವನಸ್ಯ ಭೂರೇ**
**ರ್ಘೃತಂ ಪಯೋ ದುದುಹೇ ನಾಹುಷಾಯ ॥**

ಎಂಬಿವಲ್ಲಿ ಸರಸ್ವತೀ ನದಿಯು ಉಕ್ಕಿನ ಕೋಟೆಯೆಂದೂ, ಸುಭಿಕ್ಷವಾದ ಪ್ರವಾಹವುಳ್ಳವಳೆಂದೂ, ಆಕೆಯ ಸ್ರೋತವು ಮಿಕ್ಕೆಲ್ಲ ನದಿಗಳ ಸ್ರೋತವನ್ನು ಮಿಕ್ಕಿದ್ದೆಂದೂ, ಎಲ್ಲಾ ನದಿಗಳಲ್ಲಿ ಆಕೆಯೇ ಶುಚಿಷ್ಠೆ ಎಂದೂ, ಗಿರಿಗಳಿಂದ ಹುಟ್ಟಿ ಸಮುದ್ರದ ವರೆಗೆ ಹರಿಯುತ್ತಿರುವಳೆಂದೂ ಹೇಳಿದೆ. ಅದೇ ವೇದದಲ್ಲಿ ಅನ್ಯತ್ರ ಆಕೆ ಆಕಾಶದಿಂದ ಇಳಿದವಳೆಂದೂ, ಸ್ವರ್ಣನದಿಯೆಂದೂ, ತಾಯಂದಿರಲ್ಲಿ, ನದಿಗಳಲ್ಲಿ, ದೇವತೆಗಳಲ್ಲಿ ಶ್ರೇಷ್ಠಳೆಂದೂ ಇದೆ.

**ಅಂಬಿತಮೇ ನದೀ ತಮೇ ದೇವಿತಮೇತಿ ಸರಸ್ವತಿ ।**
**ಅಪ್ರಶಸ್ತಾ ಇವ ಸ್ಮಸಿ ಪ್ರಶಸ್ತಿಮಂಬ ನಸ್ಕೃದಿ ॥**

(II ಸೂ. 41 ಋ 16)

ಈ ಸರಸ್ವತೀ ನದಿ ಹಿಮಾಚಲದ ಪ್ಲಕ್ಷಪ್ರಸ್ರವಣದಿಂದ ಹುಟ್ಟಿ ಈಗಣ ಕಾಠೇವಾಡದಲ್ಲಿರುವ ಪುಣ್ಯಪುರಿಯಾದ ದ್ವಾರಕೆಯ ಸಮೀಪದಲ್ಲಿ ಪಶ್ಚಿಮ ಸಮುದ್ರವನ್ನು ಸೇರುತ್ತದೆ. ಆದರೆ ಎಷ್ಟೋ ಕಾಲಕ್ಕೆ ಹಿಂದಣಿಂದಲೇ ಈ ನದಿ ಅಂತಃಸಲಿಲೆಯಾಗಿ ನಷ್ಟವಾಗಿರುವುದರಿಂದ, ಈಗ ಅಲ್ಲಲ್ಲಿ ಅದರ ಅಂಶಾಂಶ ಗಳಷ್ಟೇ ಕಾಣಸಿಗುತ್ತವಲ್ಲದೆ, ಸಮಗ್ರವಾದೀ ನದಿ ಈಗಣ ಭಾರತ ಭೂಮಿಯ ಲ್ಲಿಲ್ಲ. ವೇದಕಾಲೀನ ಆರ್ಯರ ಎಷ್ಟೋ ಉಪನಿವೇಶಗಳು, ಎಷ್ಟೋ ಅಧಿವಾಸ ಗಳು, ಎಷ್ಟೋ ಪುಣ್ಯ ಕ್ಷೇತ್ರಗಳು, ಎಷ್ಟೋ ಯಜ್ಞವೇದಿಗಳು ಎಷ್ಟೋ ರಾಜ್ಯ-ಮಹಾರಾಜ್ಯಗಳು, ಸರಸ್ವತೀ ನದಿಯ ತೀರದಲ್ಲಿ ಇದ್ದುವು, ಅಷ್ಟು ಅನ್ಯತ್ರ ಎಲ್ಲಿಯೂ ಇದ್ದಿರಲಿಲ್ಲ.

**ಸರಸ್ವತೀ ದೃಷದ್ವತ್ಯೋರ್ದೇವನದ್ಯೋರ್ಯದಂತರಮ್ ।**
**ತಂ ದೇವನಿರ್ಮಿತಂ ದೇಶಂ ಬ್ರಹ್ಮಾವರ್ತಂ ವಿದುರ್ಬುಧಾಃ ॥**

(ಮನುಸ್ಮೃತಿ II. 17)

ಎಂಬ ಬ್ರಹ್ಮಾವರ್ತವೂ,

'ದಕ್ಷಿಣೇನ ಸರಸ್ವತ್ಯಾ ದೃಪದ್ವತ್ಯುತ್ತರೇಣ ಚ ।
ಯೇ ವಸಂತಿ ಕುರುಕ್ಷೇತ್ರೇ ತೇ ವಸಂತಿ ತ್ರಿವಿಷ್ಟಪೇ ॥'

(ಮಹಾಭಾರತ)[1]

ಎಂದು ಹೆಚ್ಚುಕಡಿಮೆ ಅದೇ ಗಡಿಗಳುಳ್ಳ ಕುರುಕ್ಷೇತ್ರವೂ ಈ ಭಾರತದಲ್ಲಿ ಆರ್ಯರ ಪೂರ್ವ ನಿವಾಸಗಳಲ್ಲಿ ಅತ್ಯಂತ ಪವಿತ್ರವೆಂದು ಗಣ್ಯವಾಗಿದ್ದುವು. ಇದು ಈಗಣ ಢಿಲ್ಲಿಯಿಂದ ಉತ್ತರಕ್ಕೆ ಸುಮಾರು ೫೦-೬೦ ಮೈಲುಗಳಲ್ಲಿ ಪ್ರಾರಂಭಿಸುತ್ತದೆ. ಸರಸ್ವತಿ ನದಿಯ ಕೂಲಕ್ಕೆ ಹತ್ತಿರವಿರುವ ಭಾಗಕ್ಕೆ ಕ್ರಮೇಣ ಸಾರಸ್ವತ ದೇಶವೆಂದೂ ಹೆಸರಾಯಿತು. ಮತ್ತದು ಬ್ರಹ್ಮಾವರ್ತ-ಕುರುಕ್ಷೇತ್ರ ಪ್ರಾಂತಗಳಲ್ಲಿತ್ತು, ಅಂದರೆ ಈಗಣ ಪಂಜಾಬದಲ್ಲಿ ಇತ್ತು. ಈ ಸಾರಸ್ವತ ದೇಶದ ಹೆಸರು ಹಲವು ಪ್ರಾಚೀನ ಗ್ರಂಥಗಳಲ್ಲಿದೆ, ಅವುಗಳಿಂದ ಈ ಉಲ್ಲೇಖಗಳನ್ನು ಇಲ್ಲಿ ಕೊಡಬಹುದು:-

(೧) ಮಾರ್ಕಾಂಡೇಯ ಪುರಾಣ - (೫೮ನೆಯ ಅಧ್ಯಾಯ)
'ಮಧ್ಯೇ ಸಾರಸ್ವತಾ ಮತ್ಸ್ಯಾ ಶೂರಸೇನಾಃ ಸಮಾಥುರಾ ॥'

(೨) ವರಾಹಮಿಹಿರಿನ "ಬೃಹತ್ಸಂಹಿತಾ" - (೧೪ನೆಯ ಅಧ್ಯಾಯ)
'ಮರು ವತ್ಸ ಘೋಷ ಯಾಮುನ ಸಾರಸ್ವತ ಮತ್ಸ್ಯ ಮಾಧ್ಯಮಿಕಾಃ ॥

ಅಂದರೆ "ಸಾರಸ್ವತ" ದೇಶವು ವಿಂಧ್ಯಾದುತ್ತರ ಭಾರತದ ಮಧ್ಯ ದೇಶಗಳಲ್ಲಿ ಒಂದಾಗಿತ್ತು ಎಂದು ತಿಳಿಯುತ್ತದೆ. ಈ ಸಾರಸ್ವತ ದೇಶವೇ ಅಲ್ಲಿದ್ದ ನಮ್ಮ ಹಿರಿಯರಿಗೆ ಸಾರಸ್ವತ ಬ್ರಾಹ್ಮಣರೆಂಬ ಹೆಸರನ್ನು ಕೊಟ್ಟಿತು. ಆ ನಮ್ಮ ಮೂಲ ಹಿರಿಯರನ್ನು ಕುರಿತು ಪ್ರಾಚೀನ ಗ್ರಂಥದಲ್ಲಿ ಹೇಳಿರುವ ಒಂದೆರಡು ಮಾತುಗಳನ್ನು ಇಲ್ಲಿ ಉಲ್ಲೇಖಿಸಬಹುದು.

(೧) ಭಾಗವತ ಪುರಾಣ (ದಶಮಸ್ಕಂಧ) -
'ಏವಂ ಸಾರಸ್ವತಾ ವಿಪ್ರಾ ನೃಣಾಂ ಸಂಶಯನುತ್ತಯೇ ।
ಪುರುಷಸ್ಯ ವದಾಂಭೋಜ ಸೇವಯಾ ತದ್ಗತಿಂ ಗತಾಃ ॥'

(೨) ಭವಿಷ್ಯೋತ್ತರ ಪುರಾಣದಲ್ಲಿ -
'ಸಾರಸ್ವತಾಸ್ತು ಯೇ ವಿಪ್ರಾ ಕ್ಷತ್ರಿಯಾಣಾಂ ಪುರೋಹಿತಾಃ ॥'[2]

1. 'Quoted in Rapson's Ancient India'
2. ಇವೆರಡು ಉದ್ಧಾರಗಳನ್ನು ಶ್ರೀ ಗೋವಿಂದ ನಾರಾಯಣ ಮಿಶ್ರರ 'ಸಾರಸ್ವತ ಸರ್ವಸ್ವ' ಎಂಬ ಹಿಂದೀ ಗ್ರಂಥದಿಂದ ಎತ್ತಿಕೊಂಡಿದೆ.

(೩) ಅಶ್ವಘೋಷನ 'ಸೌಂದರಾನಂದ' ಕಾವ್ಯದಲ್ಲಿ (VII 31)

'ತಥಾಂಗಿರಾ ರಾಗಪರೀತಚೇತಾಃ ಸರಸ್ವತೀ ಬ್ರಹ್ಮಸುತಃ ಸಿಷೇವೆ ।
ಸಾರಸ್ವತೋ ಯತ್ರ ಸುತೋಽಸ್ಯ ಜಜ್ಞೇ ನಷ್ಟಸ್ಯ ವೇದಸ್ಯ ಪುನಃ ಪ್ರವಕ್ತಾ ॥'[3]

ಇದೇ ಅಂಗಿರ ಋಷಿಯನ್ನು "ಋಷಿಃ ಸಾರಸ್ವತೋಽಂಗಿರಾ" ಎಂದು ಅನೇಕ ಪುರಾಣಗಳಲ್ಲಿ ಹೇಳಿದೆ.

ಇತರ ನಾಲ್ಕು ವಿಧದ ಗೌಡ ಬ್ರಾಹ್ಮಣರು ಬ್ರಹ್ಮಾವರ್ತದಿಂದ ಪೂರ್ವಕ್ಕೆ ನಡೆದು ಪೂರ್ವಭಾರತದಲ್ಲಿಯ ಗೌಡ, ಕಾನ್ಯಕುಬ್ಜ, ಮಿಥಿಲಾ ಮತ್ತು ಉತ್ಕಲ ದೇಶಗಳಲ್ಲಿ ನೆಲಸಿ, ಆಯಾ ದೇಶಗಳಿಂದ ಹೊಸ ಹೆಸರುಗಳನ್ನು ತಾಳಿದರೆ, ಸಾರಸ್ವತರು ಇನ್ನೂ ಬಳಿಕ ವೇದದ ಪವಿತ್ರ ಭೂಮಿಯಾದ ಬ್ರಹ್ಮಾವರ್ತದಲ್ಲಿಯ ತಮ್ಮ ಸಾರಸ್ವತ ದೇಶದಲ್ಲಿಯೇ ನೆಲೆಗೊಂಡಿರಬೇಕು; ಏಕೆಂದರೆ ಇತರರಿಗೆ ಅವರ ವರು ಮೂಲ ನೆಲೆಯಿಂದ ಹೊರಟು ಎಲ್ಲೆಲ್ಲಿ ಬೀಡುಗೊಂಡರೋ ಆಯಾ ದೇಶ ಗಳಿಂದ ಹೆಸರುಗಳು ಬಂದಿರುವಲ್ಲಿ, ನಮ್ಮ ಹಿರಿಯರಿಗೆ ವೇದಕಾಲೀನ ಆರ್ಯರ ಪವಿತ್ರ ನಿವಾಸಸ್ಥಾನದಿಂದಲೇ ಹೆಸರಾಯಿತು. ಮತ್ತು ಈಗಲೂ ಇಡೀ ಪಂಜಾಬ ದಲ್ಲಿ, ಪಂಜಾಬದ ಕುರುಕ್ಷೇತ್ರ ಪ್ರಾಂತಗಳಲ್ಲಿ ಇರುವ ಬ್ರಾಹ್ಮಣರಲ್ಲಿ ಪೂರ್ವಿಕ ರಾಗಿರುವವರೂ, ಸಂಖ್ಯೆಯಲ್ಲಿ ಮಿಗಿಲಾಗಿರುವವರೂ ಸಾರಸ್ವತರೇ.

ಆದರೆ ಜನಸಂಖ್ಯೆ ವೃದ್ಧಿಯಾಗುತ್ತಲೆ, ಹೊಸ ಹೊಸ ಬೀಡುಗಳನ್ನು ಹುಡುಕಬೇಕಾಗುತ್ತದೆ, ಬೇರೆ ಬೇರೆ ನೆಲೆಗಳಲ್ಲಿ ಪಸರಿಸಬೇಕಾಗುತ್ತದೆ ಎಂಬು ದರಿಂದ ಆ ಸಾರಸ್ವತರೂ ತಮ್ಮ ಮಾತೃದೇಶವನ್ನು ಬಿಟ್ಟು ಎಲ್ಲವರಲ್ಲ, ಹಲ ಹಲವರು–ಅನ್ಯಾನ್ಯ ದೇಶಗಳಿಗೆ ಪ್ರವಾಸ ಬೆಳೆಸಿದಂತೆ ತೋರುತ್ತದೆ. ಅವರ ಪ್ರವಾಸವು ಒಂದೇ ಸಲವಲ್ಲ ಬೇರೆ ಬೇರೆ ಬಾರಿಯಾದರೂ ಹೀಗೆ ಮೂರು ಮೊಗವಾಗಿ ಬೆಳೆದಿರಬೇಕು.

(೧) ಪಂಜಾಬದಲ್ಲಿಯ, ಸಾರಸ್ವತ ದೇಶದಿಂದ ತೆಂಪಡು (South West) ಆಗಿ ಹೊರಟು, ಸರಸ್ವತಿಯ ಹರಿವನ್ನೇ ಅನುಸರಿಸಿ, ಆಕೆ ದ್ವಾರಕೆಯ ಹತ್ತರ ಸಮುದ್ರಗಾಮಿನಿಯಾಗುವಲ್ಲಿವರೆಗೆ ಸಾರಸ್ವತರು ಮಾಡಿದ ಪ್ರವಾಸ ಅಧಿವಾಸಗಳನ್ನು ಕುರಿತು "ಮಹಾಭಾರತ"ದ 'ಶಲ್ಯಪರ್ವ' (ಅಧ್ಯಾಯ ೩೭ ಮತ್ತು ೫೭)ದಲ್ಲಿದೆ; ಮತ್ತು ಅಲ್ಲಲ್ಲಿ ಅವರು ತಂಗಿಕೊಂಡು ಬೀಡುಗಳನ್ನು ಸ್ಥಾಪಿಸಿದ ಎಡೆಗಳನ್ನು 'ಸಾರಸ್ವತ ತೀರ್ಥ'ಗಳೆಂದು ಅಲ್ಲಿ ಹೇಳಿದೆ. ಈಗಲೂ ಅಷ್ಟು ಉದ್ದಕ್ಕೆಲ್ಲ ಸಾರಸ್ವತರ ಉಪನಿವೇಶಗಳು ದಟ್ಟವಾಗಿ ಹರಡಿವೆ. "ಜೈಮಿನಿ ಭಾರತ"ದಲ್ಲಿ ಹೇಳಿರುವ ಈಗಣ ಕಾಠೇವಾಡವೆಂಬ ಆಗಣ ಸೌರಾಷ್ಟ್ರ ದೇಶದ ವೀರವರ್ಮನೆಂಬ ಅರಸನ ರಾಜಧಾನಿಯಾದ ಸಾರಸ್ವತ ಪುರಕ್ಕೆ ಆ ಸಾರಸ್ವತರ

3. Ibid.

ನೆಲೆಯಿಂದಲೇ ಆ ಹೆಸರು ಬಂತು – "ಸಾರಸ್ವತ ಪರೇರಮ್ಯೇ", "ಸುಶ್ರಾವ ವೀರ ವರ್ಮಾ ಸೌರಾಷ್ಟ್ರೇ", (ಜೈ.ಭಾ. ೪೭ನೆಯ ಅಧ್ಯಾಯ, ಶ್ಲೋ ೩ ಮತ್ತು ೫). ಭಾರತದ ಪಶ್ಚಿಮ ಭಾಗದಲ್ಲಿದ್ದ ಆ ಸಾರಸ್ವತ ದೇಶದ ಹೆಸರು "ಮಾರ್ಕಂಡೇಯ ಪುರಾಣ" (ಅ. ೫೭)ದಲ್ಲಿದೆ.

"ಭಾರುಕಚ್ಛಾಃ ಸಮಾಹೇಯಾಃ ಸರ್ವೇ ಸಾರಸ್ವತೈ ಸಹ" ಮತ್ಸ್ಯ ಪುರಾಣದಲ್ಲಿದೆ. (ಅ. ೧೧೩, ಶ್ಲೋ. ೫೦). ವನ ಪರ್ವ, ಶಲ್ಯ ಪರ್ವಗಳಲ್ಲಿದೆ. ಅದು ಶ್ರೀ ಕೃಷ್ಣನು ತನ್ನ ನರಲೀಲೆಯನ್ನು ಮುಗಿಸಿದ ಪ್ರಭಾಸ ಕ್ಷೇತ್ರದ ಬಳಿಯಲ್ಲಿ ಸಮುದ್ರ ತೀರದಲ್ಲಿದ್ದಂತೆ ಕಾಣುತ್ತದೆ. ಅದರ ರಾಜಧಾನಿಯಾದ "ಸಾರಸ್ವತ ಪುರ"ದಿಂದ ಅರ್ಜುನನು ಮುಂದಣ ಪ್ರಯಾಣವನ್ನು ನಾವೆಗಳಲ್ಲಿ ಮಾಡಿದನೆಂದಿದೆ – "ಪೋತೈಸ್ತಾರಯ ಮತ್ಸ್ಯನಂ" (ಜೈ. ಭಾ. ಅ. ೪೯, ಶ್ಲೋ. ೬೧).

(೨) ಸಾರಸ್ವತ ದೇಶವೆಂಬ ಪಂಜಾಬದಿಂದ ನಮ್ಮ ಹಿರಿಯರು ಕಾಶ್ಮೀರಕ್ಕೂ ಹೋಗಿ ನೆಲಸಿರುವರು. ಸ್ಕಂದ ಪುರಾಣಾಂತರ್ಗತವಾದ "ಮಂಜು ಕ್ಷೇತ್ರ ಮಾಹಾತ್ಮ್ಯ"ವೆಂಬ ಮಂಜೇಶ್ವರದ ಪೂರ್ವ ಕಥೆಯಲ್ಲಿ ಸಾರಸ್ವತ ಬ್ರಾಹ್ಮಣರನ್ನು "ಕಾಶ್ಮೀರಜಾಃ" (V ೯) ಎಂದಿದೆ. ಕಾಶ್ಮೀರದಲ್ಲಿ ಐತಿಯಾಸಿಕ ಕಾಲದಿಂದ ಇದ್ದಿರುವ ಬ್ರಾಹ್ಮಣರೆಲ್ಲರೂ ಸಾರಸ್ವತರೇ; ಪೂರ್ವಾತ್ಪೂರ್ವದಲ್ಲಿ ಅಲ್ಲಿ ಸಾರಸ್ವತರಲ್ಲದೆ ಇತರ ಬ್ರಾಹ್ಮಣರಿದ್ದಿಲ್ಲ. "ಕರ್ಣಸುಂದರಿ" ನಾಟಕೆಯನ್ನು ರಚಿಸಿದ ಬಿಲ್ಹಣ, "ಶಾಂತಿ ಶತಕ"ವನ್ನು ರಚಿಸಿದ ಚಿಲ್ಹಣ, "ರಾಜತರಂಗಿಣಿ" ಯನ್ನು ಬರೆದ ಕಲ್ಹಣ, ಪತಂಜಲಿಯ ಮಹಾಭಾಷ್ಯಕ್ಕೆ ಟೀಕೆ ಬರೆದ ಕೆಯ್ಯಟ, "ಕಾವ್ಯಪ್ರಕಾಶ"ವನ್ನು ರಚಿಸಿದ ಮಮ್ಮಟ ಇವರೆಲ್ಲರೂ ಕಾಶ್ಮೀರದ ಸಾರಸ್ವತರೇ.

(೩) ಯಜುರ್ವೇದದ "ಶತಪಥ ಬ್ರಾಹ್ಮಣ"ದಲ್ಲಿ ಸರಸ್ವತೀ ನದಿಯ ತೀರದಲ್ಲಿದ್ದ ಬ್ರಾಹ್ಮಣರು ಅಲ್ಲಿಂದ ಮೂಡು ಮೊಗವಾಗಿ ದಕ್ಷಿಣಕ್ಕೆ ಸರಿದು ಕೋಸಲ–ವಿದೇಹ ದೇಶಗಳ ನಡುವೆ ಹರಿವ "ಸದಾನೀರಾ" ಎಂಬ ನದಿಯನ್ನು ದಾಟ ವಿದೇಹ ದೇಶದಲ್ಲಿ ಎಂದರೆ ಈಗಣ ಉತ್ತರ ಬಿಹಾರದಲ್ಲಿ ನೆಲಸಿದರೆಂದು ಆಖ್ಯಾಯಿಕೆ ಇದೆ.

'ವಿದೇಘೋ ಹ ಮಾಥವ್ಯೋಽಗ್ನಿಂ ವೈಶ್ವಾನರಂ ಮುಖೇ ಬಭಾರ । ತಸ್ಯ ಗೋತಮೋ ರಾಹೂಗಣ ಋಷಿಃ ಪುರೋಹಿತ ಆಸ । .............ತರ್ಹಿ ವಿದೇಘೋ ಮಾಥವ ಆಸ । ಸರಸ್ವತ್ಯಾಂ ಸತತ ಏವ ಪ್ರಾಙ್ ದಹನ್ನಭೀಯಾ ಯೇಮಾ ಪೃಥಿವೀಂ ತಂ ಗೋತಮಶ್ಚ ರಾಹೂಗಣೋ ವಿದೇಘಶ್ಚ ಮಾಥವಃ ಪಶ್ಚಾದ್ದಹಂತವನ್ವೀಯತುಃ ಸ ಇಮಾಃ ಸರ್ವಾನದೀರತಿದಾಹ ಸದಾನೀರೇತ್ಯುತ್ತರಾ ದ್ಗಿರೇರ್ನಿರ್ಧಾವತಿ ತಾಂ ಹೈವ ನಾತಿದದಾಹ ತಾಂ ಹಸ್ಮ ತಾಂ ಪುರಾ

ಬ್ರಾಹ್ಮಣಾ ನ ತರಂತ್ಯನ ತಿದಗ್ಧಾಗ್ನಿನಾ ವೈಶ್ವಾನರೇಣೇತಿ ॥ (I ಕಾಂಡ ೪, ಅಧ್ಯಾಯ ೧ ಬ್ರಾಹ್ಮಣ 10 & 14)

ಇದರಿಂದ ನಮ್ಮ ಹಿರಿಯರು ಸರಸ್ವತಿ ನದಿಯ ತೀರದಿಂದ ವಿದೇಹಕ್ಕೆ ತೆಮ್ಮೂಡು (South east) ಮೊಗವಾಗಿಯೂ ಪ್ರವಾಸಗೆಯ್ದಂತೆ ತೋರುತ್ತದೆ. ನಮಗೆ ಆವಶ್ಯಕವಾದ ಪ್ರವಾಸವಿದೇ. ಏಕೆಂದರೆ ಆಗಣ ವಿದೇಹವೆಂದರೆ ಈಗಣ ಉತ್ತರ ಬಿಹಾರ, ಮತ್ತದೇ ದೇಶವು ತ್ರಿಹೋತ್ರ ತೀರಭುಕ್ತ ಎಂದು ಮೊದಲಾಗಿ ಕರೆಯಲ್ಪಡುವ ಈಗಣ Tirhut (ತಿರ್ಹೂತ್) ಎಂಬುದು. ಶ್ರೀ ಮಹಾವಿಷ್ಣುವಿನ ಅವತಾರವಾದ ಪರಶುರಾಮನು ಈ ಭಾರತ ಭೂಮಿಯನ್ನು ೨೧ ಬಾರಿ ನಿಃಕ್ಷತ್ರಿಯವಾಗಿಸಿ, ಆ ಬಳಿಕ ಅದನ್ನು ಬ್ರಾಹ್ಮಣರಿಗೆ ಧಾರೆಯೆರೆದಿತ್ತು, ಹಾಗೆ ದಾನಗೆಯ್ದ ಭೂಮಿಯಲ್ಲಿ ತಾನಿರಲಾಗದೆಂದು ಪಶ್ಚಿಮ ಸಮುದ್ರತೀರಕೆಯ್ದಿ, ಅಲ್ಲಿ

**ನವೀನಂ ನಿರ್ಮಿತಂ ಕ್ಷೇತ್ರಂ ಶೂರ್ಪಾರಕಮನುತ್ತಮಂ ।**
**ವೈತರಣ್ಯಾ ದಕ್ಷಿಣೇ ತು ಸುಬ್ರಹ್ಮಣ್ಯಾಸ್ತಥೋತ್ತರೇ ।**
**ಸಹ್ಯಾತ್ಸಾಗರ ಪರ್ಯಂತಂ ಶೂರ್ಪಾಕಾರಂ ವ್ಯವಸ್ಥಿತಮ್ ॥**

(ಸಹ್ಯಾದ್ರಿಖಂಡ, ಉತ್ತರ ಭಾಗ - 2-3-24)

ಎಂದರೆ, ಈಗಣ ಠಾಣಾ ಜಿಲ್ಲೆಯಲ್ಲಿರುವ ವೈತರಣೀ ನದಿಯಿಂದ ಕನ್ಯಾಕುಮಾರಿ ವರೆಗೆ ಉದ್ದಕ್ಕೆ ಚಾಚಿರುವ ಪರಶುರಾಮ ಸೃಷ್ಟಿಯೆಂದು ಹೆಸರ್ಗೊಂಡಿರುವ ಈ ಸಪ್ತಕೊಂಕಣವನ್ನು ನಿರ್ಮಿಸಿ, ತ್ರಿಹೋತ್ರ ದೇಶದಿಂದ ಸಾರಸ್ವತ ಬ್ರಾಹ್ಮಣರನ್ನು ಇಲ್ಲಿಗೆ ಕರೆತಂದು, ಅವರನ್ನು ಗೋವಾ ದೇಶದಲ್ಲಿ ಸ್ಥಾಪಿಸಿದನೆಂದು

**'ಪಶ್ಚಾತ್ ಪರಶುರಾಮೇಣ ಹ್ಯಾನೀತಾ ಮುನಯೋ ದಶ ।**
**ತ್ರಿಹೋತ್ರವಾಸಿನಶ್ಚೈವ ಪಂಚ ಗೌಡಾಂತರಸ್ತಥಾ ।**
**ಗೋಮಾಂಚಲೇ ಸ್ಥಾಪಿತಾ ........॥**

(ಸ.ಖ. ಉತ್ತರ ಭಾಗ - I-47-48)

"ಸ್ಕಂದ ಪುರಾಣದ" 'ಸಹ್ಯಾದ್ರಿ ಖಂಡ'ವೆಂಬ ಭಾಗದಲ್ಲಿದೆ. ಪರಶುರಾಮನೇ ಆ ಸಾರಸ್ವತರನ್ನು ತ್ರಿಹೋತ್ರದಿಂದ ಗೋವೆಗೆ ಕರೆತಂದನೆಂಬುದನ್ನು ಈಗಣ ಇತಿಹಾಸವು ಒಪ್ಪದಿರಬಹುದಾದರೂ, ತ್ರಿಹೋತ್ರದಲ್ಲಿ ಆ ಪೂರ್ವಕಾಲದಲ್ಲಿ ಕ್ಷಾಮಡಾಮರಗಳೇನೋ ಉತ್ಪನ್ನವಾಗಿ ಅಥವಾ ಇನ್ನಾವ ಅನಿವಾರ್ಯವಾದ ನಿಮಿತ್ತಗಳಿಂದೇನೋ ಆ ಸಾರಸ್ವತರು ಪರಶುರಾಮನ ಸೃಷ್ಟಿ ಎಂದು ಪ್ರಖ್ಯಾತವಾದೀ ಪಶ್ಚಿಮ ಕರಾವಳಿ ಯಾವ ಕಾಲದಲ್ಲಿಯೂ ಫಲವತ್ತೆಂದೂ ಸುಭಿಕ್ಷವೆಂದೂ ಹಿಂದಣ ಕಾಲದಿಂದಲೇ ಪ್ರಸಿದ್ಧವಿರುವುದರಿಂದ ಈ ಕಡೆಗೆ ತಮ್ಮಿಷ್ಟಕ್ಕೆ ಪ್ರವಾಸಗೆಯ್ದು ಬಂದರೆಂದರೆ ಒಪ್ಪಬಹುದಷ್ಟೆ. ಹೇಗೂ ತ್ರಿಹೋತ್ರದಿಂದ ಗೋವೆವರೆಗೆ ದಾರಿಯುದ್ದಕ್ಕೆ ಎಲ್ಲೆಲ್ಲಿಯೂ ಬಹಳ ಹಳೆಯ ಕಾಲದಿಂದ ನೆಲಸಿರುವ ಸಾರಸ್ವತರ ಬೀಡುಗಳು ಈಗಲೂ ಇವೆ. ಹೀಗೆ ತ್ರಿಹೋತ್ರದಿಂದ

ಗೋವೆಯಲ್ಲಿ ಬಂದು ನೆಲಸಿದ ಸಾರಸ್ವತ ಬ್ರಾಹ್ಮಣರ ಸಂತಾನರೇ ನಾವೀ ಕನ್ನಡ ಜಿಲ್ಲೆ ಎಂಬ ತುಳುನಾಡಿನಲ್ಲಿ ನೆಲಸಿರುವ ಸಾರಸ್ವತರು.

ಹೀಗೆ ಗೋವೆಯಲ್ಲಿ ನಮ್ಮ ಹಿರಿಯರ ಅಧಿವಾಸವು ಯಾವ ಕಾಲದಲ್ಲಿ ಆಗಿರಬಹುದೆಂಬುದನ್ನು ನಿಷ್ಕೃಷ್ಟಗೊಳಿಸತಕ್ಕ ಸಾಧನಗಳಿಲ್ಲವಾದರೂ, "ಮಂಜುಲ ಮಾಹಾತ್ಮ್ಯ"ದಲ್ಲಿ ಹೇಳಲ್ಪಟ್ಟಿರುವ ವಿರೂಪಾಕ್ಷನೆಂಬ ಗೋವೆಯ ಸಾರಸ್ವತ ಬ್ರಾಹ್ಮಣನು ಗೋವೆಯಿಂದ ತೀರ್ಥಾಟನದ ಬಗ್ಗೆ ಹೊರಟು ದಕ್ಷಿಣ ಮಾರ್ಗವಾಗಿ ಇದೇ ಪಶ್ಚಿಮ ಸಮುದ್ರ ತೀರದಲ್ಲಿರುವ ಊರೂರುಗಳನ್ನು ಸುತ್ತಿ ಬರುವಂದು, ಮೂಲ್ಕಿಯ ಬಳಿಯ ಶಾಂಭವೀ ನದಿಯನ್ನೂ, ಪಾವಂಜೆಯ ಕುಟಜಾ ನದಿಯನ್ನೂ, ಕೂಳೂರಿನ ಬಳಿಯ ಪುಲಿನಜಂಘೆಯನ್ನೂ ದಾಟಿ ಅಲ್ಲಿಂದ ಕದಲೀವನವನ್ನು ಎಂದರೆ ಮಂಗಳೂರಿನ ಕದ್ರೆಯನ್ನು ಸೇರಿ, ಅಲ್ಲಿಂದ ಬಳಿಕ ನೇತ್ರಾವತಿಯನ್ನು ದಾಟಿ ರುದ್ರಪಾದ ಅಥವಾ ಸೋಮೇಶವೆಂಬ ಈಗಣ ಉಳ್ಳಾಲದ ಬಳಿಯ ಸೋಮೇಶ್ವರಕ್ಕೆ ಬಂದನೆಂಬಲ್ಲಿ,[4] ಮಂಗಳೂರು ಎಂಬ ಹೆಸರೇ ಇಲ್ಲದಿರುವುದರಿಂದ, ಆತನಲ್ಲಿಗೆ ಬಂದುದು ಆ ಊರಿಗೆ ಮಂಗಳೂರು ಎಂಬ ಹೆಸರು ಬರುವುದಕ್ಕೆ ಮುಂಚೆಯೇ ಆಗಿರಬೇಕೆಂಬುದರಿಂದ, ಈ ಮಂಗಳೂರು ಎಂಬುದು ಕ್ರಿ. ಶ. ೨ನೆಯ ಶತಮಾನದಲ್ಲಿದ್ದ ಪ್ಟೊಲೆಮಾಯ (Ptolemy)ನ್ನು ಗ್ರೀಕ್ ಭಾಷೆಯಲ್ಲಿ ಬರೆದ ಭೌಗೋಲಿಕ ಗ್ರಂಥದಲ್ಲಿ "ಮಂಗನೂರ್" (Manganoor) ಎಂದೂ "Nitra emporiam" (ನೇತ್ರಾವತಿಯ ಬಂದರು) ಎಂದು ಹೇಳಲ್ಪಟ್ಟಿರುವುದರಿಂದ,[5] ವಿರೂಪಾಕ್ಷನ ಯಾತ್ರೆಯ ಕಾಲವು ಕ್ರಿಸ್ತಪೂರ್ವವಾಗಿರಬೇಕೆಂದು ನಿಷ್ಪನ್ನವಾಗುವುದರಿಂದ, ಗೋವೆಯಲ್ಲಿ ನಮ್ಮ ಹಿರಿಯರು ಅದಕ್ಕಿಂತ ಹಲವು ಶತಕಗಳ ಹಿಂದೆಯೇ ನೆಲಸಿರಬೇಕೆಂದಿಷ್ಟು ಹೇಳಬಹುದು.

ಅವರ ಸಂತಾನರಾದ ಈ ದೇಶದಲ್ಲಿರುವ ನಾವೀಗ ವೈಷ್ಣವರಾಗಿರುವಂತೆ ನಮ್ಮ ಹಿರಿಯರು ವೈಷ್ಣವರಾಗಿರಲಿಲ್ಲ; ಅವರು ಶೈವರೊ ಶಾಕ್ತರೊ ಆಗಿದ್ದರ ಬೇಕೆಂಬುದಕ್ಕೆ ಯಾವ ಹಿಂದಣ ಕಾಲದಿಂದೇನೊ ನಮ್ಮ ಹಿರಿಯರು ಬಹುಶಃ ತಾವು ತ್ರಿಹೋತ್ರದಿಂದ ಹೊರಟು ಬರುವಂದೇ ಏನೊ ತಮ್ಮೊಂದಿಗೆ ಗೋವೆಗೆ ಕೊಂಡು ಬಂದು ಅಂದಿನಿಂದ ಈ ವರೆಗೂ ಎಷ್ಟೋ ತಲತಲಾಂತರಗಳಿಂದ ಗೋವೆಯಲ್ಲಿರುವ ನಮ್ಮವರು ಮತ್ತು ನಾವು ಆರಾಧಿಸಿ ಬರುವ ನಮ್ಮ ಕುಲದೇವತೆಗಳೆಲ್ಲ ಸಾಕ್ಷಿಯಾಗಿವೆ. ಇವೆಲ್ಲವು ಒಂದೊ ಶಿವಲಿಂಗಗಳು, ಇಲ್ಲವೆ ಭಗವತಿಯ ವಿಗ್ರಹಗಳು ಅಲ್ಲದೆ, ಇವಲ್ಲಿ ವೈಷ್ಣವ ಮೂರ್ತಿಗಳಿಲ್ಲ; ನರಸಿಂಹ ಮತ್ತು ದಾಮೋದರ ಎಂಬ ವೈಷ್ಣವ ಹೆಸರುಗಳು ಉಳ್ಳವು ಕೂಡಾ

4. ಈ ವಿರೂಪಾಕ್ಷನ ತೀರ್ಥಾಟವನ್ನು 'ಕಾರ್ಕಳದ ಶಕ್ತಿ' ಮಾಸ ಪತ್ರಿಕೆಯಲ್ಲಿ ವಿವರವಾಗಿ ಹೇಳಿರುತ್ತೇನೆ. (II. 1. ಪು. 457-466)
5. Manual of Madras Presidency, Vol. III- P. 466

ಮೂರ್ತಿಗಳಲ್ಲ, ಶಿವಲಿಂಗಗಳೇ. ಗೋವೆಯಲ್ಲಿಯ ಕೆಲಕೆಲ ದೇವಾಲಯಗಳಲ್ಲಿ ಇರುವ ಶಿವಲಿಂಗಗಳ ಪಕ್ಕದಲ್ಲಿ, ಅಥವಾ ಅನ್ಯತ್ರ ಸ್ವತಂತ್ರ ದೇವಾಲಯಗಳಲ್ಲಿ ಲಕ್ಷ್ಮೀನಾರಾಯಣ ಮೊದಲಾದ ವೈಷ್ಣವ ಮೂರ್ತಿಗಳು ಈಗ ಕಾಣಬರುವುದಾದರೂ ಅವೇನೊ ನಮ್ಮ ಹಿರಿಯರ ಕಾಲದಿಂದಿದ್ದ ಪ್ರಾಚೀನ ಮೂರ್ತಿಗಳಲ್ಲ, ವೈಷ್ಣವರಾದ ಮೇಲೆ ಇತ್ತೀಚೆಗೆ ಆಯಾ ಕಾಲದಲ್ಲಿ ನಮ್ಮ ತ್ರಿಮಠಗಳಲ್ಲಿ ಒಂದಾದ ಗೋಕರ್ಣ-ಪರ್ತಗಾಳಿ ಮಠದ ಯತಿಗಳಿಂದ ಪ್ರತಿಷ್ಠಿಸಲ್ಪಟ್ಟ ಆಧುನಿಕ ಮೂರ್ತಿಗಳಷ್ಟೆ.

ಅವರ ಆ ಕಾಲದ ಧರ್ಮವು ಶೈವ ಮತವೆಂಬುದಕ್ಕೆ ಇನ್ನೊಂದು ದೃಷ್ಟಾಂತವೆಂದರೆ, ಇಂದಿಗೆ ಸುಮಾರು ೧೨-೧೩ ಶತಮಾನಗಳ ಮುಂಚಿನಿಂದ ಗೋವೆಯಲ್ಲಿ ನಮ್ಮ ಹಿರಿಯರು ಏರ್ಪಡಿಸಿರುವ ಕೈವಲ್ಯಪುರ ಅಥವಾ ಕವಳೆಯ ಮಠವೆಂಬುದು ಶೈವ ಸಂಸ್ಥೆ. ಶ್ರೀಮಚ್ಛಂಕರಾಚಾರ್ಯರ ಗುರುವಾದ ಗೋವಿಂದ ಯತಿಯ ಗುರುವಾದ ಕ್ರಿ.ಶ.ಸು. ೭ನೆಯ ಶತಮಾನದ ಅಥವಾ ಅದಕ್ಕೆ ಹಿಂದಣವರಾದ ಗೌಡಪಾದಾಚಾರ್ಯರೆಂಬವರು ತಮ್ಮ "ಕಾರಿಕೆ"ಯಲ್ಲಿ ಪ್ರಥಮತಃ ನಿರೂಪಿಸಿದ ಅದ್ವೈತ ಸಿದ್ಧಾಂತದ ಮೂಲಪೀಠಿಕೆಯನ್ನೇ ಶಂಕರಾಚಾರ್ಯರು ಸಮಗ್ರ ಭಾರತದಲ್ಲಿ ವಿಕಾಸಗೊಳಿಸಿದರು, ಇವರ ಹೆಸರಾದ "ಗೌಡಪಾದ" ಎಂಬುದರಿಂದಲೇ ಇವರು ಪಂಚಗೌಡರಲ್ಲಿ ಸೇರಿದವರೆಂದೂ, ಇವರು ದಕ್ಷಿಣ ಭಾರತವಾಸಿಗಳಾಗಿದ್ದರೆಂಬ ಇತಿಹಾಸವು ದಿಟವೆಂದಾದರೆ ದಕ್ಷಿಣ ಹಿಂದುಸ್ಥಾನದಲ್ಲಿ ಸಾರಸ್ವತರಲ್ಲದೆ ಇತರ ಗೌಡ ಬ್ರಾಹ್ಮಣರು ಆಗ್ಗೆ ಬಂದಿಲ್ಲವೆಂಬುದರಿಂದ ಇವರು ಸಾರಸ್ವತ ಬ್ರಾಹ್ಮಣರೆಂದೂ ದೃಢವಾಗುತ್ತದೆ. ಇವರೇ ನಮ್ಮ ಕವಳೇ ಅಥವಾ ಕೈವಲ್ಯಪುರ ಮಠದ ಮೂಲ ಪುರುಷರು; ಇವರ ಶಿಷ್ಯರಾಗಿದ್ದ ವಿವರಣಾನಂದ ಸರಸ್ವತಿ ಎಂಬವರಿಂದಲೇ ಆ ಮಠ ಪರಂಪರೆ ಪ್ರಾರಂಭಿಸುತ್ತದೆ. ಮತ್ತು ಅಲ್ಲಿಂದ ಇಲ್ಲಿ ವರೆಗೆ ಪ್ರತಿಯೊಬ್ಬ ಯತಿಯ ಹೆಸರಿನ ಕೊನೆಯಲ್ಲಿ "ಗೌಡ ಪಾದಾಚಾರ್ಯ" ಎಂಬೀ ಪರಂಪರಾಗತ ಬಿರುದಿದೆ, ಮತ್ತು ಅವರಿಗೆ ನಾಸಿಕ, ಖಾನಾಪುರ ಮೊದಲಾದ ಅನೇಕ ಸ್ಥಳಗಳಲ್ಲಿರುವ ಮಠಗಳೆಲ್ಲ ಬಹಳ ಹಿಂದಣಿಂದಲೇ ಗೌಡಪಾದಾಚಾರ್ಯ ಮಠಗಳೆಂದು ಕರೆಯಲ್ಪಡುತ್ತವೆ. ಆ ಮಠವು ದ್ವೈತವನ್ನಲ್ಲ, ಅದ್ವೈತ ಸಿದ್ಧಾಂತವನ್ನು ಅನುಸರಿಸುತ್ತದೆ; ಅವರಿಗೆ ವಿಷ್ಣುವೇ ಸರ್ವೋತ್ತಮನಲ್ಲ, ಹರಿಹರರು ಸಮಾನರಾಗಿ ಆರಾಧ್ಯರು.

ಹೀಗೆ ಆ ಮಠವು ಸ್ಥಾಪಿತವಾದ ಬಳಿಕ ಹೆಚ್ಚು ಕಡಿಮೆ ಆರೇಳು ಶತಮಾನಗಳ ಕಾಲಕ್ಕೆ ನಮ್ಮ ಹಿರಿಯರು ಹರಿಹರ ಭಕ್ತರೂ ಅದ್ವೈತಿಗಳೂ ಆಗಿರುವಲ್ಲಿ, ಕ್ರಿ. ಶ. ೧೩ನೆಯ ಶತಮಾನದಲ್ಲಿ ಶ್ರೀ ಮಧ್ವಾಚಾರ್ಯರು ದ್ವೈತ ಸಿದ್ಧಾಂತವನ್ನೂ ವೈಷ್ಣವ ಧರ್ಮವನ್ನೂ ಪ್ರಚಾರಗೊಳಿಸುವ ದಿಗ್ವಿಜಯದಲ್ಲಿ ಗೋವೆಯನ್ನೂ ಸಂದರ್ಶಿಸಿದರೆಂದು "ಮಧ್ವ ವಿಜಯ"ದಲ್ಲಿದೆ. ಆಗ್ಗೆ ನಮ್ಮ ಹಿರಿಯರಲ್ಲಿ ಅನೇಕ ಮಂದಿ ಮಾಧ್ವ ಮತವನ್ನು ಅಂಗೀಕರಿಸಿದರು ಮತ್ತು ಅಂದಿನಿಂದ ನಮ್ಮಲ್ಲಿ ದ್ವೈತ ಸಿದ್ಧಾಂತವೂ ವೈಷ್ಣವ ಧರ್ಮವೂ ಮೊದಲಾದುವು.

ಆದರೆ ಚೋದ್ಯವೇನೆಂದರೆ, ಅದ್ವೈತವನ್ನು ಬಿಟ್ಟು ದ್ವೈತವನ್ನೂ, ಶೈವ ಮತವನ್ನು ಬಿಟ್ಟು ವೈಷ್ಣವ ಧರ್ಮವನ್ನೂ ಸ್ವೀಕರಿಸುವಂದು ಕೂಡಾ ಅವರು ಆ ಮುಂಚಿನಿಂದ ಆರಾಧಿಸುತ್ತ ಬಂದ ತಮ್ಮ ಶೈವ-ಶಾಕ್ತ ಕುಲದೇವತೆಗಳಲ್ಲಿ ಒಂದೇ ಒಂದನ್ನಾದರೂ ಅಲ್ಲಗಳೆಯಲಿಲ್ಲ; ಅವನ್ನು ಆರಾಧಿಸುವ ವಿಧಾನಗಳಲ್ಲಿ ಅಷ್ಟಷ್ಟು ಮಾರ್ಪಡಿಸಿದರು ಮಾತ್ರವಲ್ಲದೆ, ಅವುಗಳಲ್ಲಿ ಯಾವುದೊಂದನ್ನಾದರೂ ತೊರೆದು ಬಿಡಲಿಲ್ಲ– ಈಗಲೂ ನಮ್ಮ ಕುಲದೇವತೆಗಳೆಂದರೆ ಆ ಪ್ರಾಚೀನ ಕಾಲದಿಂದ ಇದ್ದುವೇ ಅಲ್ಲದೆ ಅವಲ್ಲಿ ಒಂದಾದರೂ ಕಡಿಮೆಯಾಗಿಲ್ಲ.

ಗೋವೆಯಲ್ಲಿಯ ಶಿಲಾಲೇಖ ಮುಂತಾದುವು ಇನ್ನೂ ಸರಿಯಾಗಿ ಕ್ರಮವಾಗಿ ಪ್ರಕಟವಾಗಿಲ್ಲವೆಂಬುದರಿಂದ ಅಲ್ಲಿ ನೆಲಸಿದ ನಮ್ಮ ಹಿರಿಯರ ಐತಿಹಾಸಿಕ ಕಾಲದ ಚರಿತ್ರವನ್ನು ಕುರಿತು ಹೇಗೆಂದು ಹೇಳಲಾಗುವುದಿಲ್ಲ. ಅದನ್ನು ತಿಳಕೊಳ್ಳುವುದಕ್ಕೆ ಇನ್ನೆಷ್ಟು ಕಾಲಕ್ಕೆ ಕಾಯಬೇಕಾಗುವುದೋ ದೇವರೆ ಬಲ್ಲ. ಕ್ರಿ. ಶ. ೧೫೧೦ರಲ್ಲಿ ಪೋರ್ತುಗೀಸರು ಗೋವೆಯನ್ನು ಬಲಾತ್ಕಾರದಿಂದ ಸೆಳಕೊಂಡ ಬಳಿಕಣ ಕಾಲದಿಂದ ಅನೇಕ ಗ್ರಂಥಗಳು ಪೋರ್ತುಗೀಸ್ ಭಾಷೆಯಲ್ಲಿ ರಚಿಸಲ್ಪಟ್ಟವೆಯಂತೆ. ಆದರೆ ಆ ಕ್ರೂರಿಗಳ, ಅತ್ಯಾಚಾರಿಗಳ, ಧರ್ಮಾಂಧರ, ಅಧರ್ಮಿಗಳ ಗ್ರಂಥಗಳಲ್ಲಿ ಅವರ ಧರ್ಮಾಂಧತೆಗೆ ಬಲಿಬಿದ್ದ ನಮ್ಮವರನ್ನು ಕುರಿತು ಸತ್ಯವೆಷ್ಟು ಮಟ್ಟಗೆ ಇರಬಹುದೊ ಹೇಳಲಾಗುವುದಿಲ್ಲ. ಅಥವಾ ನಮ್ಮ ಹಿರಿಯರ ರಕ್ತದಲ್ಲಿ ತಮ್ಮ ಲೇಖನಿಯನ್ನು ಅದ್ದಿ ಬರೆದವರ ಮಾತುಗಳನ್ನು ಹೇಗೆ ನಂಬಬಹುದು? ಯಾರು ನಂಬಬಹುದು?

ಗೋವೆಯಲ್ಲಿ ಬಂದು ನೆಲಸಿದ ಬಳಿಕ ನಮ್ಮ ಹಿರಿಯರು ಐತಿಹಾಸಿಕ ಕಾಲದಲ್ಲಿ ಅಲ್ಲಿಂದಲೂ ಅತ್ತಿತ್ತಲಲ್ಲಿ ಪ್ರವಾಸ ಬೆಳೆಸಿದಂತೆ ತೋರುತ್ತದೆ; ಅಂಥವರನ್ನು ಈ ಮೂರು ಬಗೆಯಾಗಿ ಬೇರ್ಪಡಿಸಬಹುದು.

(೧) ಗೋವೆಯಿಂದ ಉತ್ತರಕ್ಕೆ ಸರಿದು ಈಗಣ ರತ್ನಾಗಿರಿ–ಕೊಲಾಬಾ–ಠಾಣಾ ಜಿಲ್ಲೆಗಳೆಂಬ ಉತ್ತರ ಕೊಂಕಣದಲ್ಲಿ ನೆಲಸಿದವರು. ಠಾಣಾ ಜಿಲ್ಲೆಯ ಬಡಗಣ ಗಡಿಯಿಂದ ಕೊಂಕಣ ದೇಶವಾರಂಭಿಸಿ, ಈ ಪಡುಗಡಲ ಕರೆಯಲ್ಲಿ ಗೋಕರ್ಣದ ವರೆಗೆ ದಕ್ಷಿಣಕ್ಕೆ ಚಾಚಿರುತ್ತದೆ; ಇದರಲ್ಲಿ ಠಾಣೆಯಿಂದ ಗೋವೆ ವರೆಗೆ ಉತ್ತರ ಕೊಂಕಣವೆಂದೂ ಗೋವೆಯಿಂದ ಗೋಕರ್ಣವರೆಗೆ ತಲಕೊಂಕಣ ಅಥವಾ ದಕ್ಷಿಣ ಕೊಂಕಣವೆಂದೂ ಹೇಳಲ್ಪಡುತ್ತದೆ. ಗೋವೆಯಲ್ಲಿಯ "ಸಾಸಷ್ಟಿ" (Salcette) ಮುಂತಾದ ದೇಶ ವಿಭಾಗ ನಾಮಗಳೂ, ಕುಶಸ್ಥಳ ಮುಂತಾದ ಸ್ಥಳ ನಾಮಗಳೂ ಬಹಳ ಹಿಂದಣ ಕಾಲದಿಂದಲೆ ಠಾಣಾ ಜಿಲ್ಲೆಯಲ್ಲಿಯ ಯಥಾಯೋಗ್ಯವಾದ ಪ್ರದೇಶಗಳಲ್ಲಿ ದೊರೆವುದೇ ಮೊದಲಾದ ಕಾರಣಗಳಿಂದ ಉತ್ತರ ಕೊಂಕಣದಲ್ಲಿ ನೆಲಸಿದ ಸಾರಸ್ವತರು ಗೋವೆಯಿಂದ ಅಲ್ಲಿಗೆ ಹೋದವರೆಂಬುದು ಕಂಡಿತವಾಗಿ ತಿಳಿಯುತ್ತದೆ. ಠಾಣಾ ಜಿಲ್ಲೆಯಲ್ಲಿ ಕ್ರಿ.ಶ. ೮೧೦ ರಿಂದ ೧೨೬೦ ವರೆಗೆ ಆಳಿದ ಶಿಲಾಹಾರ ವಂಶದ ಆಯಾ ಅರಸರೊಂದಿಗೆ

ಮಂತ್ರಿಗಳಾಗಿದ್ದ, ಮಹಾದೇವಯ್ಯ ಪ್ರಭು, ಲಕ್ಷ್ಮಣ ಪ್ರಭು, ಅನಂತ ನಾಯಕ, ಪ್ರಭಾಕರ ನಾಯಕ, ಅನಂತ ಪೈ ಪ್ರಭು, ಲಕ್ಷ್ಮಣ ನಾಯಕ ಮೊದಲಾದ ಸಾರಸ್ವತರ ಹೆಸರುಗಳು ಆ ಕಾಲದ ಶಾಸನಗಳಲ್ಲಿ ದೊರೆಯುತ್ತವೆ. ('Thana Gazetteer' Part II. foot notes 107-111.) ಇವರಲ್ಲಿ ಅನಂತ ಪೈ ಪ್ರಭು ಎಂಬಾತನ ತಾಬೆಯಲ್ಲಿದ್ದ ವೈದ್ಯನಾಥ ದೇವರ ಶಿವಾಲಯಕ್ಕೆ ಶ್ರೀ ಸ್ಥಾನಕವೆಂಬಾ ಠಾಣಾ ಪ್ರಾಂತದ ಅರಸನಾದ ಶಿಲಾಹಾರ ಕುಲದ ಸಮಗ್ರ ಕೊಂಕಣ ಚಕ್ರವರ್ತಿ ಅಪರಾದಿತ್ಯನು ಶಾ. ಶ. ೧೧೧೯ ಅಂದರೆ ಕ್ರಿ. ಶ. ೧೧೮೭ರಲ್ಲಿ ಮಹಾವಲಿ ಎಂಬೊಂದು ಗ್ರಾಮದ ಅಂಶವನ್ನು ದತ್ತಿಯಾಗಿ ಬಿಟ್ಟನೆಂದು ಒಂದು ಶಾಸನದಲ್ಲಿದೆ. (Journal of the Bombay Branch of the Royal Asiatic Society Vol. XII no. 34 pp. 332-335).

ಠಾಣೆಯಲ್ಲಿದ್ದ ಸಾರಸ್ವತರ ಎಷ್ಟೋ ದೇವಾಲಯಗಳೆಲ್ಲ ಕ್ರಿ.ಶ. ೧೬ನೆಯ ಶತಮಾನದಲ್ಲಿ ಪೋರ್ತುಗೀಸರು ಅಲ್ಲಿ ಒಳಹೊಕ್ಕ ಬಳಿಕ ಕೆಡವಲ್ಪಟ್ಟು, ಆ ಪವಿತ್ರ ಮೂರ್ತಿಗಳೂ ಆ ಭವ್ಯ ಮಂದಿರಗಳೂ ಆ ಹೀನರಿಂದ ಯಾವ ಹೀನತೆಗೆ ದಬ್ಬಲ್ಪಟ್ಟವೋ ನೆನಸುವಾಗ ಮೈಜುಮ್ಮೆನ್ನುತ್ತದೆ. ಈಗ ಠಾಣಾ–ಕೊಲಾಬಾ ಜಿಲ್ಲೆಗಳಲ್ಲಿ ಮರಾಠೀ ಭಾಷೆಯೇ ಜಾಸ್ತಿ ಇದೆಯಾದರೂ, ಆ ಕಾಲದಲ್ಲಿ ಆ ಕೊಂಕಣದಲ್ಲಿ ನಮ್ಮ ಕೊಂಕಣಿಯಲ್ಲದೆ ಬೇರೆ ಭಾಷೆ ಇದ್ದಿಲ್ಲ. ಆಗಣ ಕೆಲವು ಶಾಸನಗಳಲ್ಲಿ ಕೂಡ ಕೊಂಕಣಿ ಭಾಷೆಯ ಅನೇಕ ವಾಕ್ಯಗಳಿವೆ, ಮರಾಠಿಯ ಮಾತಿಲ್ಲ. ರತ್ನಗಿರಿ ಪ್ರಾಂತದಲ್ಲಿ ಈಗಲೂ ಬೇಕಾದಷ್ಟು ಮಂದಿ ನಮ್ಮವರಿರುವರು. ಠಾಣಾ–ಕೊಲಾಬಾ ಜಿಲ್ಲೆಗಳಲ್ಲಿ ಈಗ ಅಷ್ಟು ಮಂದಿ ಇಲ್ಲ. ಅಲ್ಲಿಯ ಬಡವರೆಲ್ಲರೂ, ಹಾಗೆಯೇ ಆಗ್ಗೆ ಮತಾಂತರಿಸಲ್ಪಟ್ಟು ಕ್ರೈಸ್ತರಾದವರ ಪೀಳಿಗೆಯವರೂ ಈಗಲೂ ಕೊಂಕಣಿಯನ್ನಾಡುತ್ತಾರೆ.

(೨) ಗೋವೆಯಿಂದ ಪೂರ್ವ ಮಾರ್ಗವಾಗಿ ಹೋಗಿ ಗಟ್ಟದ ಸೀಮೆಗಳಲ್ಲಿ ನೆಲಸಿದುದು. ಈ ಪ್ರವಾಸವನ್ನು ಕುರಿತು ಯೋಗ್ಯವಾದ ದಾಖಲೆಗಳು ಸಿಕ್ಕಿಲ್ಲ. ಬಹುಶಃ ಇನ್ನು ಸಿಗಲಾರವೆಂದಾದರೂ, ಕೆಳದಿಯ ನಾಯಕರ ಅರಸ್ಥಾನದಲ್ಲಿ ನಮ್ಮವರು ಉಚ್ಚ ಸ್ಥಾನಗಳಲ್ಲಿ ಇದ್ದರೆಂದು ತಿಳಿವುದರಿಂದಲೂ, ಆ ಅರಸರಲ್ಲಿ ಒಬ್ಬನಾದ ಶಿವಪ್ಪನಾಯಕನ (ಕ್ರಿ. ಶ. ೧೬೪೫–೧೬೬೦) ಮಂತ್ರಿಯಾಗಿ ನಾರಾಯಣ ಮಲ್ಯನೆಂಬವನೊಬ್ಬನಿದ್ದನೆಂದೂ ಸೋಮಶೇಖರ ನಾಯಕನೆಂಬ ಅರಸನ ಕಾಲದಲ್ಲಿ ಕ್ರಿ. ಶ. ಸು. ೧೬೬೪ರಲ್ಲಿ ಆ ನಾರಾಯಣ ಮಲ್ಯನು (Portuguese-'Narne Molla')[6] ಆ ಅರಸನ ರಾಯಭಾರಿಯಾಗಿ ಪೋರ್ತುಗೀಸರೊಡನೆ ಒಪ್ಪಂದವನ್ನು ಮಾಡುವ ಬಗ್ಗೆ ನಮ್ಮೀ ಜಿಲ್ಲೆಗೆ ಬಂದಿದ್ದನೆಂದೂ ತಿಳಿವುದರಿಂದ ಆತನ ಹಿರಿಯರು ಬಹಳ ಹಿಂದೆಯೇ ಗೋವೆಯಿಂದ ಇಕ್ಕೇರಿಯೇ

6. Mangalore : A Historical Sketch by G.M. Moraes (pp. 34 - 35)

ಮೊದಲಾದ ಗಟ್ಟದ ಸೀಮೆಗಳಲ್ಲಿ ನೆಲಸಿರಬೇಕು. ಏಕೆಂದರೆ ಪೋರ್ತುಗೀಸರು ಗೋವೆಯಲ್ಲಿ ಹಾವಳಿ ನಡೆಸಿದ ಬಳಿಕ ಕ್ರಿ. ಶ. ಸು. ೧೫೬೦ರಲ್ಲಿ ನಮ್ಮ ಹಿರಿಯರು ಅಲ್ಲಿಂದ ಸಮುದ್ರ ಮಾರ್ಗವಾಗಿ ದಕ್ಷಿಣಕ್ಕೆ ಹೊರಟು ಕರಾವಳಿಯ ದೇಶಗಳಲ್ಲಿ ಅಲ್ಲಲ್ಲಿ ನೆಲಸಿದರಲ್ಲದೆ, ಮೂಡು ಮೊಗವಾಗಿ ಗಟ್ಟದತ್ತ ಕಡೆಗೆ ಹೋದಂತೆ ಕಾಣುವುದಿಲ್ಲ. ಇನ್ನೊಂದು ಆಧಾರವೇನೆಂದರೆ ಕ್ರಿ.ಶ. ೧೫೬೦ರಲ್ಲಿ ಪೋರ್ತುಗೀಸರು ಗೋವೆಯಲ್ಲಿದ್ದ ನಮ್ಮ ಹಿರಿಯರನ್ನು, ಇಲ್ಲವೆ ಕೂಡಲೇ ಕ್ರೈಸ್ತ ಮತಕ್ಕೆ ಸೇರಬೇಕು, ಇಲ್ಲವೆ ಒಂದು ತಿಂಗಳ ಅವಧಿಯಲ್ಲಿ ಗೋವೆಯನ್ನು ಬಿಟ್ಟು ಹೋಗಬೇಕು ಎಂಬ ದಾರುಣವಾದ ಶಾಸನವನ್ನು ವಿಧಿಸಿ ನಿರ್ಬಂಧ ಪಡಿಸಿದ ಬಳಿಕ ತಾನೆ ಅವರು ಅಲ್ಲಿಂದ ಇತ್ತಕಡೆಗೆ ಹೊರಟು ಬಂದಿರಬೇಕಷ್ಟೆ. ಆದರೆ ಅದಕ್ಕೆ ಸುಮಾರು ೨೩ ವರ್ಷಗಳ ಮುಂಚೆಯೇ ಕ್ರಿ.ಶ. ೧೫೩೭ರಲ್ಲಿ ತುಳುನಾಡಿನ ಕಾರ್ಕಳದಲ್ಲಿ ನಮ್ಮ ದೇವಸ್ಥಾನದ ಪ್ರತಿಷ್ಠೆಯಾಗಿದೆಯೆಂದು ತೋರುವುದರಿಂದ ಆಗ್ಗೆ ಕಾರ್ಕಳದಲ್ಲಿದ್ದ ನಮ್ಮವರು ನೆಟ್ಟಗೆ ಗೋವೆಯಿಂದ ಇಲ್ಲಿ ಬಂದವರಲ್ಲ, ಆ ಕಾಲಕ್ಕೆ ಹಿಂದೆಯೇ ಗಟ್ಟದ ಸೀಮೆಯಿಂದ ಇಲ್ಲಿಗೆ ಬಂದು ಮನೆಮಾರು ಮಾಡಿಕೊಂಡಿದ್ದವರ ಪೀಳಿಗೆಯವರಾಗಿರಬೇಕೆಂದು ತುಂಬ ಸ್ಪಷ್ಟವಾಗುತ್ತದೆ.

(೩) ಕ್ರಿ.ಶ. ೧೫೬೦ರಲ್ಲಿ ಪೋರ್ತುಗೀಸರು ವಿಧಿಸಿದ ಧರ್ಮ ಪರಿವರ್ತನದ ಬಲಾತ್ಕಾರವನ್ನು ಎಡಗಾಲಿನಿಂದ ಅವರ ಮೋರೆಗೆ ಒದ್ದು ಧರ್ಮಾತ್ಮರಾದ ನಮ್ಮ ಹಿರಿಯರು ಸ್ವಧರ್ಮಕ್ಕಾಗಿ ತಮ್ಮ ಚಿರಕಾಲದ ಮಾತೃಭೂಮಿಯಾಗಿದ್ದ ಗೋವೆಯನ್ನು ಬಿಟ್ಟು, ಈ ಕರಾವಳಿಯಲ್ಲಿ ಆ ದುರುಳರ ಹಿಡುವಳಿಯ ಹೊರಗಿದ್ದ ಅನ್ಯಾನ್ಯ ಠಾವುಗಳಲ್ಲಿ ಬಂದು ನೆಲಸಿದಂದಿನಿಂದ ಇದುವರೆಗೂ ನಮ್ಮವರು ಈ ಕನ್ನಡ-ತುಳು-ಕೇರಳ ಜಿಲ್ಲೆಗಳಲ್ಲಿ ಇರುವರಷ್ಟೆ. ಆದರೆ ಗೋವೆಯಿಂದ ಹೊರಗೆ ಈ ಕರಾವಳಿಯಲ್ಲಿ ನಮ್ಮ ನೆಲೆಗಳು ಉಂಟಾಗುವುದಕ್ಕೆ ಅದೇ ಮೊದಲಲ್ಲ; ಅದಕ್ಕಿಂತ ಬಹಳ ಹಿಂದಣ ಕಾಲದಿಂದಲೆ ನಮ್ಮವರ ಅಧಿನಿವೇಶಗಳು ಇಲ್ಲೆಲ್ಲ ಅಲ್ಲಲ್ಲಿ ಎರಚಿದಂತಾದರೂ ಇದ್ದಿರಬೇಕು; ಮತ್ತು ಹೀಗೆ ಇತ್ತಲೆಲ್ಲ ನಮ್ಮ ನೆಲೆಗಳು ಆ ಮುಂಚೆಯೇ ಇದ್ದುದರಿಂದಲೆ, ಕ್ರಿ.ಶ. ೧೫೬೦ರಲ್ಲಿ ಗೋವೆಯಿಂದ ಸ್ವಧರ್ಮ ರಕ್ಷಣದ ಬಗ್ಗೆ ನಿರ್ವಾಸವನ್ನು ಕೆಯ್ಕೊಂಡವರು ತಮ್ಮವರು ಮುಂಚೆಯೇ ನೆಲಸಿ ಇರುತ್ತಿದ್ದ ಆಯಾ ನಾಡುಗಳಲ್ಲಿ ತಾವು ಬಂದು ನೆಲಸಿರಬೇಕು. ಇದು ಸರಿಯೆಂಬುದಕ್ಕೆ ಕ್ರಿ. ಶ. ೧೨೯೩ರಲ್ಲಿ ಮಂಜೇಶ್ವರ ದೇವಸ್ಥಾನವು ನಮ್ಮವರೊಂದಿಗಿತ್ತೆಂದು ನಾನು ಈ ಮುಂಚೆ ಕಾರ್ಕಳದ "ಶಕ್ತಿ" ಯಲ್ಲಿ (೧೧-೧) ವಿವರವಾಗಿ ಬರೆದಿರುವ ಲೇಖನವನ್ನು ಜಿಜ್ಞಾಸುಗಳು ನೋಡುವುದು, ಮತ್ತು ಯಾವೊಂದೆಡೆಯಲ್ಲಿ ಸಾಕಷ್ಟು ಸಮಾಜವಿಲ್ಲದ ಅಲ್ಲಿ ದೇವಾಲಯವಿದ್ದಿರಲಾರದೆಂಬುದರಿಂದ, ಆಗ್ಗೆಯೇ ಇಲ್ಲಿ ನಮ್ಮವರ ಸಾಕಷ್ಟು ವಸ್ತಿಯೂ ಇದ್ದಿರಬೇಕು.

ಈ ಲೇಖನದಲ್ಲಿ ಪೋರ್ತುಗೀಸರು ಗೋವೆಯಲ್ಲಿ ಮಾಡಿದ ಭಯಂಕರ ವಾದ ರಾಕ್ಷಸೀ ಹಾವಳಿಯನ್ನು ಕುರಿತು ಕೆಲಸಾರಿ ಹೇಳಬೇಕಾದುದರಿಂದ, ಅದೇನೆಂಬ ಕಲ್ಪನೆಯಾದರೂ ತಮಗೆ ದೊರೆವಂತೆ ಕ್ರೈಸ್ತನೊಬ್ಬನ ಗ್ರಂಥದಿಂದಲೆ ಈ ಕೆಲ ಉದ್ಗಾರಗಳನ್ನು ಎತ್ತಿ ಹೇಳುವೆನು.

(1) 'In the year 1560 A.C. the Jesuits proceeded to evangelize in the province of Salsette, which became thenceforward the chief field of their labours, the village of Cortalim being the first to witness the celebration of mass by them. ಎಂದರೆ ಗೋವೆಯಲ್ಲಿಯ ಸಾಸಷ್ಟಿ ಎಂಬ ಪ್ರಾಂತ; ಪೋರ್ತುಗೀಸರು ಗೋವೆಗೆ ಬರುವ ಮುಂಚೆ ನಮ್ಮ ಕುಲದೇವತೆಗಳ ಹೆಚ್ಚು ಕಡಿಮೆ ಎಲ್ಲಾ ದೇವಾಲಯಗಳು ಸಾಸಷ್ಟಿಯಲ್ಲಿ ಇದ್ದುವು. ಈಗ ಅಲ್ಲಿ ಒಂದೂ ಇಲ್ಲ, ಎಲ್ಲವೂ ಅಂದಿನಿಂದ ಆಯಾ ಬೇರೆ ಪ್ರಾಂತ್ಯಗಳಲ್ಲಿವೆ. Cortalim ಎಂದರೆ ಕುಶಸ್ಥಳ, ಆ ಮುಂಚೆ ಅಲ್ಲಿ ಶ್ರೀ ಮಂಗೇಶ ದೇವಾಲಯವಿತ್ತು; ಅದನ್ನು ಅವರು ಹಾಳು ಕೆಡವಿ ಅದೇ ಸ್ಥಳದಲ್ಲಿ ಕಟ್ಟಿದ ಇಗರ್ಜಿ ಈಗಲೂ ಅಲ್ಲಿದೆ. The conversion of the inhabitants of this Province was indeed very rapid, hundreds and thousands of them being baptized almost every year (ಬಲಾತ್ಕಾರದಿಂದವೆಂಬುದನ್ನು ಬೇರೆ ಹೇಳಬೇಕೆಂದಿಲ್ಲ.) Owing to this, several churches were erected on the ruins of Hindu temples, 280 of which are said to have been razed to the ground in 1567' (p. 65).

(2) 'Also the ruins of 200 idol temples, which Viceroy de Noronha totally demolished, that no memory might remain of monuments of such gross idolatry' (p. 154).

(3) 'There were also Jews, who had their own synagogues and their own mode of worship, but the Hindus were not allowed the public exercise of their religion' (p. 155).

(Jose Nicolau da Fonseca's 'Sketch of the city of Goa')

ಇದೆಲ್ಲವನ್ನು ಕೇಳುವಲ್ಲಿ ನಮ್ಮವರಲ್ಲಿ ಯಾವಾತನ, ಭಾರತ ಭೂಮಿ ಯಲ್ಲಿ ಜನ್ಮವೆತ್ತಿದ ಯಾವ ಹಿಂದುವಿನ ಮೈಯ್ಯ ಮುಳ್ಳು ಎದ್ದುನಿಲ್ಲದು? ಯಾರ ಎದೆಯ ನೆತ್ತರು ಕುದಿಯದು?

ಪೋರ್ತುಗೀಸರು ಗೋವೆಗೆ ಬರುವುದಕ್ಕೆ ಮುಂಚೆ ಅಲ್ಲಿ ಇದ್ದಷ್ಟು ದೇವಾಲಯಗಳು ಈಗ ಅಲ್ಲಿಲ್ಲ. ಈಗ ಇರುವವುಗಳಲ್ಲಿ ಕೂಡ, ಒಂದೇ

ಒಂದಾದರೂ ಅವರು ಆ ಪುಣ್ಯ ಭೂಮಿಯಲ್ಲಿ ಕಾಲಿಟ್ಟು ಅದನ್ನು ಕಲುಷಿತ ಗೆಯ್ವ ಮುಂಚೆ ಇದ್ದಲ್ಲಿ ಈಗ ಇಲ್ಲ. ಎಲ್ಲವೂ ಎಷ್ಟೆಷ್ಟು ದೂರ ದೂರದಲ್ಲಿ ಅನ್ಯಾನ್ಯ ಸ್ಥಾನಗಳಲ್ಲಿವೆ. ಹಲವು ಗೋವೆಯ ಎಲ್ಲೆಯಿಂದ ಹೊರಗೆ ಉತ್ತರ ಕನ್ನಡ ಜಿಲ್ಲೆಯಲ್ಲಿ ಇತ್ಯಾದಿಯಾಗಿವೆ. ಆ ಹಳೆಯ ದೇವಾಲಯಗಳಿದ್ದ ಅನೇಕ ಸ್ಥಳಗಳಲ್ಲಿ ಅದೇ ಬುನಾದಿಗಳಲ್ಲಿ ಈಗ ಇಗರ್ಜಿಗಳಿವೆ. ಆ ದೇವಾಲಯಗಳ ಕೆತ್ತನೆಯ ಕಲ್ಲುಗಳೇ ಮೊದಲಾದುವು ಈಗ ಆಯಾ ಇಗರ್ಜಿಯ ಮೆಟ್ಟುಗಳಿಗೆ ಹಾಸಿವೆ, ಎಲ್ಲವಕ್ಕೂ ಕಾಲವಿದೆ ಎಂದಾದರೆ ನಮ್ಮ ದೇವಾಲಯಗಳಿಗೆ ಮಾತ್ರ ಕಾಲವೇ? ಈ ಕುರಿತು ಇನ್ನು ಹೆಚ್ಚಿಗೆ ಹೇಳುವುದಕ್ಕೆ ಬಾಯಿಬಾರದು. ಅಥವಾ ಹೇಳಿದರೂ ಮನಸ್ಸನ್ನು ಕದಡಿಸಿ ಕೊಂಡಂತಾಗುವುದಲ್ಲದೆ ಬೇರೆ ಫಲವಿಲ್ಲ. ಇದೆಲ್ಲವನ್ನು ಸವಿಸ್ತಾರವಾಗಿ ಓದಲೆಳ ಸುವವರು ಶ್ರೀಯುತ ವಿ. ಎನ್. ಪಾಲೇಕರರ "ಭಯಂಕರ ಧರ್ಮಕ್ರಾಂತಿ" ಎಂಬ ಮರಾಠಿಯ ಚಿಕ್ಕದೊಂದು ಪುಸ್ತಕವನ್ನು ಓದಬಹುದು.

ನಾವು ಈಗ ಮಾತಾಡುವ ಕೊಂಕಣಿ ಭಾಷೆಯನ್ನು ಕುರಿತು ಹೇಳುವುದಾದರೆ, ಇದು ಮರಾಠಿಯಿಂದ ಹುಟ್ಟಿರಬೇಕೆಂದು ಹಲವರ, ಹಲವು ವಿದ್ವಾಂಸರ ಭಾವನೆ ಇದೆ. ಇದು ತಪ್ಪು, ಶುದ್ಧ ತಪ್ಪು. ಏಕೆಂದರೆ ಒಂದೇ ಮಾತಿನಲ್ಲಿ ಹೇಳುವುದಾದರೆ ಮರಾಠಿ ಭಾಷೆಯ ಆದಿಮಗ್ರಂಥಗಳಲ್ಲಿ ಒಂದಾಗಿರುವ ಜ್ಞಾನದೇವನೆಂಬ ಪ್ರಾಸಾದಿಕ ಕವಿಯು ಕ್ರಿ. ಶ. ೧೨೯೦ರಲ್ಲಿ ರಚಿಸಿದ "ಜ್ಞಾನೇಶ್ವರಿ" ಎಂಬ ಉದ್ಗ್ರಂಥದಲ್ಲಿ ಅನೇಕ ಕೊಂಕಣಿ ಮಾತುಗಳಿವೆ, ಹಲವು ಪ್ರಯೋಗಗಳು ಕೊಂಕಣಿ ಭಾಷೆಯ ವ್ಯಾಕರಣ ರೀತಿಯ ಸಹಾಯದಿಂದಲ್ಲದೆ ಮರಾಠಿ ಭಾಷೆಯ ವ್ಯಾಕರಣದ ಸಹಾಯದಿಂದ ವಿಶದೀಕರಿಸಲಿಕ್ಕೆ ಬರುವುದಿಲ್ಲ; ಆ ಹಳೆಯ ಕಾಲದಲ್ಲಿ ಕೊಂಕಣಿ ಭಾಷೆಯ ಮಾತುಗಳು ಕೆಲಕೆಲ ಶಾಸನಗಳಲ್ಲಿ ಕೂಡಾ ಸಿಗುತ್ತವೆ, ಮರಾಠಿಯ ಮಾತೇ ದೊರೆಯುವುದಿಲ್ಲ ವೆಂಬುದರಿಂದ ಕೊಂಕಣಿಯಲ್ಲಿ ಆಗ್ಗೆಯಾದರೂ ಸಾಹಿತ್ಯವಿರಲಿ ಇಲ್ಲದಿರಲಿ, ಆ ಭಾಷೆ ಜನರ ಆಡುವಿಕೆ- ತಿಳಿವಳಿಕೆಗಳಲ್ಲಿ ತುಂಬ ನೆಲಸಿತ್ತೆಂದೂ, ಮರಾಠಿ ಆಗ್ಗೆ ಇನ್ನೂ ಸ್ಫುಟವಾಗಿ ಹುಟ್ಟಿಲ್ಲ, ಅಥವಾ ಹುಟ್ಟಿದ್ದರೆ ಅದು ಬರೇ ನಾಣ್ನುಡಿ (potois)ಯಂತೆ ಇತ್ತೆಂದೂ, ಹಾಗಲ್ಲವಾದರೆ ಕೊಂಕಣಿಯಿಂದ ಮರಾಠಿ ಹುಟ್ಟಿರ ಬೇಕಲ್ಲದೆ ಮರಾಠಿಯಿಂದ ಕೊಂಕಣಿ ಹುಟ್ಟಿರಲಾರದೆಂದೂ ದೃಢವಾಗುತ್ತದೆ. ಅದಲ್ಲದೆ ಪಶ್ಚಿಮ ಸಮುದ್ರ ತೀರದ ಪ್ರಾಂತಕ್ಕೆ ಕೊಂಕಣವೆಂದಲ್ಲದೆ ಮಹಾ ರಾಷ್ಟ್ರವೆಂದು ಹೆಸರಿಲ್ಲ; ಮಹಾರಾಷ್ಟ್ರವೆಂದರೆ ಅದರ ಮೂಡು ಮಗ್ಗುಲಲ್ಲಿರುವ, ಸಮುದ್ರ ತಟವರ್ತಿಯಲ್ಲದ ಮಧ್ಯದೇಶ (inland country)ವಷ್ಟೆ. ಕೊಂಕಣ ವೇನೂ ಮಹಾರಾಷ್ಟ್ರದೊಂದು ಭಾಗವಲ್ಲ; ಯಾವ ಹಿಂದಣ ಕಾಲದಲ್ಲಿಯೂ ಅಲ್ಲ, ಈಗಲೂ ಅಲ್ಲ. ಮರಾಠಿ ಭಾಷೆ ಹುಟ್ಟಿದುದು ಸಂಸ್ಕೃತದ ಮಹಾರಾಷ್ಟ್ರ ಪ್ರಾಕೃತದಿಂದ; ಆದರೆ ಅದಕ್ಕಿಂತ ಎಷ್ಟೋ ಹಳೆಯದಾದ ಮಾಗಧೀ ಪ್ರಾಕೃತದಿಂದ ಕೊಂಕಣಿಯು ಜನ್ಮವೆತ್ತಿತು. ಬೌದ್ಧಗ್ರಂಥಗಳನ್ನು ಬರೆದಿರುವ ಪಾಲಿ ಭಾಷೆಯೂ,

ಜೈನಗ್ರಂಥಗಳನ್ನು ಬರೆದಿರುವ ಅರ್ಧಮಾಗಧಿಯೂ ಕೊಂಕಣಿಗೆ ಅತ್ಯಂತ ನಿಕಟವಾಗಿವೆ; ಮಹಾರಾಷ್ಟ್ರ ಪ್ರಾಕೃತವಾದರೂ ಶಾನೆ ದೂರವಿದೆ. ಹೀಗಾಗಲಿಕ್ಕೆ ಕಾರಣವಿದೆ. ಅದೇನೆಂದರೆ-ಸಾರಸ್ವತರು ತ್ರಿಹೋತ್ರವೆಂಬ ವಿದೇಹ ದೇಶದಲ್ಲಿ ನೆಲಸಿದರೆಂಬು ದನ್ನು ಮೇಲೆ ಹೇಳಿದೆಯಷ್ಟೆ. ಯಾವ ಬಿಹಾರ ದೇಶದ ಉತ್ತರ ಭಾಗವೇ ವಿದೇಹ ದೇಶವಾಗಿದ್ದಿತೋ, ಅದರ ದಕ್ಷಿಣ ಭಾಗವೇ ಆಗಣ ಮಗಧದೇಶ, ಎಂಬುದರಿಂದ ವಿದೇಹದಲ್ಲಿದ್ದ ಸಾರಸ್ವತರ ಭಾಷೆ ಮಾಗಧ-ಅರ್ಧ ಮಾಗಧಿಗಳಿಂದ ಹುಟ್ಟಿರಬೇಕು ಅಲ್ಲವೆ ಅವೇ ಆಗಿರಬೇಕು, ಅಲ್ಲದೆ ಅವಕ್ಕೆ ನಿಕಟತಮವಾಗಿರಬೇಕು. ಆ ವಿದೇಹದಿಂದ ಗೋವೆಗೆ ಬರುವಾಗ ಅವರು ಆಡುತ್ತಿದ್ದ ಭಾಷೆ ಅದೇ, ಮತ್ತದರಿಂದಲೇ ಅವರ ಸಂತಾನರಾದ ಗೋವೆಯಲ್ಲಿದ್ದ ತಮ್ಮ ಹಿರಿಯರು ಆಡುತ್ತಿದ್ದ ಈ ಕೊಂಕಣಿ ಭಾಷೆ ಹುಟ್ಟಿರಬೇಕು. ಗೋವೆ ಕೊಂಕಣ ದೇಶವೆಂಬುದರಿಂದ ಈ ಭಾಷೆಯ ವಿದೇಹ ದೇಶಕ್ಕೆ ಸಂಬಂಧಿಯಾದ ಮೂಲ ಹೆಸರು ಕ್ರಮೇಣ ಮರೆತು ಹೋಗಿ ಇದು ಕೊಂಕಣಿಯೆಂದಾದುದೇನೂ ಚೋದ್ಯವಲ್ಲ, ಮತ್ತು ಸಾವಿರಾರು ವರ್ಷಗಳಲ್ಲಿ ಗೋವೆಯಲ್ಲಿಯೂ, ದ್ರಾವಿಡ ಭಾಷಾ ಭೂಯಿಷ್ಟವಾದ ಇತರ ದೇಶಗಳಲ್ಲಿಯೂ ನೆಲಸಿರುವ ಈ ಭಾಷೆ ಕ್ರಮಶಃ ತನ್ನ ಮೂಲ ಭಾಷೆಯಿಂದ ಪಲ್ಲಟಿಸಿರುವುದೂ ಚೋದ್ಯವಲ್ಲ. ಮಹಾರಾಷ್ಟ್ರದ ನೆರೆಯಲ್ಲಿ ರುವ ಗೋವೆಗೆ ಬರುವ ಮುಂಚೆಯೇ ಸಾರಸ್ವತರು ಆಡುತ್ತಿದ್ದ ಈಗಣ ನಮ್ಮ ಭಾಷೆಯ ತಾಯಿ ಭಾಷೆ ಎಂದಿಗೂ ಮಹಾರಾಷ್ಟ್ರ ಪ್ರಾಕೃತದಿಂದ ಬಂದುದಲ್ಲ; ಏಕೆಂದರೆ ಮಹಾರಾಷ್ಟ್ರ ಪ್ರಾಂತಗಳೆಲ್ಲಿ? ವಿದೇಹ ದೇಶವೆಲ್ಲಿ? ಹಾಗೆಯೇ ಆಗಣ ಆ ಮೂಲ ಭಾಷೆಯಿಂದ ಹುಟ್ಟಿದೀ ಕೊಂಕಣಿಯೂ ಮರಾಠಿಯಿಂದ ಬಂದುದಲ್ಲ. ಕೊಂಕಣಿ ಭಾಷೆಯಲ್ಲಿ ಆ ಕಾಲದಲ್ಲಿ ಸಾಹಿತ್ಯವಿದ್ದಿತೋ ಏನೆಂಬುದನ್ನು ಈಗ ನಿಶ್ಚಯಿಸಲಾಗದಾದರೂ, ಪಕ್ಕದಲ್ಲಿ ಮೊಳೆತು ಬೆಳೆದ ಮರಾಠಿ ಭಾಷೆ ಕ್ರಮಶಃ ಸಾಹಿತ್ಯ ವಿಕಾಸವನ್ನು ಕೂಡಾ ಹೊಂದಿದುದರಿಂದ, ತನಗಿಂತ ವಯೋಧಿಕಳೂ ತನ್ನ ದೊಡ್ಡ ತಾಯ ಮಗಳೂ ಆದ ನಮ್ಮ ಕೊಂಕಣಿ ಭಾಷೆಯ ಮನೆಯನ್ನು ಆಕ್ರಮಿಸ ತೊಡಗಿದುದರಿಂದ, ಅತ್ತಣ ಕೊಂಕಣಿಯಲ್ಲಿ ಈಗ ಸಾವಿರಾರು ಮರಾಠಿ ಶಬ್ದಗಳಿವೆ, ವ್ಯಾಕರಣ ಪ್ರಯೋಗಗಳಿವೆ. ಮಾತ್ರವಲ್ಲ ಮುಂಬಾಯಿ ಇಲಾಖೆಯ ಅನೇಕ ದೇಶಗಳಲ್ಲಿ ಈಗ ಸಾಹಿತ್ಯ ಹೀನವಾಗಿರುವ ಕೊಂಕಣಿಯನ್ನು ಮಾತನಾಡುವುದಕ್ಕೆ ಹೇಸಿಯೊ ನಮ್ಮವರು ಮರಾಠಿಯನ್ನೇ ಆಡುತ್ತಿರುವವರು, ಕೊಂಕಣಿಭಾಷೆಯ ಹೊಲಬರಿಯರು. ನಮ್ಮೀ ದೇಶಗಳಲ್ಲಿ ಕೂಡ ತುಳು-ಕನ್ನಡ-ಮಲೆಯಾಳಿ ಶಬ್ದಗಳು ನಮ್ಮ ಭಾಷೆಯಲ್ಲಿ ಬೇಕಾದಷ್ಟು ನುಗ್ಗಿಕೊಂಡಿವೆಯಾ ದರೂ, ನಾವಿದನ್ನು ಇನ್ನೂ ಮಾತೃಪ್ರೇಮದಿಂದ ಆದರಿಸಿ ನುಡಿಯುತ್ತಿರುವೆವು, ಬಿಟ್ಟುಬಿಡಲೂ ಒಡಂಬಡೆವು ಎಂಬೀ ಕಾರಣದಿಂದ ನಮ್ಮೀ ಭಾಷೆಯಲ್ಲಿ ನಾವಿಲ್ಲಿಗೆ ಬಂದ ಬಳಿಕ ನಾವೇನೂ ಸಾಹಿತ್ಯವನ್ನು ಬೆಳಸಿಲ್ಲವಾದರೂ, ಇದಕ್ಕೆ

ಇನ್ನೂ ಸಾಕಷ್ಟು ಚೇತನವಿದೆ, ಜೀವವಿದೆ, ವ್ಯಕ್ತಿತ್ವವಿದೆ. ಇನ್ನಾದರೂ ಇದರಲ್ಲಿ ಸಾಹಿತ್ಯ ಉಂಟುಮಾಡಬೇಕೆ? ಎಂಬ ಪ್ರಶ್ನೆಯನ್ನು ತರ್ಕಿಸುವರೆ ಈ ನಿಬಂಧವು ಅಭೂಮಿ ಎಂದಾದರೂ, ಹಾಗೆ ಮಾಡುವುದಾದರೆ, ಮಾಡುವರೆ ನಮ್ಮೀ ಭಾಷೆಯೇನೂ ಶುಷ್ಕವಲ್ಲ, ನೀರಸವಲ್ಲ, ನಿಶ್ಚೇತವಲ್ಲ. ಎಲ್ಲ ವಿಷಯಗಳಲ್ಲಿ ಇತರ ಸಜೀವ ಭಾಷೆಗಳಂತೆ ಅವುಗಳಷ್ಟೇ ಸಜೀವವಾಗಿ ಇದೆ ಎಂದು ಹೇಳಬಹುದು.

ನಮ್ಮ ಭಾಷೆಗೆ ಈಗಣ ಬಂಗಾಳಿ, ಮಾಗಧಿ, ಬಿಹಾರಿ, ಮೈಥಿಲಿ ಮುಂತಾದ ಉತ್ತರ ಭಾರತದ ಮೂಡು ಪ್ರಾಂತ್ಯಗಳ ಭಾಷೆಗಳು ಮರಾಠಿಗಿಂತ ಎಷ್ಟೋ ಹತ್ತರವಾಗಿವೆ. ಪಂಜಾಬದಲ್ಲಿರುವ ಈಗಣ ಸಾರಸ್ವತರು ಅಲ್ಲಿಯ ಭಾಷೆಗಳನ್ನೂ, ಗುಜರಾತ್ ಕಾಠೇವಾಡ್ ಪ್ರಾಂತಗಳಲ್ಲಿರುವವರು ಗುಜರಾತಿ ಕಚ್ಚೀ ಮೊದಲಾದ ಭಾಷೆಗಳನ್ನೂ ಇತ್ಯಾದಿಯಾಗಿ ಆಡುವರಲ್ಲದೆ, ಕೊಂಕಣದ ಗೋವೆಯಲ್ಲಿರುವವರೂ ಅಲ್ಲಿಂದೀ ತೆಂಕಣ ದೇಶಗಳಲ್ಲಿ ನೆಲಸಿರುವ ನಾವೂ ಆಡುತ್ತಿರುವೀ ಕೊಂಕಣಿಯ ಮಾತನ್ನು ಅವರರಿಯರು.

---

೧೯೫೫. ಗೌಡಸಾರಸ್ವತ ಬ್ರಾಹ್ಮಣ ಸಭಾ, ಮುಂಬಯಿ, ಬೆಳ್ಳಿಹಬ್ಬದ ಪ್ರಕಟಣೆ.

# ಕೊಂಕಣಿ ಮತ್ತು ಕೊಂಕಣಿಗರು

– ಪ್ರೊ. ಸುನೀತಿಕುಮಾರ ಚಟರ್ಜಿ

ಭಾಷಾಂತರ : ಮುರಳೀಧರ ಉಪಾಧ್ಯ ಹಿರಿಯಡಕ.

---

ಹತ್ತನೆಯ ಅಖಿಲ ಭಾರತ ಕೊಂಕಣಿ ಸಾಹಿತ್ಯ ಪರಿಷತ್ತಿನಲ್ಲಿ ಭಾಗ ವಹಿಸಲು ನಾನು ಸಂತೋಷ ಪಡುತ್ತೇನೆ. ಗೋವಾ ಮತ್ತು ಪಶ್ಚಿಮ ಕರಾವಳಿಯಲ್ಲಿರುವ ಕೊಂಕಣಿ ತಾಯ್ನಾಡಿನ ಜನರಿಗೆ ಇದೊಂದು ಬಹಳ ಮಹತ್ವದ ಸಮ್ಮೇಳನ. ಕೊಂಕಣಿ ಮಾತನಾಡುವ ಜನರು ತಮ್ಮ ಐತಿಹಾಸಿಕ ಬೆಳವಣಿಗೆ, ಭಾಷೆ ಮತ್ತು ಸಂಸ್ಕೃತಿಗಳಲ್ಲಿರುವ ಅನನ್ಯತೆಯನ್ನು ಗುರುತಿಸುವುದು ಭಾರತದ ಸಮಗ್ರತೆಯ ದೃಷ್ಟಿಯಿಂದಲೂ ಮುಖ್ಯವಾದ ವಿಷಯ.

ತನ್ನ ಹಕ್ಕಿನಿಂದ ಭಾರತದ ಪ್ರಧಾನ ಭಾಷೆಗಳಲ್ಲಿ ಒಂದೆಂದು ಮನ್ನಣೆ ಪಡೆಯಬೇಕಾದ ಕೊಂಕಣಿ ಕೆಲವು ಶತಮಾನಗಳಿಂದ ಅಲಕ್ಷಿತವಾಗಿದೆ. ಕೊಂಕಣಿ ಜನರು ಹದಿನಾರನೆಯ ಶತಮಾನದಿಂದ–ಮುಖ್ಯವಾಗಿ ಹತ್ತೊಂಬತ್ತು ಇಪ್ಪತ್ತನೆಯ -ಭಾರತದ ಬೌದ್ಧಿಕ, ಸಾಂಸ್ಕೃತಿಕ, ವಾಣಿಜ್ಯ, ಔದ್ಯೋಗಿಕ ರಂಗಗಳಲ್ಲಿ ಮುಂಚೂಣಿಯಲ್ಲಿದ್ದಾರೆ. ಇವರು ಸಂಸ್ಕೃತದಲ್ಲಿರುವ ಭಾರತದ ಸಾಹಿತ್ಯ ಪರಂಪರೆಯನ್ನು ಉಳಿಸುವುದರಲ್ಲಿ ಪೋರ್ಚುಗೀಸ್ ಕ್ರಿಶ್ಚಿಯನ್ನರ ಲ್ಯಾಟಿನ್ ಸಂಸ್ಕೃತಿಯನ್ನು ಭಾರತಕ್ಕೆ ತರುವಲ್ಲಿ ಅಮೂಲ್ಯ ಸೇವೆ ಸಲ್ಲಿಸಿದ್ದಾರೆ. ತಮಗೆ ಕೊಂಕಣಿಯ ಬಗ್ಗೆ ಮತ್ತು ಮಧ್ವಾಚಾರ್ಯರ ನಾಡಿನ ತುಳುವರ ಬಗ್ಗೆ ಹೆಚ್ಚಿಗೆ ಏನೂ ತಿಳಿದಿಲ್ಲ ಎಂಬುದು ಉತ್ತರ ಭಾರತದ ಜನರಿಗೆ ನಾಚಿಗೆಗೇಡಿನ ಸಂಗತಿ. ಕೊಂಕಣಿ ಜನರು ಮಹಾರಾಷ್ಟ್ರದಲ್ಲಿ ಮರಾಠಿಗರ ಜತೆ ಸಹಬಾಳ್ವೆ ನಡೆಸಿದರು; ಪೋರ್ಚುಗೀಸ್ ಆಳ್ವಿಕೆಯಲ್ಲಿದ್ದ ಗೋವಾದಲ್ಲಿ ಪೋರ್ಚುಗೀಸ್ ಕ್ರಿಶ್ಚಿಯನ್ನರ ಧಾರ್ಮಿಕ ಅಸಹನೆಯಿಂದ ತುಳಿತಕ್ಕೊಳಗಾದರು. ಕರ್ನಾಟಕದಲ್ಲಿ ಕನ್ನಡ ಭಾಷೆ ಮತ್ತು ಲಿಪಿಯನ್ನು, ಕೇರಳದಲ್ಲಿ ಮಲಯಾಳಮ್ ಭಾಷೆಯನ್ನು ಒಪ್ಪಿಕೊಂಡರು. ಉತ್ತರ ಭಾರತದ ಜನರಿಗೆ ದಕ್ಷಿಣ ಭಾರತದ ಕನ್ನಡ, ತೆಲುಗು, ತಮಿಳು, ಮಲಯಾಳಮ್ ಭಾಷೆಗಳ ಬಗ್ಗೆ ಹೆಚ್ಚಿಗೇ ಏನೂ ತಿಳಿದಿರಲಿಲ್ಲ. ದಕ್ಷಿಣ ಭಾರತದ ಎಲ್ಲರನ್ನೂ ಒಟ್ಟಿಗೆ 'ಮದ್ರಾಸಿಗಳು' ಎಂದು ಕರೆದರು. ಕೊಂಕಣಿಗರೂ ಈ 'ಮದ್ರಾಸಿ'ಗಳಲ್ಲಿ ಸೇರಿದ್ದರು.

ಭಾರತದಂತಹ ಮಹಾನ್ ರಾಷ್ಟ್ರವೊಂದರ ನಾಗರಿಕರಾಗಿರುವ ನಮ್ಮ ಶಿಕ್ಷಣ ವ್ಯವಸ್ಥೆ ಎಷ್ಟು ಅಪರಿಪೂರ್ಣ ಎಂಬುದಕ್ಕೆ ನಾನು ನನ್ನ ಉದಾಹರಣೆ ಯನ್ನೇ ನೀಡಬಹುದು. ನಾನು ನಮ್ಮ ದೇಶದ ಭಾಷೆಗಳು ಮತ್ತು ಜನ ಸಮು ದಾಯುಗಳ ಬಗ್ಗೆ ಸಾಕಷ್ಟು ಮಾಹಿತಿ ಸಂಗ್ರಹಿಸಿದ್ದೆ. ನನ್ನ ಈ ಮಾಹಿತಿ ಎಷ್ಟು ಅಪೂರ್ಣ ಎಂದು ನನಗೆ ನನ್ನ ಇಪ್ಪತ್ತೊಂದನೆಯ ವಯಸ್ಸಿನಲ್ಲಿ ಗೊತ್ತಾಯಿತು. ೧೯೯೯ರಲ್ಲಿ ನನಗೆ ಲಂಡನ್ನಿನಲ್ಲಿ ಭಾಷಾವಿಜ್ಞಾನ ಕಲಿಯುವ ಅವಕಾಶ ಸಿಕ್ಕಿತು. ಮೊದಲ ಬಾರಿಗೆ ನಾನು ಯುರೋಪ್ ಪ್ರವಾಸ ಕೈಗೊಂಡೆ. ಒಂದು 'ಪಿ ಮತ್ತು ಓ' ಹಡಗಿನಲ್ಲಿ ನಾನು ಪ್ರಯಾಣ ಬೆಳೆಸಿದೆ. ಆ ದೀರ್ಘ ಸಮುದ್ರ ಯಾನದಲ್ಲಿ ನಾನು ಹಡಗಿನಲ್ಲಿದ್ದ ವಿದ್ಯಾರ್ಥಿಗಳಿಂದ ಮಾಹಿತಿ ಸಂಗ್ರಹಿಸಿದೆ. ಮದ್ರಾಸ್ ಪ್ರಾಂತ್ಯದ ದಕ್ಷಿಣ ಕನ್ನಡ ಜಿಲ್ಲೆಯ ಒಬ್ಬ ವಿದ್ಯಾರ್ಥಿ ನಮ್ಮ ಸಹ ಪ್ರಯಾಣಿಕ ರಾಗಿದ್ದರು. ಅವರು ಶ್ರೀ ವಿ. ಎನ್. ಕುಡ್ವ. ಕುಡ್ವರು ಮುಂದೆ ಭಾರತಕ್ಕೆ ಮರಳಿದ ಮೇಲೆ ಐ.ಸಿ.ಎಸ್. ಅಧಿಕಾರಿಯಾಗಿ ಸೇವೆ ಸಲ್ಲಿಸಿದರು. ಕುಡ್ವರು ನನಗೆ ಕೊಂಕಣಿ ಭಾಷೆಯ ಬಗ್ಗೆ ಮಾಹಿತಿ ನೀಡಿದರು. ೧೯೭೧ರಲ್ಲಿ ನಾನು ಮೊದಲ ಬಾರಿಗೆ ಮಣಿಪಾಲ, ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಇತರ ಸ್ಥಳಗಳನ್ನು ಸಂದರ್ಶಿಸಿದೆ. ೧೯೭೩ರಲ್ಲಿ ನಾನು ಗೋವಾವನ್ನು ಸಂದರ್ಶಿಸಿದೆ. ಭಾರತದ ಪ್ರಗತಿಗೆ ವಿಶಿಷ್ಟ ಕೊಡುಗೆ ನೀಡಿರುವ ಕೊಂಕಣಿಗರನ್ನು ಇತರರು ಅಲಕ್ಷಿಸಿರುವುದನ್ನು, ಕೊಂಕಣಿ ಭಾಷೆಯನ್ನು ಕೊಂಕಣಿಗರೇ ಅಲಕ್ಷಿಸಿರುವುದನ್ನು ನಾನು ಕಂಡುಕೊಂಡೆ. ರತ್ನಗಿರಿ, ಗೋವಾ, ಮುಂಬಯಿ, ಪೂನಾ, ಮಂಗಳೂರು, ಕೊಚ್ಚಿ, ಬೆಂಗಳೂರು, ಮದ್ರಾಸ್‌ಗಳಲ್ಲಿರುವ ಕ್ರಿಶ್ಚಿಯನ್, ಹಿಂದೂ ಕೊಂಕಣಿಗರ ಬಗ್ಗೆ ನಾನು ಹೊಸ ಅನ್ವೇಷಣೆ ಮಾಡಿದೆ. ಉತ್ತರ ಭಾರತದ ಹಲವು ಕಡೆ ಇರುವಂತೆ ಕರ್ನಾಟಕದಲ್ಲಿ ಭಾಷೆಯ ದುರಭಿಮಾನ ಇಲ್ಲ. ಅಲ್ಲಿ ಕನ್ನಡಿಗರು, ತುಳುವರು, ಕೊಂಕಣಿಗರು, ತಮಿಳರು, ಕೊಡವರು, ಮಹಾರಾಷ್ಟ್ರದವರು, ಆಂಗ್ಲೋ–ಇಂಡಿಯನ್ನರು ಸೌಹಾರ್ದದಿಂದ ಬದುಕುತ್ತಿದ್ದಾರೆ ಎಂಬುದನ್ನು ನಾನು ತಿಳಿದುಕೊಂಡೆ. ಡಾ। ತೋನ್ಸೆ ಮಾಧವ ಅನಂತ ಪೈ (ಟಿ.ಎಂ.ಎ.ಪೈ) ಅವರ ಸಾಧನೆಯನ್ನು ಕಂಡು ನನಗೆ ಅದ್ಭುತ ಅನ್ನಿಸಿತು, ಆದರ ಮೂಡಿತು. ಶಿಕ್ಷಣ, ಬ್ಯಾಂಕಿಂಗ್, ಗ್ರಾಮೀಣ ಅಭಿವೃದ್ಧಿ ಇತ್ಯಾದಿ ಹಲವು ರಂಗಗಳಲ್ಲಿ ಸಾಧನೆ ಮಾಡಿ 'ಮಣಿಪಾಲದ ಮಹಾ ಪ್ರಾಜ್ಞ' ಎಂದು ಕರೆಸಿಕೊಂಡಿರುವ ಡಾ। ಟಿ.ಎಂ.ಎ. ಪೈ ಅವರ ಬಗ್ಗೆ ಉತ್ತರ ಭಾರತದ ನಮಗೆ ಏನೂ ಗೊತ್ತಿಲ್ಲದಿರುವುದು ಅಕ್ಷಮ್ಯ.

ಅನೇಕ ಖ್ಯಾತ ಕೊಂಕಣಿಗರ ಹೆಸರುಗಳನ್ನು ನಾನು ಕೇಳಿದ್ದೇನೆ. ಆದರೆ ಅವರು ಕೊಂಕಣಿ ಹಿನ್ನೆಲೆಯವರೆಂದು ನಮಗೆ ತಿಳಿದಿಲ್ಲ. ಇವರು ಅಖಿಲ ಭಾರತ ಖ್ಯಾತಿ ಉಳ್ಳವರು. ಅಂತಾರಾಷ್ಟ್ರೀಯ ಖ್ಯಾತಿಯ ಪೌರಾತ್ಯ ಸಾಹಿತ್ಯ ವಿದ್ವಾಂಸರು, ಆರ್. ಜಿ. ಭಂಡಾರ್‌ಕರ್, ಭಾವುದಾಜಿಲಾಡ್, ವಿ. ಎಸ್. ಸುಕ್ತಂಕರ್‌ರಂಥ ಭಾರತ ತಜ್ಞರು, ಗೋವಾದ ಇತಿಹಾಸ ಮತ್ತು ಸಂಸ್ಕೃತಿ ತಜ್ಞರಾದ ಪಾಂಡುರಂಗ

ಪಿಸುರ್‌ಲೆಂಕರ್, ಫ್ರಾನ್ಸಿಸ್ಕೊ ಲೂಯಿ ಗೋಮ್ಸ್, ಬೆನಗಲ್ ನರಸಿಂಗರಾಯರಂಥ ರಾಯಭಾರಿಗಳು, ಸರ್ ನಾರಾಯಣ ಚಂದಾವರ್ಕರ್‌ರಂಥ ನ್ಯಾಯಾಧೀಶರು ಮತ್ತು ಸಮಾಜ ಸುಧಾರಕರು, ವಿಠಲ ಚಂದಾವರ್ಕರ್‌ರಂಥ ವಕೀಲ ಶಿಕ್ಷಣ ತಜ್ಞರು, ಬೌದ್ಧಧರ್ಮ ಮತ್ತು ಪ್ರಾಚೀನ ಭಾರತ ಇತಿಹಾಸದ ತಜ್ಞರಾದ ಧರ್ಮಾನಂದ ಕೊಸಾಂಬಿ, ಅವರ ಪ್ರತಿಭಾವಂತ ಪುತ್ರ ದಾಮೋದರ ಡಿ. ಕೊಸಾಂಬಿ, ಡಾ। ಎ. ಪಿ. ಬಾಳಿಗ, ಡಾ। ಇ. ಎ. ಬೋರ್ಗಸ್, ಡಾ। ಪಿ. ಎನ್. ಶಿರೋಡ್‌ಕರ್, ಡಾ। ಟಿ. ಎಂ. ಎ. ಪೈ ಅವರಂಥ ಡಾಕ್ಟರ್ ಶಿಕ್ಷಣ ತಜ್ಞರು, ಕೇಂದ್ರ ಸರಕಾರದಲ್ಲಿ ಮಂತ್ರಿಗಳಾಗಿದ್ದ ಶ್ರೀ ಟಿ.ಎ. ಪೈ, ಎನ್.ಆರ್. ಡೊಂಗರಕೇರಿ ಮತ್ತು ಶ್ರೀಮತಿ ಕಮಲಾಬೂಟಾರಂಥ ಶಿಕ್ಷಣತಜ್ಞರು, ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ, ಶ್ರೀಮತಿ ಕಮಲಾ ಡೊಂಗರಕೇರಿ ಅವರಂಥ ಲೇಖಕಿಯರು, ಕಲಾಪ್ರೇಮಿಗಳು, ಕಾಕಾ ಕಾಲೇಲ್‌ಕರ್‌ರಂಥ ರಾಜಕೀಯ ಕಾರ್ಯಕರ್ತರು, ಲೇಖಕರು, ಶಾಂತಾರಾಮರಾವ್, ಪುರುಷೋತ್ತಮ ಶಿವರಾಮ ರಾವ್, ಪುರುಷೋತ್ತಮ ಲಕ್ಷ್ಮಣ ದೇಶಪಾಂಡೆ ಅವರಂಥ ಪತ್ರಿಕೋದ್ಯಮಿ ಲೇಖಕರು, ಮೇಜರ್ ಜನರಲ್ ಗೋಪಾಲ ಗಣೇಶ ಬೇವೂರರಂಥ ವಿಶೇಷ ಅರ್ಹತೆಯ ಮಿಲಿಟರಿ ಅಧಿಕಾರಿಗಳು, ಏರ್‌ಫೋರ್ಸ್ ಕಮಾಂಡರ್ ಫ್ಲೈಟ್ ಲೆಫ್ಟಿನೆಂಟ್ ಲಾಜರಸ್‌ರಂಥ ಭಾರತ ಪಾಕಿಸ್ತಾನ ಯುದ್ಧದ ವೀರರು, ರಾಮಕೃಷ್ಣ ಮಿಶನ್‌ನ ಅಧ್ಯಕ್ಷರಾಗಿದ್ದ ಸ್ವಾಮಿ ವೀರೇಶ್ವರಾನಂದರಂಥ ಆಧ್ಯಾತ್ಮಿಕ ನೇತಾರರು, ಕಾರ್ಡಿನಲ್ ಗ್ರೇಸಿಯಾಸ್‌ರಂಥ ರೋಮನ್ ಕೆಥೋಲಿಕ್ ಚರ್ಚಿನ ಅಧ್ವರ್ಯುಗಳೂ, ಡಿ. ಆರ್. ಮಂಕೇಕರ್, ಲಕ್ಷ್ಮೀಕಾಂತ ಮಾಧವರಾವ್ ನಾಡಕರ್ಣಿ ಅವರಂಥ ಆಡಳಿತಗಾರರು, ಲತಾ ಮಂಗೇಶ್ಕರ್‌ರಂಥ ಗಾಯಕಿಯರು, ಎಸ್. ಎಮ್. ಕತ್ರೆ ಅವರಂಥ ಭಾಷಾವಿಜ್ಞಾನಿಗಳು, ಗೋವಾ ಮತ್ತು ಚರ್ಚ್‌ನ್ಯಾಯಸ್ಥಾನದ ಬಗ್ಗೆ ಬರೆದಿರುವ ಇತಿಹಾಸಕಾರ ಅನಂತ ಕಾಕಬಾ ಪ್ರಿಯೋಲ್ಕರ್, ಪಶ್ಚಿಮ ಬಂಗಾಳದ ರಾಜ್ಯಪಾಲರಾಗಿದ್ದ ಡಯಾಸ್ ಮತ್ತಿತರರು.

ಕೊಂಕಣಿಗರು ಆಕ್ರಮಣಶೀಲರೂ ಅಲ್ಲ, ತಮ್ಮ ಭಾಷೆಯ ಬಗ್ಗೆ ದುರಭಿಮಾನ ಉಳ್ಳವರೂ ಅಲ್ಲ. ಕೊಂಕಣಿಗರು ಸಂಪ್ರದಾಯಬದ್ಧ ಸಾರಸ್ವತರು. ಜಾತಿ ಪೂರ್ವಾಗ್ರಹಗಳಿಂದ ಮುಕ್ತರಾಗಿದ್ದಾರೆ. ಇತರ ಜಾತಿಗಳವರೊಂದಿಗೆ ಸಹಬಾಳ್ವೆ ನಡೆಸುತ್ತಿದ್ದಾರೆ. ಅಂತರ್‌ಜಾತೀಯ ವಿವಾಹಗಳನ್ನು ಮಾಡಿಕೊಂಡಿದ್ದಾರೆ. ಭಾರತದಲ್ಲಿರುವ ಕೊಂಕಣಿಗರಲ್ಲಿ ಅರ್ಧಭಾಗ ಕೊಂಕಣಿಗರು ಗೋವಾದಲ್ಲಿದ್ದಾರೆ. ಉಳಿದವರು ಮಹಾರಾಷ್ಟ್ರ, ಕರ್ನಾಟಕ, ಕೇರಳಗಳಲ್ಲಿದ್ದಾರೆ. ಕೊಂಕಣಿ ಭಾಷೆಯ ಇತಿಹಾಸದ ಬಗ್ಗೆ ಅಧಿಕಾರಯುತವಾಗಿ ಮಾತನಾಡಬಲ್ಲ ಪ್ರೊ। ಎಸ್.ಎಂ. ಕತ್ರೆ ಅವರ ಅಭಿಪ್ರಾಯದಂತೆ ಪಶ್ಚಿಮ ಕರಾವಳಿಯ ಮರಾಠಿ ಗುಜರಾತಿಗಳಂತೆ ಕೊಂಕಣಿ ಕೂಡ ಒಂದು ಸ್ವತಂತ್ರ ಭಾಷೆ. ಮಹಾರಾಷ್ಟ್ರದ ಹೆಚ್ಚಿನವರು ಮತ್ತು ಕೆಲವರು ಕೊಂಕಣಿಗರು ತಿಳಿದುಕೊಂಡಿರುವಂತೆ ಕೊಂಕಣಿ ಮರಾಠಿಯ ಉಪಭಾಷೆಯಲ್ಲ. ಗೋವಾದಲ್ಲಿ ಕೊಂಕಣಿ ಬಹುಸಂಖ್ಯಾಕರ

ಭಾಷೆಯಾಗಿರುವುದರಿಂದ ಆ ರಾಜ್ಯ ಕೊಂಕಣಿಗೆ ಸೂಕ್ತ ಸ್ಥಾನಮಾನ ನೀಡಿದೆ. ಪುಟ್ಟ ರಾಜ್ಯ ಮಣಿಪುರದಲ್ಲಿ ಮಣಿಪುರಿ ಆಡಳಿತ ಭಾಷೆಯಾಗಿದೆ. ಗೋವಾದಲ್ಲಿ ಅಧಿಕೃತ ಭಾಷೆಯಾಗುವ ಮೂಲಕ ಕೊಂಕಣಿ ಒಂದು ಆಶ್ರಯ ಪಡೆದಿದೆ. ಭಾರತೀಯ ಸಂಸ್ಕೃತಿಗೆ ಕೊಂಕಣಿಗರು ನೀಡಿರುವ ಕೊಡುಗೆಯನ್ನು ಭಾರತದ ಇತರ ಭಾಷೆಗಳ ಜನರು ಗುರುತಿಸಬೇಕು; ಕೊಂಕಣಿಗರು ತಮ್ಮ ಭಾಷೆಯ ಬಗ್ಗೆ ಹೆಚ್ಚು ಗಮನ ಕೊಡಬೇಕು; ಆಗ ಕೊಂಕಣಿ ಭಾರತದ ಭಾಷಾಭವನದಲ್ಲಿ ಸೂಕ್ತಸ್ಥಾನ ಪಡೆಯುತ್ತದೆ.

ಕೊಂಕಣಿಯ ಸಮಗ್ರ ಪ್ರಗತಿಗೆ ಇನ್ನೂ ಕೆಲವು ಸಮಸ್ಯೆಗಳಿವೆ. ಅಂಥ ಕೆಲವು ಸಮಸ್ಯೆಗಳನ್ನು ನಾನಿಲ್ಲಿ ಪ್ರಸ್ತಾಪಿಸುತ್ತಿದ್ದೇನೆ.

೧. ಲಿಪಿಯ ಸಮಸ್ಯೆ : ಏಕಲಿಪಿಯ ಕೊರತೆ ಕೊಂಕಣಿ ಸಮಗ್ರ ಪ್ರಗತಿಯನ್ನು ಹಿಮ್ಮೆಟ್ಟಿಸುತ್ತಿದೆ. ಕೊಂಕಣಿಭಾಷೆಯನ್ನು ಈಗ ನಾಲ್ಕು ಲಿಪಿಗಳಲ್ಲಿ ಬರೆಯಲಾಗುತ್ತಿದೆ. ದೇವನಾಗರಿ, ರೋಮನ್, ಮಲಯಾಳಮ್, ಕನ್ನಡ. ಕೊಂಕಣಿ ಭಾಷೆ ದೇವನಾಗರಿ ಲಿಪಿಯನ್ನು ಮಾತ್ರ ಉಪಯೋಗಿಸಬೇಕು ಎಂಬ ಅಭಿಪ್ರಾಯವೂ ಇದೆ. ಕೊಂಕಣಿಯನ್ನು ರೋಮನ್ ಲಿಪಿಯಲ್ಲಿ ಬರೆಯುತ್ತ ನಾಲ್ಕು ಶತಮಾನಗಳಿಂದ ರೋಮನ್ ಕೊಂಕಣಿ ಸಾಹಿತ್ಯವನ್ನು ಬೆಳೆಸಿರುವ ಗೋವಾ ಕ್ರಿಶ್ಚಿಯನ್ನರೂ ಈ ಅಭಿಪ್ರಾಯವನ್ನು ಒಪ್ಪುತ್ತಾರೆ. ಆದರೆ ರೋಮನ್ ಲಿಪಿಯನ್ನು ಒಮ್ಮಿಂದೊಮ್ಮೆ ಕೈ ಬಿಡಲು ಒತ್ತಾಯಿಸಬಾರದು ಎನ್ನುತ್ತಾರೆ. ಗೋವಾ ಮತ್ತು ದಕ್ಷಿಣ ಕನ್ನಡದಲ್ಲಿರುವ ರೋಮನ್ ಕೆಥೋಲಿಕ್ ಕ್ರಿಶ್ಚಿಯನ್ನರ ಹಿತಾಸಕ್ತಿಯ ದೃಷ್ಟಿಯಿಂದ ಕೊಂಕಣಿ ಇನ್ನೂ ಕೆಲವು ಕಾಲದವರೆಗೆ ದ್ವಿಲಿಪಿಯ ಭಾಷೆಯಾಗಿ ಮುಂದುವರಿಯಬೇಕು. ಕೆಲವು ವರ್ಷಗಳ ಮೊದಲು ಗೋವಾದ ಕ್ರಿಶ್ಚಿಯನ್ನರ ಕೊಂಕಣಿ ಲಿಪಿ ಸಮಿತಿ ನನ್ನ ಅಭಿಪ್ರಾಯವನ್ನು ಕೇಳಿತು. ದ್ವಿಲಿಪಿ ಬಳಕೆ ಈ ಸಮಸ್ಯೆಗೆ ತೃಪ್ತಿಕರವಾದ ಪರಿಹಾರ ಎಂದು ನಾನು ತಿಳಿಸಿದೆ. ದೇವನಾಗರಿ ಲಿಪಿಯ ಬಳಕೆ ಹೆಚ್ಚಿದಂತೆ ಇತರ ಲಿಪಿಗಳ ಬಳಕೆ ಕಮ್ಮಿಯಾಗುತ್ತದೆ. ಆದರೆ ಈ ವಿಷಯದಲ್ಲಿ ಕಾಲಮಿತಿಯಾಗಲಿ, ಕಡ್ಡಾಯವಾಗಲಿ ಇರಬಾರದು. ಭಾರತದ ಅಥವಾ ಇತರ ದೇಶಗಳ ಹಲವು ಭಾಷೆಗಳು ದ್ವಿಲಿಪಿಯ ಅಥವಾ ಬಹುಲಿಪಿಯ ಭಾಷೆಗಳಾಗಿವೆ ಸಿಂಧಿ (ಪರ್ಷಿಯನ್-ಅರೇಬಿಕ್, ಗುರ್ಮುಖಿ, ದೇವನಾಗರಿ), ಕಾಶ್ಮೀರಿ (ಪರ್ಷಿಯನ್-ಅರೇಬಿಕ್, ಶಾರದಾ, ದೇವನಾಗರಿ ಮತ್ತು ರೋಮನ್), ಉತ್ತರ ಬಿಹಾರದ ಮೈಥಿಲಿ (ಹಳೆಮೈಥಿಲಿ, ದೇವನಾಗರಿ), ಮಣಿಪುರಿ (ಬಂಗಾಳಿ, ಅಸ್ಸಾಮಿ, ಹಳೆಮಣಿಪುರಿ, ರೋಮನ್, ದೇವನಾಗರಿ). ಪ್ರಸಿದ್ಧ ಜರ್ಮನ್ ಭಾಷೆ ಕೂಡ ಎರಡು ಲಿಪಿಗಳನ್ನು -ಗೋಥಿಕ್ ಮತ್ತು ರೋಮನ್-ಉಪಯೋಗಿಸುತ್ತಿದೆ.

೨. ಕೊಂಕಣಿಯ ಒಂದು ಉಪಭಾಷೆ, ಇನ್ನೊಂದು ಉಪಭಾಷೆಯವರಿಗೆ ಪೂರ್ತಿ ಅರ್ಥವಾಗುವುದಿಲ್ಲ - ಎಂದು ಹೇಳುವವರಿದ್ದಾರೆ. ದುರದೃಷ್ಟದಿಂದ ಗೋವಾ

೧೫೧೦ರಲ್ಲಿ ಪೋರ್ಚುಗೀಸರ ವಶವಾಯಿತು. ಗೋವಾದಿಂದ ನಿರಾಶ್ರಿತರಾಗಿ ಹೊರಟ ಕೊಂಕಣಿಗರು ಕರ್ನಾಟಕ, ಕೇರಳಗಳಲ್ಲಿ ನೆಲಸಿದರು. ಕೊಂಕಣಿಯ ಉಪಭಾಷೆಗಳನ್ನು ಹಲವಾರು ವಿದ್ವಾಂಸರು ಅಧ್ಯಯನ ಮಾಡಿದ್ದಾರೆ. ಕೊಂಕಣಿ ಮರಾಠಿಗಿಂತ ಭಿನ್ನವಾದ ಭಾಷೆ ಎಂದು ಜ್ಯೂಲ್ಸ್ ಬ್ಲಾಕ್ (Jules Bloch) ಅಭಿಪ್ರಾಯಪಟ್ಟಿದ್ದಾರೆ. ಡಾ। ಎಸ್. ಎಂ. ಕತ್ರೆ ಕೊಂಕಣಿಯ ಆರು ಉಪಭಾಷೆಗಳನ್ನು ಗುರುತಿಸಿದ್ದಾರೆ. ಡಾ। ಜೋಸ್ ಪಿರೇರಾ ಅವರ 'ಸಾಹಿತ್ಯ ಭಾಷೆಯಾಗಿ ಕೊಂಕಣಿಯ ಬೆಳವಣಿಗೆಯ ಅಧ್ಯಯನ' ಮಹತ್ವದ್ದು. ಮನೋಹರ ಸರ್ ದೇಸಾಯಿ ಅವರು 'ಕೊಂಕಣಿ ಸಾಹಿತ್ಯದಲ್ಲಿ ಭಾರತದ ಏಕತೆಯ ಪರಿಕಲ್ಪನೆ' ಎಂಬ ಲೇಖನ ಬರೆದಿದ್ದಾರೆ. ಹದಿನಾರನೆಯ ಶತಮಾನದಲ್ಲೇ ಕೃಷ್ಣದಾಸ ಶರ್ಮರು ಕೊಂಕಣಿ ರಾಮಾಯಣ, ಮಹಾಭಾರತ ಮತ್ತು ಪುರಾಣಕತೆಗಳನ್ನು ಬರೆದಿದ್ದಾರೆ ಎಂದು ತಿಳಿದುಬರುತ್ತದೆ. ಗೋವಾದ ಪಾದ್ರಿಗಳ ಧರ್ಮಾಂಧತೆಯಿಂದ ಕೊಂಕಣಿ ತುಳಿತಕ್ಕೊಳಗಾಯಿತು. ಆದರೂ ಕೊಂಕಣಿಯ ಉಪಭಾಷೆಗಳು ಬೆಳೆದುವು. ಕೊಂಕಣಿ ಸಾಹಿತ್ಯದ ಆಧುನಿಕ ಯುಗ ಆರಂಭವಾಗಿದೆ. ವಿ. ಆರ್. ವರ್ದೆ ವಾಲವಲೀಕರ್ (ಶೆಣ್ವೆ ಗೊಂಯೆಂಬಾಬ್) ನವೋದಯದ ಹರಿಕಾರರಾಗಿದ್ದಾರೆ. ಕೊಂಕಣಿ ತಾಯ್ನುಡಿಯಾಗಿರುವ ಹಿಂದುಗಳು ಮತ್ತು ಕ್ರಿಶ್ಚಿಯನ್ನರು ತಮ್ಮ ಭಾಷೆಯ ಬಗ್ಗೆ ಅಭಿಮಾನಪಡುತ್ತಿದ್ದಾರೆ. ಉಪಭಾಷೆಗಳು ಕೊಂಕಣಿಯ ನಿಜವಾದ ಸಮಸ್ಯೆ ಅಲ್ಲ. ಉಪಭಾಷೆಗಳು ಆಧುನಿಕ ಕೊಂಕಣಿ ಶಬ್ದ ಭಂಡಾರದ ವೈವಿಧ್ಯವನ್ನು, ಶ್ರೀಮಂತಿಕೆಯನ್ನು ಹೆಚ್ಚಿಸುತ್ತವೆ.

೩. ಕೊಂಕಣಿಯ ಆಧುನಿಕ ಸಾಹಿತ್ಯ ವರ್ಧಮಾನದಲ್ಲಿದೆ. ಅಭಿಜಾತ ಪರಂಪರೆಯ ಕೊಂಕಣಿ ಮಹಾಕೃತಿಗಳು – ಕೃಷ್ಣದಾಸ ಶರ್ಮರ ಕೃತಿಗಳು – ಪುನರ್ಮುದ್ರಣ ಗೊಳ್ಳಬೇಕು. ಕ್ರಿಶ್ಚಿಯನ್ ಲಿಪಿಯಲ್ಲಿರುವ ಅಭಿಜಾತ ಕೃತಿಗಳನ್ನು ದೇವನಾಗರಿ ಲಿಪಿಯಲ್ಲಿ ಪ್ರಕಟಿಸಬೇಕು. ಪೋರ್ಚುಗೀಸ್ ಪೂರ್ವಯುಗದ ಕೊಂಕಣಿ ಶಾಸನಗಳು, ಪತ್ರಗಳು, ದಾಖಲೆಗಳು ಪ್ರಕಟವಾಗಬೇಕು. ಸಾರಸ್ವತರ, ಕ್ರಿಶ್ಚಿಯನ್ನರ ಮತ್ತು ಇತರರ ಕೊಂಕಣಿ ಜನಪದ ಸಾಹಿತ್ಯದ ಆಯ್ದ ಸಂಪಾದಿತ ಆವೃತ್ತಿಗಳು ಲಭ್ಯವಾಗಬೇಕು.

೪. ಕ್ರಿಶ್ಚಿಯನ್ ಕೊಂಕಣಿಯಲ್ಲಿ ಬೈಬಲ್, ಹಳೆ ಒಡಂಬಡಿಕೆ ಮತ್ತು ಹೊಸ ಒಡಂಬಡಿಕೆಗಳು ಭಾಷಾಂತರಗೊಂಡಿವೆ. ರಾಮಾಯಣ, ಮಹಾಭಾರತ, ಭಾಗವತ ಮತ್ತು ಪುರಾಣಗಳ ಗದ್ಯಾನುವಾದಗಳು ಕೊಂಕಣಿಯಲ್ಲಿ ಸಿಗುವಂತಾಗಬೇಕು. ಕಾಳಿದಾಸನ ಕಾವ್ಯಗಳನ್ನು, ಧರ್ಮಪದದಂಥ ಪಾಲಿ ಗ್ರಂಥಗಳನ್ನು, ವೇದಗಳ ಆಯ್ದ ಭಾಗಗಳನ್ನು, ಹನ್ನೆರಡು ಪ್ರಾಚೀನ ಉಪನಿಷತ್ತುಗಳನ್ನು ಕೊಂಕಣಿಗೆ ಭಾಷಾಂತರಿಸಬೇಕು. ಈ ಭಾಷಾಂತರಗಳಿಂದ ಕೊಂಕಣಿಗರ ಆತ್ಮಾಭಿಮಾನ ಹೆಚ್ಚುತ್ತದೆ. ಸಾರಸ್ವತರು ಶತಮಾನಗಳಿಂದ ಸಂಸ್ಕೃತ ಸಾಹಿತ್ಯ ಮತ್ತು ಶಾಸ್ತ್ರಗಳನ್ನು

ರಕ್ಷಿಸುತ್ತಾ ಬಂದವರು. ಮುಸ್ಲಿಂ ಕೊಂಕಣಿಗರು ಕುರಾನ್ ಗ್ರಂಥವನ್ನು ತಮ್ಮ ತಾಯ್ನುಡಿಗೆ ಭಾಷಾಂತರಿಸಬೇಕು. ಸೂಫಿ ಪಂಥದ ಶ್ರೇಷ್ಠ ಕೃತಿಗಳು ಅರೇಬಿಕ್ ಮತ್ತು ಪರ್ಷಿಯನ್ ಭಾಷೆಗಳಿಂದ ಕೊಂಕಣಿಗೆ ಬರಬೇಕು.

ಸುಂದರ ಭಾಷೆಯಾದ ಕೊಂಕಣಿಗೆ ಆಧುನಿಕ ಭಾರತೀಯ ಭಾಷೆಗಳಲ್ಲಿ ಸೂಕ್ತ ಸ್ಥಾನ ಸಿಗಲೆಂದು ಹಾರೈಸುತ್ತೇನೆ.

---

೧೯೭೪ ರಲ್ಲಿ ಪಣಜಿಯಲ್ಲಿ ನಡೆದ ಅಖಿಲ ಭಾರತೀಯ ಕೊಂಕಣಿ ಸಾಹಿತ್ಯ ಪರಿಷತ್ತಿನ ಹತ್ತನೆಯ ಅಧಿವೇಶನದ ಉದ್ಘಾಟನಾ ಭಾಷಣದ ಸಂಕ್ಷಿಪ್ತ ಅನುವಾದ.

# ಕೊಂಕಣ ಶಬ್ದಾರ್ಥ

- ಸೇಡಿಯಾಪು ಕೃಷ್ಣ ಭಟ್ಟ

(ಭಾಗ – ೧)

ಕೊಂಕಣ ಎಂಬೀ ಶಬ್ದದ ಆದ್ಯಕ್ಷರವನ್ನು ಕನ್ನಡದಲ್ಲಿ ನಾವು 'ಕೊಂಕಣ' ಎಂದು ಹ್ರಸ್ವವಾಗಿ ಬಳಸುವೆವಾದರೂ ಸಂಸ್ಕೃತದಲ್ಲಿ ಹಾಗೂ ತಜ್ಜನ್ಯ ಭಾಷೆಗಳಲ್ಲಿ 'ಕೋಂಕಣ' ಎಂದು ದೀರ್ಘವಾಗಿ ಬಳಸುವುದಾಗಿದೆ. ಸಂಸ್ಕೃತಾದಿ ಭಾಷೆಗಳಲ್ಲಿ ಹ್ರಸ್ವ ಒಕಾರವು ಇಲ್ಲದಿರುವುದರಿಂದ, ದ್ರಾವಿಡ ಮೂಲದ 'ಕೊಂಕಣ' ಎಂಬ ಈ ಶಬ್ದದ ಆದ್ಯಕ್ಷರವು ಸಹಜವಾಗಿ ಅಲ್ಲಿ ದೀರ್ಘವಾಗಿರಬೇಕೆಂದು ಯಾರಿಗಾದರೂ ಸಕೃದ್ದರ್ಶನಕ್ಕೆ ಕಂಡುಬಾರದಿರದು. ಆದರೆ 'ಕೋಂಕಣ' ಎಂಬ ಶಬ್ದವು ಸಂಸ್ಕೃತ ಭಾಷೆಯಲ್ಲಿ ಅತಿ ಪುರಾತನ ಕಾಲದಿಂದಲೂ ಬಳಕೆಯಲ್ಲಿರುವಂತೆ ಕಂಡುಬರುತ್ತದೆ. ಸಂಸ್ಕೃತ ಕೋಶಗಳಲ್ಲಿ ಪರಶುರಾಮನಿಗೆ 'ಕೋಂಕಣಾಸುತ' ಎಂಬ ಹೆಸರು ಇದೆ. ಪುರಾತನಕಾಲದಲ್ಲಿಯೇ ಈ ಶಬ್ದವು ಸಂಸ್ಕೃತದಲ್ಲಿರುವುದರಿಂದ, ಮತ್ತು ಕೊಂಕಣ ದೇಶದ ಭಾಷೆ ಸಂಸ್ಕೃತಜನ್ಯವಾಗಿದ್ದು ದ್ರಾವಿಡ ಭಾಷೆಯಲ್ಲದಿರುವುದರಿಂದ–ಸಂಸ್ಕೃತದಲ್ಲಿ 'ಕೋಂಕಣ'ವೆಂದಿದ್ದುದೇ ಕನ್ನಡದಲ್ಲಿ ಕೊಂಕಣವೆಂಬ ರೂಪವನ್ನು ಪಡೆದಿರಬಹುದೇ? ಕೋಂಕಣವೆಂಬುದೇ ಮೂಲವಾಗಿದ್ದರೆ ನಾವು ಈ ಮೊದಲು ಭಾವಿಸಿದ್ದ 'ನಿಮ್ನೋನ್ನತ ಪ್ರದೇಶ' ಎಂಬ ಅರ್ಥವು ಅದಕ್ಕೆ ಅನ್ವಯಿಸುವುದಾದರೂ ಹೇಗೆ? ಇತ್ಯಾದಿ ಸಂದೇಹಗಳು ಇಲ್ಲಿ ಹುಟ್ಟುತ್ತವೆ.

ಹ್ರಸ್ವರೂಪವಾದ 'ಒ'ಕಾರವಿರುವ ದ್ರಾವಿಡ ಭಾಷಾ ಶಬ್ದವು ಸಂಸ್ಕೃತ ಭಾಷಾಲಿಪಿಯಲ್ಲಿ ಬರೆಯಲ್ಪಟ್ಟಾಗ ಸಹಜವಾಗಿ ದೀರ್ಘವಾಗುವುದಾದರೂ, ಉಚ್ಚಾರದಿಂದ ಆ ಶಬ್ದವನ್ನು ಗ್ರಹಿಸಿ ಸಂಸ್ಕೃತದಲ್ಲಿ ಬಳಸುವಾಗ ಅದು ದೀರ್ಘವಾಗುವ ಬದಲಾಗಿ ಉಕಾರವಾಗುವ ಸಂಭಾವ್ಯತೆ ಹೆಚ್ಚು. ಇದಕ್ಕೆ ನಿದರ್ಶನಗಳಿವೆ. ಉದಾಃ ಕೊತ್ತುಂಬರಿ ಎಂಬ ದ್ರಾವಿಡ ಶಬ್ದವು ಸಂಸ್ಕೃತದಲ್ಲಿ 'ಕುಸ್ತುಂಬರೀ' ಎಂಬ ರೂಪವನ್ನು ಪಡೆದಿದೆ. ಇದರಿಂದ, ಆದ್ಯಕ್ಷರವು ದೀರ್ಘವಾಗಿರುವ ಕೋಂಕಣ ಎಂಬ ಸಂಸ್ಕೃತ ರೂಪವೇ ಮೂಲವಾಗಿರಬೇಕೆಂಬ ಅಭಿಪ್ರಾಯಕ್ಕೆ ಒಂದಿಷ್ಟು ಪುಷ್ಟಿಯೊದಗುತ್ತದೆ. ಆದರೆ 'ಕೋಂಕಣ' ಎಂಬ ಶಬ್ದಕ್ಕೆ

ಸಂಸ್ಕೃತದಲ್ಲಿ ಆ ದೇಶ ಎಂಬ ಒಂದೇ ಅರ್ಥವಲ್ಲದೆ ಬೇರೆ ಯಾವ ಅರ್ಥವೂ ಕಂಡುಬರುವುದಿಲ್ಲ. ಮತ್ತು ಅದರ ನಿಷ್ಪತ್ತಿಯೂ ಸಂಸ್ಕೃತದಲ್ಲಿ ಲಭಿಸುವುದಿಲ್ಲ. ಆದುದರಿಂದ ಅದು ಸಂಸ್ಕೃತಮೂಲದ ಶಬ್ದವಲ್ಲವೆಂದೇ ಹೇಳಬೇಕಾಗುತ್ತದೆ. ಹಾಗಾದರೆ ಅದರ ಮೂಲವೆಲ್ಲಿ?

ತುಳು ಭಾಷೆಯು ನಮ್ಮೀ ಸಂದೇಹವನ್ನು ಪರಿಹರಿಸುತ್ತದೆ. ತುಳುವಿನಲ್ಲಿ 'ಕೋಂಟು' ಎಂದರೆ ಮೂಲೆ ಎಂದರ್ಥ. ಕನ್ನಡದಲ್ಲಿ ಈ ಶಬ್ದವು 'ಗೋಂಟು' ಎಂಬ ರೂಪವನ್ನಲ್ಲದೆ 'ಗೊಂಟು' ಎಂಬ ಹ್ರಸ್ವರೂಪವನ್ನೂ ಪಡೆದಿದ್ದು ಮೂಲೆ, ಮೂಡ ಪಡುವ ಇತ್ಯಾದಿ ದಿಕ್ಕು, ವಕ್ರತೆ ಮೊದಲಾದ ಅರ್ಥಗಳನ್ನು ಕೊಡುತ್ತದೆ. ಚತುರಸ್ರವಾಗಿಲ್ಲದೆ ಅಂಕುಡೊಂಕಾಗಿರುವ ಗದ್ದೆಯನ್ನು ತುಳುವಿನಲ್ಲಿ 'ಕೋಂಕೆ' ಎನ್ನುತ್ತಾರೆ. ಸಹಜವಾಗಿ ವಕ್ರವಾಗಿರುವ ಕೋಳಿಯ ಕೊರಳಿಗೆ ತುಳುವಿನಲ್ಲಿ 'ಕೋಂಕನಾಳಿ' (ನಾಳಿ = ಕೊರಳು) ಎಂದು ಹೆಸರು. ಮೇಲೆ ಹೇಳಿದ 'ಕೋಂಟು' ಎಂಬ ಶಬ್ದವೂ 'ಕೋಂಕೆ' ಎಂಬೀ ಶಬ್ದವೂ ಒಂದೇ ಮೂಲದವುಗಳೆಂಬುದು ಸುಸ್ಪಷ್ಟ. ತಿರುಗಣೆಯಾಕಾರದ, ಶಂಖಜಾತಿಗೆ ಸೇರಿದ ಸುಂದರವಾದ ಒಂದು ಚಿಪ್ಪನ್ನು ಕನ್ನಡದಲ್ಲಿ 'ಕೊಂಗ' ಎಂದು ಕರೆಯುತ್ತಾರೆ. ಈ ಕೊಂಗ ಎಂಬುದಕ್ಕೆ ಕೊಂಕುಳ್ಳ ವಸ್ತು ಎಂಬುದೇ ಅರ್ಥವೆಂಬುದು ಮೇಲೆ ಕೊಟ್ಟ ನಿದರ್ಶನಗಳಿಂದ ವ್ಯಕ್ತವಾಗದಿರದು. ಈ ಸಂದರ್ಭಗಳಲ್ಲೆಲ್ಲ ಕನ್ನಡದಲ್ಲಿ ಗೋಂಟು, ಕೊಂಗ ಹೀಗೆ ಆದ್ಯಕ್ಷರವು ಹ್ರಸ್ವವಾಗಿರುವಲ್ಲಿ, ತುಳುವಿನಲ್ಲಿ ಕೋಂಟು, ಕೋಂಕ ಇತ್ಯಾದಿಯಾಗಿ ದೀರ್ಘವಿದ್ದರೂ ಆ ಕನ್ನಡ ಮತ್ತು ತುಳುರೂಪಗಳ ಮೂಲವು ಒಂದೇ ಎಂಬುದರಲ್ಲಿ ಸಂಶಯವಿಲ್ಲ. ಆದುದರಿಂದ, ಕೋಂಕಣ ಎಂಬ ಶಬ್ದರೂಪವು ಸಂಸ್ಕೃತ ಮೂಲದ್ದಲ್ಲವೆಂದೂ ಕೊಂಕಣ–ಕೋಂಕಣ ಎಂಬೀ ಎರಡು ರೂಪಗಳೂ ಒಂದೇ ಅರ್ಥವನ್ನು ಕೊಡುವ ದ್ರಾವಿಡ ಮೂಲದ ಶಬ್ದಗಳೆಂದೂ ಸಿದ್ಧವಾಗುತ್ತದೆ. ಮತ್ತು ಮೂಲತಃ (ಕೊಂಕುಳ್ಳದ್ದು ಎಂಬ) ಒಂದೇ ಅರ್ಥದ ಶಬ್ದಕ್ಕೆ ಕೋಂಕ–ಕೊಂಗ ಎಂದು ಎರಡು ದ್ರಾವಿಡ ಭಾಷಾ ರೂಪಗಳು ಇಂದೂ ಬಳಕೆಯಲ್ಲಿರವಂತೆಯೇ ಪುರಾತನ ಕಾಲದಿಂದಲೂ ಕೊಂಕಣ – ಕೋಂಕಣ ಎಂಬ ಎರಡೂ ರೂಪಗಳು ಬಳಕೆಯಲ್ಲಿದ್ದಿರಬೇಕೆಂದು ಹೇಳಬೇಕಾಗುತ್ತದೆ. ಹಳೆಯ ತಮಿಳಿನಲ್ಲಿಯೂ 'ಕೊಂಕೆ' ಎಂಬೊಂದು ಶಬ್ದವಿತ್ತೆಂದು ತಿಳಿದುಬರುತ್ತದೆ. ಯಾವುದಾದರೊಂದು "ಉಬ್ಬಿ ಕಾಣುವ ವಸ್ತು"ವಿಗೆ ಆ ಹೆಸರನ್ನು ಅಲ್ಲಿ ಬಳಸಲಾಗಿದೆ. (ಉದಾಃ ಮೊಲೆ, ಮರದಲ್ಲಿ ಮೂಡಿಬಂದ ಮುರುಡು ಅಥವಾ ಗಂಟು ಇತ್ಯಾದಿ.) ಸ್ತ್ರೀಯರ 'ಮೊಲೆ' ಎಂಬರ್ಥದಲ್ಲಿ ಇದು ಹೆಚ್ಚಾಗಿ ಪ್ರಯುಕ್ತವಾಗಿದೆಯೆಂದೂ ಈ ಶಬ್ದಕ್ಕೆ 'ಕೋಂಕೆ' ಎಂದು ದೀರ್ಘಾದಿಯಾದ ರೂಪವೂ ಇರುವುದನ್ನು 'ಶಿಲಪ್ಪದಿಕಾರ'ದಲ್ಲಿ ಕಾಣಬಹುದೆಂದೂ ತಮಿಳನ್ನು ಬಲ್ಲವರು ಹೇಳುತ್ತಾರೆ. ಹಾಗಾದರೆ ಪುರಾತನ ಕಾಲದಲ್ಲಿಯೇ ಈ ಶಬ್ದಕ್ಕೆ ಕೊಂಕ–ಕೋಂಕ ಎಂಬ ಎರಡೂ ರೂಪಗಳು ಒಂದೇ ಅರ್ಥದಲ್ಲಿ ಬಳಕೆಯಾಗುತ್ತಿದ್ದುವೆಂದು

ನಿಸ್ಸಂಶಯವಾಗಿ ತಿಳಿದಂತಾಯಿತು; ಮತ್ತು ಮೇಲೆ ನಿರೂಪಿಸಿದ ಕನ್ನಡ ಹಾಗೂ ತುಳು ನುಡಿಯ ರೂಪಗಳು ಮೂಲತಃ ಒಂದೇ ಎಂಬುದೂ, ಅವೆರಡೂ ದ್ರಾವಿಡ ಮೂಲದ ಶಬ್ದಗಳೇ ಎಂಬುದೂ ತಮಿಳಿನ ನಿದರ್ಶನಗಳಿಂದ ಮತ್ತಷ್ಟು ದೃಢವಾದಂತಾಯಿತು. ಅಷ್ಟು ಮಾತ್ರವಲ್ಲ, ಇನ್ನೊಂದು ತಥ್ಯವೂ ಇದರಿಂದ ವ್ಯಕ್ತ ವಾಗುವ ಹಾಗೆ ಕಾಣುತ್ತದೆ. ಅದೇನೆಂದರೆ– ಮೊಲೆ ಮತ್ತು ಅಂತಹ 'ಉಬ್ಬಿ ಕಾಣುವ ವಸ್ತು'ಗಳಿಗೆ ತಮಿಳಿನಲ್ಲಿ ಈ ಹೆಸರು ಬಳಸಲ್ಪಟ್ಟಿರುವುದರಿಂದ, ಕೊಂಕ–ಕೋಂಕ ಎಂಬುದಕ್ಕೆ 'ಕೊಂಕುಳ್ಳದ್ದು' ಎಂಬ ಅರ್ಥವು ಮಾತ್ರ ಇರುವುದಾಗಿರದೆ, ನೇರವಾಗಿ 'ಗುಡ್ಡ' ಎಂಬರ್ಥವೂ ಇದ್ದಿರುವಂತೆ ತೋರುತ್ತದೆ. ಇನ್ನೊಂದು ದ್ರಾವಿಡ ಭಾಷೆಯೇ ಆದ ತೆಲುಗಿನಲ್ಲಿ, ಗುಡ್ಡ ಎಂಬರ್ಥವನ್ನು ಹೇಳುವ 'ಕೊಂಡ' ಎಂಬ ಶಬ್ದವೂ ಈ ಅಭಿಪ್ರಾಯವನ್ನು ಸಮರ್ಥಿಸುವಂತಿದೆ. ಕುಡ–ಕೊಂಕ–ಕೊಂಡ–ಗುಡ್ಡ ಎಂಬ ರೂಪಗಳು ಏಕಮೂಲದವೇ ಸೈ.

ಕೊಂಕಣ ದೇಶವನ್ನು ಕೇವಲ 'ಕೋಂಕ' ಎಂದೂ ಹೇಳುವುದಿತ್ತೆಂದು ಸಂಸ್ಕೃತ ಕೋಶ ಮತ್ತು ಇತರ ಗ್ರಂಥಗಳಿಂದ ತಿಳಿದುಬರುತ್ತದೆ. ಭಾಗವತ ಪುರಾಣದಲ್ಲಿ ಕೊಂಕಣ ಪ್ರದೇಶವನ್ನು 'ಕೋಂಕ' ಎಂದೇ ಕರೆಯಲಾಗಿದೆ. ಇದನ್ನು ಪರಿಭಾವಿಸುವಾಗ, ಕೊಂಕಣ ಅಥವಾ ಕೋಂಕಣ ಶಬ್ದದಲ್ಲಿರುವ ಣಕಾರವು ಆ ಶಬ್ದದ ಅಮುಖ್ಯ ಭಾಗವೆಂದು ಸ್ಪಷ್ಟವಾಗುತ್ತದೆ. ಹಾಗಾದರೆ ಆ ಣಕಾರವು ಒಂದು ಪ್ರತ್ಯಯವಾಗಿರಬಹುದೇ? ಚೇರ ಶಬ್ದಕ್ಕೆ ಕೇರಳವೆಂಬ ಇನ್ನೊಂದು ರೂಪವು ಬಂದಂತೆ ಇಲ್ಲಿಯೂ ಆಗಿರಬಹುದೇ?

ಚೇರ ಶಬ್ದಕ್ಕೆ ಪ್ರತಿರೂಪವಾದ ಕೇರ ಎಂಬುದಕ್ಕೆ ಸಂಸ್ಕೃತದ ಲಕಾರವು ಪ್ರತ್ಯಯವಾಗಿ ಸೇರಿ, ಕೇರಲವೆಂದೂ ಮತ್ತೆ ಅದುವೇ ಕೇರಳವೆಂದೂ ರೂಪು ಗೊಂಡಂತೆ, 'ಏರು ತಗ್ಗುಳ್ಳದ್ದು' (ಅಥವಾ ಗುಡ್ಡ) ಎಂಬ ಅರ್ಥವನ್ನು ಕೊಡು ತ್ತದೆಂದೂ ನಾವೀಗ ಕಂಡುಕೊಂಡ ಕೊಂಕ–ಕೋಂಕ ಎಂಬ ದ್ರಾವಿಡ ನಾಮಶಬ್ದಕ್ಕೆ ಸಂಸ್ಕೃತದ 'ಲ'ಕಾರವು (ಕೋಂಕಗಳಿಂದ ತುಂಬಿದುದು ಎಂಬರ್ಥದಲ್ಲಿ) ಸೇರಿ 'ಕೋಂಕಲ'ವೆಂದೂ ಆ 'ಲ'ಕಾರವು ಮತ್ತೆ 'ಳ'ಕಾರವಾಗಿ, ಕೊನೆಗೆ 'ಣ'ಕಾರವಾಗಿ ಪರಿಣಮಿಸಿತೆಂದೂ ನನಗೆ ತೋರುತ್ತದೆ. ಸಂಸ್ಕೃತದ ಲಕಾರವು ದ್ರಾವಿಡ ಭಾಷೆ ಗಳಲ್ಲಿ ಹೆಚ್ಚಾಗಿ ಳಕಾರವಾಗಿಯೇ ಉಚ್ಚರಿಸಲ್ಪಡುತ್ತದೆಂಬುದ ಸರ್ವವಿದಿತ. ಉದಾಃ ಕಾಳಿದಾಸ, ಶಕುಂತಳೆ. ಕನ್ನಡದಲ್ಲಿ ಳಕಾರವು (ಕುಳ) ಣಕಾರೋಚ್ಚಾರ ವನ್ನು ಪಡೆಯುವುದೆಂಬುದನ್ನು ಹಿಂದೆಯೇ ನಿರೂಪಿಸಿದ್ದೇನೆ. ದೇಶ್ಯ ಶಬ್ದಗಳಾದ ಗಿಳಿ, ಕೆಳೆ ಮೊದಲಾದುವುಗಳಲ್ಲಿ ಮಾತ್ರ ಈ ಬದಲಾವಣೆ (ಗಿಣಿ, ಗೆಣೆ) ಆಗುವುದಲ್ಲ; ಸಂಸ್ಕೃತ ಮೂಲದ ಳಕಾರಗಳೂ ಣಕಾರವಾದ ನಿದರ್ಶನಗಳು ಕಾಣುತ್ತವೆ. ಉದಾ : ಆಲಾಪ ಎಂಬರ್ಥದ 'ಆಲಪ್ತಿ' ಎಂಬ ಸಂಸ್ಕೃತ ಶಬ್ದವು ತದ್ಭವವಾಗಿ 'ಆಳತಿ' ಎಂಬ ರೂಪವನ್ನು ಪಡೆದು, ಮತ್ತೆ 'ಆಣತಿ' ಎಂದು ಪರಿಣಮಿಸಿದೆ. ಕನ್ನಡ ಕವಿಗಳು ಳಕಾರಕ್ಕೆ ಪ್ರಾಸವಾಗಿ ಣಕಾರವನ್ನು ಬಳಸಿದ

ನಿದರ್ಶನಗಳೂ ಇವೆ. ಉದಾ : ಅಗ್ಗಳ ಚಂ.ಪ್ರ. ೭-೯೬. ಆದುದರಿಂದ ಕನ್ನಡಿಗರ ಉಚ್ಚಾರದಲ್ಲಿ ಣಕಾರ ಳಕಾರಗಳು ಅತಿ ಸಮೀಪದವುಗಳೆಂದು ತಿಳಿಯ ಬೇಕಾಗುತ್ತದೆ. ಈ ಕಾರಣದಿಂದಲೇ ಕೋಂಕಲ-ಕೋಂಕಳ ಎಂದಿದ್ದಿರಬಹುದಾದ ಶಬ್ದರೂಪವೇ 'ಕೋಂಕಣ'ವೆಂಬ ರೂಪವನ್ನು ಪಡೆದಿರಬೇಕೆಂದು ಊಹಿಸ ಬಹುದು. ದ್ರಾವಿಡ ಭಾಷೆಗಳು ವಿಕಾಸ ಹೊಂದದೆ ಶೈಶವಾವಸ್ಥೆಯಲ್ಲಿದ್ದಾಗಲೇ, ಎಂದರೆ ಕ್ರಿಸ್ತಪೂರ್ವದ ಎಷ್ಟೋ ಶತಮಾನಗಳ ಹಿಂದಿನ ಕಾಲದಲ್ಲಿಯೇ ಅವುಗಳಿಗೆ ಸಂಸ್ಕೃತದ ಸಂಪರ್ಕವಾಗಿತ್ತೆಂಬುದನ್ನೂ, ಇಂದು ಕೊಂಕಣವೆಂದು ಕರೆಯಲ್ಪಡುವ ಪ್ರದೇಶವನ್ನು ಸುತ್ತುವರಿದಿರುವ ನಾಡಿನಲ್ಲೆಲ್ಲಾ ಪುರಾತನ ಕಾಲದಲ್ಲಿ ಬಳಕೆಯಲ್ಲಿದ್ದ ದ್ರಾವಿಡ ಭಾಷೆ ಕನ್ನಡವೆಂಬುದನ್ನೂ, ಕೊಂಕ ಎಂಬ ದ್ರಾವಿಡ ಶಬ್ದದ ಇನ್ನೊಂದು ರೂಪವಾದ ಕೋಂಕ ಎಂಬುದು ಇಂದೂ ತನ್ನ ನಿಜಾರ್ಥದಲ್ಲಿ ಬಳಕೆಯಲ್ಲಿರುವ ತುಳುನಾಡು ಕೊಂಕಣ ಪ್ರದೇಶಕ್ಕೆ ಹೆಚ್ಚುಕಡಮೆ ನೆರೆನಾಡು ಎಂಬುದನ್ನೂ ಲಕ್ಷಿಸಿದರೆ ನನ್ನ ಪ್ರತಿಪಾದನೆಯ ಔಚಿತ್ಯವು ಹೊಳೆಯದಿರದು.

ಜಟಿಲವೆಂದು ತೋರಬಹುದಾದ ಈ ಮೇಲಿನ ಪ್ರತಿಪಾದನೆಯ ತಾತ್ಪರ್ಯ ಇದು: ಕೊಂಕ ಹಾಗೂ ಕೋಂಕ ಎಂಬಿವು ಒಂದೇ ಶಬ್ದದ ಎರಡು ರೂಪಗಳು; ಅವೆರಡೂ ದ್ರಾವಿಡ ರೂಪಗಳೇ ಆಗಿವೆ; ಅವೆರಡರ ಅರ್ಥವೂ ಅಭಿನ್ನ; ಅವೆರಡಕ್ಕೂ ವಕ್ರ, ನಿಮ್ನೋನ್ನತ ಎಂಬ ವಿಶೇಷಾರ್ಥಗಳೂ, 'ಅಂಕು ಡೊಂಕಾದ ವಸ್ತು' ಮತ್ತು 'ಉಬ್ಬಿದ ವಸ್ತು' (ಉದಾ: ಮೊಲೆ ಇತ್ಯಾದಿ) ಎಂಬ ನಾಮಾರ್ಥಗಳೂ ಇವೆ; ಅಷ್ಟು ಮಾತ್ರವಲ್ಲ, ನೇರವಾಗಿ ಗುಡ್ಡ ಎಂಬರ್ಥವೂ ಇದ್ದಿರುವಂತಿದೆ. 'ಕೇರ' ಎಂಬುದಕ್ಕೆ ಸಂಸ್ಕೃತದ ಲ-ಪ್ರತ್ಯಯ ಸೇರಿ ಕೇರಲ-ಕೇರಳವಾದಂತೆಯೇ, 'ಕೋಂಕ'ಕ್ಕೂ ಸೇರಿ, ಕೋಂಕಲ-ಕೋಂಕಳ, ಕೊನೆಗೆ 'ಕೋಂಕಣ' ಎಂದು ಪರಿಣಮಿಸಿದೆ; ಅದುವೇ 'ಕೊಂಕಣ' ಎಂದು ತದಭಿನ್ನವಾಗಿ ಕನ್ನಡದಲ್ಲಿ ರೂಢವಾಗಿದೆ. ಕೊಂಕಣ-ಕೋಂಕಣ ಎಂಬ ಶಬ್ದದ ಅರ್ಥವೂ ಕೇರಳ ಎಂಬ ಶಬ್ದದ ಮೂಲಾರ್ಥದಂತೆಯೇ 'ಪರ್ವತಪ್ರಾಯ' ಎಂದಾಗಿದೆ. (ಕೋಂಕ ಶಬ್ದಕ್ಕೆ ಸೇರಿದ ಲ-ಳ ಪ್ರತ್ಯಯವು ಣ-ಕಾರವಾಗಿ ಪರಿಣಮಿಸುವುದಕ್ಕೆ, 'ಕೋಂಕ' ಎಂಬುದರಲ್ಲಿ ಅಡಕವಾಗಿರುವ ಅನುನಾಸಿಕ ವರ್ಣವೂ ಒಂದು ಕಾರಣವಾಗಿದ್ದಿರು ವುದು ಸಂಭವನೀಯ.)

ಒಂದಾನೊಂದು ಕಾಲದಲ್ಲಿ ಏಳು ದೇಶಗಳ ಕೂಟವಾಗಿ ಭಾವಿಸಲ್ಪಟ್ಟಿದ್ದ ಪರಶುರಾಮ ಕ್ಷೇತ್ರವು, ಒಮ್ಮೆ 'ಸಪ್ತ ಕೊಂಕಣ'ವೆಂದೂ ಇನ್ನೊಮ್ಮೆ 'ಸಪ್ತ ಕೇರಳ'ವೆಂದೂ ಮಗುಳೊಮ್ಮೆ 'ಏಳು ತುಳುದೇಶಗಳೆಂ'ದೂ ಗ್ರಂಥದಲ್ಲಿ ಮತ್ತು ಶಾಸನದಲ್ಲಿ ಏಕೆ ಹೇಳಲ್ಪಟ್ಟಿತೆಂಬುದರ ರಹಸ್ಯವನ್ನು ತಿಳಿದುಕೊಳ್ಳಲು ಈಗ ನಮಗೆ ಕಷ್ಟವಾಗಲಾರದು. ಪರಶುರಾಮ ಕ್ಷೇತ್ರವೆಲ್ಲ ಘಟ್ಟದ ಮೇಗಣ ಪೀಠ ಭೂಮಿಯಂತೆ ಸಪಾಟವಾಗಿರದೆ, ಏರುತಗ್ಗಾದ ಪ್ರದೇಶವಾಗಿರುವುದರಿಂದ ಆ

ಏಳು ದೇಶಗಳಿಗೆ 'ಕೊಂಕಣ' ಶಬ್ದದ ಮೂಲಾರ್ಥ ವಿವಕ್ಷೆಯಿಂದ (ಏರುತಗ್ಗು ಅಥವಾ ಪರ್ವತಪ್ರಾಯ) 'ಸಪ್ತಕೊಂಕಣ'ವೆಂಬ ಹೆಸರು ಅನ್ವರ್ಥವೇ ಆಗಿದೆ. ಹಾಗೆಯೇ, ಪಶ್ಚಿಮ ಘಟ್ಟಗಳು ಪರಶುರಾಮ ಕ್ಷೇತ್ರದ ಒಂದು ತುದಿಯಿಂದ ಇನ್ನೊಂದು ತುದಿಯವರೆಗೆ ವ್ಯಾಪಿಸಿದ್ದು, ಅದರ ಮೂಡಲ ಮೇರೆಯೂ ಆಗಿರುವುದರಿಂದ ಆ ಏಳು ದೇಶಗಳನ್ನು 'ಕೇರಳ' ಶಬ್ದದ ಮೂಲಾರ್ಥ ವಿವಕ್ಷೆಯಿಂದ (ಬೆಟ್ಟಗಳಿಂದ ತುಂಬಿದುದು) 'ಸಪ್ತಕೇರಳ'ವೆಂದು ಹೇಳುವುದು ಯುಕ್ತವೇ ಸರಿ. ಇವುಗಳಂತೆಯೇ, ಪರಶುರಾಮ ಕ್ಷೇತ್ರವೆಲ್ಲ ಹೆಚ್ಚು ಕಡಮೆ ಅನೂಪದೇಶವೇ ಆಗಿರುವುದರಿಂದ, (ಹಿಂದೆ ಕೊಟ್ಟಿರುವ ಅನೂಪದೇಶ ಲಕ್ಷಣವನ್ನು ಅವಲೋಕಿಸಿರಿ.) ತುಳು ಎಂದರೆ ಅನೂಪ–ಎಂದರೆ ಜಲಭರಿತ ಎಂದೇ ಅರ್ಥವೆಂಬುದು ನಮಗೀಗ ನಿಸ್ಸಂದಿಗ್ಧವಾಗಿ ತಿಳಿದುಬಂದಿರುವುದರಿಂದ, ಆ ಏಳು ದೇಶಗಳನ್ನು 'ತುಳು' ಶಬ್ದದ ಮೂಲಾರ್ಥ ವಿವಕ್ಷೆಯಿಂದ (ಜಲಭರಿತ) 'ಏಳು ತುಳು ದೇಶಗಳು' ಎಂದು ಶಾಸನದಲ್ಲಿ ಹೆಸರಿಸಿದುದು ಸಮಂಜಸ ವೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಈ 'ಏಳು ತುಳು ದೇಶಗಳು' ಎಂಬ ವಕ್ಕಣೆಯಲ್ಲಿ ಅಖಿಲ ಪರಶುರಾಮ ಕ್ಷೇತ್ರವನ್ನೂ 'ತುಳು' ಎಂದು ಆ ಶಾಸನದಲ್ಲಿ ಹೇಳಿದುದರಿಂದ, ಹನ್ನೆರಡನೆಯ ಶತಮಾನದಲ್ಲಿ ತುಳು ಶಬ್ದದ ನಿಜಾರ್ಥವು (ಜಲಭರಿತ) ಕಣ್ಮರೆಯಾಗಿರಲಿಲ್ಲವೆಂಬುದು ಸ್ಪಷ್ಟವಾಗಿ ಗೊತ್ತಾಗುತ್ತದೆ.

---

1975. "ಕೆಲವು ದೇಶನಾಮಗಳು" ಗ್ರಂಥದ 'ತುಳು ಶಬ್ದಾರ್ಥ ಮತ್ತು ಚೇರ–ಕೊಂಕಣ' ಎಂಬ ಲೇಖನದ ಆಯ್ದ ಭಾಗ.

---

### ಭಾಗ – ೨

ಗೋರಾಷ್ಟ್ರವೆಂಬ ಹೆಸರುಳ್ಳ ಪ್ರದೇಶದ ತೆಂಕತುದಿಯಿಂದ – ಬಹುಶಃ ತುಳು ನಾಡಿನ ದಕ್ಷಿಣ ಮೇರೆಯಿಂದ – ಮೊದಲ್ಗೊಂಡು ಬಡಗಣ ತುದಿಯಲ್ಲಿ ರುವ ಮುಂಬಯಿಯವರೆಗೆ ಸಹ್ಯಾದ್ರಿಯಿಂದ ಪಶ್ಚಿಮಕ್ಕಿರುವ ಭೂಭಾಗವು ಸಮಾನವಾದ ಪ್ರಾಕೃತಿಕ ಲಕ್ಷಣವುಳ್ಳದ್ದಾಗಿದೆ. ಸಮಗ್ರವಾದ ಈ ಭೂಭಾಗದ ಸಮುದ್ರ ತೀರಕ್ಕೆ 'ಕೊಂಕಣತೀರ' ಎಂಬ ಹೆಸರು ಇಂದು ಕೂಡಾ ಇದೆ. ಆದುದ ರಿಂದ ಒಂದಾನೊಂದು ಕಾಲದಲ್ಲಿ ಈ ಭೂಭಾಗವೆಲ್ಲ 'ಕೊಂಕಣ'ವೆಂಬ ಹೆಸರಿ ನಿಂದ ಕರೆಯಲ್ಪಡುತ್ತಿತ್ತೆಂದು ಹೇಳುವುದು ತಪ್ಪಾಗಲಾರದು. ಈ ಕೊಂಕಣವೆಂಬ ಶಬ್ದವು ಇಲ್ಲಿ ವಾಸಿಸುವ ಜನರ ಭಾಷೆಯನ್ನು ಅವಲಂಬಿಸಿ ಹುಟ್ಟಿದ್ದೂ ಅಲ್ಲ; ಜನಜಾತಿಯ ಹೆಸರನ್ನವಲಂಬಿಸಿ ಹುಟ್ಟಿದ್ದೂ ಅಲ್ಲ. ಈ ಶಬ್ದದ ನಿಷ್ಪತ್ತಿಯನ್ನು (ಕುರಿತು ಮೇಲೆ) ಹೇಳಿದುದರ ಸಾರವನ್ನು ಆಧರಿಸಿ ಇಲ್ಲಿ ಕೆಲವು ಮಾತುಗಳನ್ನು

ಹೇಳಬಯಸುತ್ತೇನೆ:- ಭಾಗವತ ಮಹಾಪುರಾಣದಲ್ಲಿ ಕೊಂಕಣದೇಶವನ್ನು 'ಕೋಂಕ' ಎಂದಿಷ್ಟೇ ಹೇಳಲಾಗಿದೆ. ಆಪಟೆಯವರ ಶಬ್ದಕೋಶವೂ ಇದನ್ನು ತಿಳಿಸುತ್ತದೆ. 'ಕೋಂಕ' ಎಂಬ ಮೂಲ ಶಬ್ದಕ್ಕೆ 'ಕೋಂಕಗಳಿಂದ ತುಂಬಿದ' ಎಂಬರ್ಥದಲ್ಲಿ 'ಲ' ಎಂಬ ತದ್ಧಿತ ಪ್ರತ್ಯಯವು ಸೇರಿ 'ಕೋಂಕಲ' ಎಂಬ ರೂಪವುಂಟಾಗಿ – ಸಂಸ್ಕೃತದ 'ಕುರುಜಾಂಗಲ' ಎಂಬ ದೇಶನಾಮವು ಹಳಗನ್ನಡ ಕಾವ್ಯಗಳಲ್ಲಿ 'ಕುರುಜಾಂಗಣ' ಎಂದಾಗಿರುವಂತೆ – 'ಕೋಂಕಣ' ಎಂಬ ರೂಪ ಹುಟ್ಟಿರುತ್ತದೆ. ಈ ಶಬ್ದದ ಆದ್ಯಕ್ಷರಕ್ಕೆ ಹ್ರಸ್ವತ್ವ ಬಂದು 'ಕೊಂಕಣ' ಎಂಬ ರೂಪ ಉಂಟಾಗಿದೆ. 'ಕೋಂಕ' ಎಂಬ ಶಬ್ದವು ದ್ರಾವಿಡ ಮೂಲವಾಗಿದ್ದು 'ಗುಡ್ಡ' ಅಥವಾ 'ನಿಮ್ನೋನ್ನತ ಪ್ರದೇಶ' ಎಂಬ ಅರ್ಥವನ್ನು ಕೊಡುವಂತಹದಾಗಿದೆ. (ತಮಿಳಿನಲ್ಲಿ 'ಕೋಂಕ' ಎಂದರೆ ಉಬ್ಬಿದಂತಿರುವ ವಸ್ತು ಎಂದರ್ಥ.) 'ಕೋಂಕ' ಶಬ್ದದಿಂದಲೇ ಹುಟ್ಟಿದ 'ಕೊಂಕು' ಎಂಬುದಕ್ಕೆ ಕನ್ನಡದಲ್ಲಿ 'ವಕ್ರ' ಎಂಬರ್ಥವಿದೆ. ತುಳುವಿನಲ್ಲಿ ಹುಣಿ–ಎಂದರೆ ಗದ್ದೆಯ ಬದು– ಅಂಕುಡೊಂಕಾಗಿದ್ದರೆ ಆ ಗದ್ದೆಯನ್ನು 'ಕೋಂಕೆ' ಎನ್ನುತ್ತಾರೆ. ಕನ್ನಡ ವ್ಯಾಕರಣದಲ್ಲಿ 'ಕೊಂಕು' ಎಂಬ ಶಬ್ದಕ್ಕೆ ಕುಡು ಎಂಬ ಆದೇಶವು ಬರುವುದೆಂದು ಹೇಳಲಾಗಿದೆ. ಅರ್ಥಾತ್ ಅವರೆಡೂ ಒಂದೇ ಮೂಲದ ಶಬ್ದಗಳೆಂಬುದು ಕೇಶಿರಾಜಾದಿ ವೈಯಾಕರಣರ ಅಭಿಪ್ರಾಯವಾಗಿದೆ. ಕನ್ನಡದಲ್ಲಿ 'ಕುಡುಗೋಲು' ಎಂದು ಕರೆಯಲ್ಪಡುವ ಕತ್ತಿಗೆ ತುಳುವಿನಲ್ಲಿ 'ಕೊಂಕಣಕತ್ತಿ' ಎಂಬ ಹೆಸರಿರುವುದು ಈ ಅಭಿಪ್ರಾಯವನ್ನು ಪುಷ್ಟೀಕರಿಸುತ್ತದೆ. ಈ ಶಬ್ದವು ದ್ರಾವಿಡ ಭಾಷೆಗಳಲ್ಲಿ ನಾನಾ ರೂಪಗಳನ್ನು ಪಡೆದಿರುತ್ತದೆ– ಕೊಂಡ (ತೆಲುಗು) ಗುಡ್ಡ; ಗುಡ್ಡ (ಕನ್ನಡ); ಕೋಂಟು (ತುಳು) ಮೂಲೆ; ಗೋಂಟು (ಕನ್ನಡ) ದಿಕ್ಕು, ಮೂಲೆ ಇತ್ಯಾದಿ. 'ಕೊಡಗು' ಎಂಬ ಶಬ್ದಕ್ಕೂ ಇದುವೇ ಮೂಲವಾಗಿದೆ. ಆ ಪ್ರದೇಶವು ಗುಡ್ಡಗಳಿಂದ ತುಂಬಿದ್ದು ನಿಮ್ನೋನ್ನತವಾಗಿರುವ ಕಾರಣ ಅದಕ್ಕೆ ಆ ಹೆಸರು ಬಂದುದಾಗಿದೆ. ನೆರೆಯ ಬಯಲುಸೀಮೆಯಂತೆ ಸಮತಟ್ಟಾಗಿರದೆ ನಿಮ್ನೋನ್ನತವಾಗಿರುವುದರಿಂದಲೇ 'ಕೊಂಕಣ'ವೆಂಬ ಹೆಸರು ಈ ಭೂಭಾಗಕ್ಕೆ ಬಂದಿರುತ್ತದೆ. (ಕೊಂಗುನಾಡು ಎಂಬ ಹೆಸರಿಗೂ ಇದುವೇ ಮೂಲ; ಇದರಲ್ಲಿರುವ 'ಕೊಂಗು' ಎಂಬುದು 'ಕೊಂಕು' ಎಂಬ ಶಬ್ದದ ಇನ್ನೊಂದು ರೂಪವಾಗಿದೆ.) ವರ್ಗಪ್ರಥಮ ವರ್ಣಗಳಿಗೆ ವರ್ಗತೃತೀಯತ್ವ ಬರುವುದು ದ್ರಾವಿಡ ಭಾಷೆಗಳದೊಂದು ಸಾಮಾನ್ಯ ಲಕ್ಷಣ. ಈ ಕಾರಣದಿಂದಲೇ ('ಕುಡು' ಎಂಬ ಶಬ್ದದಿಂದ ಹುಟ್ಟಿದ) ಗುಡ್ಡ ಮತ್ತು ಗೋಂಟು, ಗೋರು (< ಕೋರು), ಗೆಳೆಯ (< ಕೆಳೆಯ) ಗೀರು (< ಕೀರು) ಇತ್ಯಾದಿಗಳು ರೂಪುಗೊಂಡಿವೆ ಎಂಬುದನ್ನು ಗಮನಿಸಿದರೆ ಗೋವೆ, ಗೋರಾಷ್ಟ್ರ ಎಂಬ ಶಬ್ದಗಳ ಪ್ರಥಮಾಕ್ಷರಗಳು 'ಕೋಂಕ' ಎಂಬ ಶಬ್ದದ ಪ್ರಥಮಾಕ್ಷರದ ರೂಪಾಂತರಗಳಾಗಿ ಕಂಡುಬಾರದಿರವು.

'ಕೋಂಕ' ಎಂಬ ಶಬ್ದವು 'ಗೋವೆ' ಎಂಬಷ್ಟು ರೂಪಾಂತರಗೊಳ್ಳುವುದು ಸಂಭವನೀಯವಲ್ಲವೆಂದು ಮೇಲ್ನೋಟಕ್ಕೆ ತೋರಬಹುದಾದರೂ ಸೂಕ್ಷ್ಮವಾಗಿ

ಪರಾಮರ್ಶಿಸಿದರೆ ಇದೇನೂ ಅಸಂಭವವಲ್ಲವೆಂಬುದು ಹೊಳೆಯದಿರದು. ಕೊಂಕಣ ಎಂಬ ಹೆಸರಿನ ಭೂಭಾಗದಲ್ಲಿ ಪುರಾತನ ಕಾಲದಿಂದಲೇ ಎರಡು ಭಾಷೆಗಳು ಪ್ರಚಲಿತವಾಗಿದ್ದುವೆಂದು ತಿಳಿದುಬರುತ್ತದೆ. ಅವುಗಳಲ್ಲೊಂದು ದ್ರಾವಿಡ ಭಾಷಾವರ್ಗಕ್ಕೆ ಸೇರಿದ ಕನ್ನಡ; ಇನ್ನೊಂದು ಸಂಸ್ಕೃತದಿಂದ ಹುಟ್ಟಿಬಂದ ಮಹಾರಾಷ್ಟ್ರೀ ಪ್ರಾಕೃತ. ಈ ಪ್ರಾಕೃತ ಭಾಷೆಗೆ ಕನ್ನಡ ಭಾಷೆಯ ಸಂಪರ್ಕವುಂಟಾದುದರ ಫಲವಾಗಿ ಕಾಲಾಂತರದಲ್ಲಿ ಮರಾಟಿ ಮತ್ತು ಕೊಂಕಣಿ ಎಂಬೆರಡು ಭಾಷೆಗಳು ರೂಪುಗೊಂಡಿವೆ. ಸಂಸ್ಕೃತವು ಪ್ರಾಕೃತವಾಗಿ ಮಾರ್ಪಡುವಾಗ ಉಂಟಾದ ರೂಪಗಳು ಮೂಲದ ಹೊಲಬೇ ಭಾಸವಾಗದಿರುವಷ್ಟು ವಿಕೃತಿಯನ್ನು ಪಡೆದಿರುತ್ತವೆ. ಉದಾಃ ಸಂಸ್ಕೃತದ 'ಉಪಾಧ್ಯಾಯ' ಎಂಬ ಶಬ್ದವು 'ಉವಜ್ಞಾಯ', 'ಉವಜ್ಜ' ಎಂಬುದಾಗಿ ಮಾರ್ಪಟ್ಟು ಮತ್ತೆ 'ಓಝೂ'; ಕೊನೆಗೆ ಕೇವಲ 'ಝೂ' ಎಂದಾಗಿರುತ್ತದೆ. (ಈ ಶಬ್ದವು ಕನ್ನಡದಲ್ಲಿ ತದ್ಭವಿಸಿ ಒವಜ, ಓಜ ಎಂಬ ರೂಪಗಳಲ್ಲಿದೆ.) ಸಂಸ್ಕೃತದ 'ಭವಂತಿ' ಎಂಬುದು 'ಹೋಂತಿ' ಎಂಬ ರೂಪವನ್ನು ಪಡೆದಿರುತ್ತದೆ. 'ಮಾತೃ' ಅಥವಾ 'ಮಾತಾ' ಎಂಬುದು ಈಗ ಹಿಂದೀ ಭಾಷೆಯಲ್ಲಿ ತನ್ನ ಉತ್ತರಾರ್ಧವನ್ನು ಸಂಪೂರ್ಣವಾಗಿ ಕಳೆದುಕೊಂಡು ಕೇವಲ 'ಮಾ' ಎಂದಿಷ್ಟೇ ಉಳಿದಿರುತ್ತದೆ. ಸಂಸ್ಕೃತದ 'ಬೃಹತ್' ಎಂಬ ಶಬ್ದವು ಕೊಂಕಣಿ ಭಾಷೆಯಲ್ಲಿ 'ಹೋಡ' ಎಂದಾಗಿರುವುದನ್ನು ಕಾಣಬಹುದು. ಪ್ರಾಕೃತ ಭಾಷೆಗಳೊಳಗೆ ಉತ್ತಮವೆಂದು ಗೃಹೀತವಾಗಿದ್ದ ಮಹಾರಾಷ್ಟ್ರೀ ಪ್ರಾಕೃತ ದಲ್ಲಾದರೂ 'ಹೃದಯ' ಎಂಬುದು 'ಹಿಅಅ' ಎಂದೂ ('ತುಜ್ಜಣ ಜಾಣೇ ಹಿಅಅಂ' –ಶಾಕುಂತಲ) 'ಸುಕುಮಾರ' ಎಂಬುದು 'ಸುಉಮಾರ' ಎಂದೂ ('ಈಸೀಸಿ ಚುಂಬಿಆಇಂ ಭಮರೇಇಂ ಸುಉಮಾರ ಕೇಸರ ಸಿಹಾಇಂ' –ಶಾಕುಂತಲ) ಆಗಿರುತ್ತವೆ. 'ಗೋವೆ'ಯೆಂದು ನಾವು ಕನ್ನಡದಲ್ಲಿ ಉಚ್ಚರಿಸುವ ಶಬ್ದವನ್ನು (ದಕ್ಷಿಣ ಕನ್ನಡದ) ಕೊಂಕಣಿಗರು ತಮ್ಮ ಭಾಷೆಯಲ್ಲಿ ಹಾಗೆ ಉಚ್ಚರಿಸುವುದಿಲ್ಲ; ಅವರು ಅದನ್ನು 'ಗೋಂಎ' ಎನ್ನುತ್ತಾರೆ. 'ಗೋಂಎ' ಎಂಬೀ ರೂಪದ ಆದಿಯ 'ಗೋ' ಎಂಬುದು 'ಕೋಂಕ' ಎಂಬ ಶಬ್ದದ ಪ್ರಥಮಾಕ್ಷರದ ರೂಪಾಂತರವಾಗಿದೆ. 'ಕೋಂಕ' ಎಂಬುದರ ಕೊನೆಯ ವ್ಯಂಜನಾಕ್ಷರವು– 'ಸುಕುಮಾರ' ಎಂಬುದು 'ಸುಉಮಾರ' ಎಂದಾಗುವಾಗ ಪಡೆದಿರುವ ರೂಪದಂತೆ– ಸ್ವರಾಕ್ಷರವಾಗಿ ಮಾರ್ಪಟ್ಟಿರುತ್ತದೆ; 'ಕೋಂಕ'ದ ಕೊನೆಯ ಸ್ವರವು ಅಕಾರವಾಗಿದ್ದರೂ 'ಗೋಂಎ' ಎಂಬುದರ ಕೊನೆಯಲ್ಲಿ ಅದು ಎಕಾರವಾದುದು ಮಾತ್ರವಲ್ಲ, ಹ್ರಸ್ವರೂಪವನ್ನು ಪಡೆದಿರುವುದು ಕನ್ನಡದ ಪ್ರಭಾವದಿಂದಾಗಿದೆ. 'ಕೋಂಕ' ಎಂಬುದರಲ್ಲಿರುವ ಬಿಂದು 'ಗೋಂಎ' ಎಂಬುದರಲ್ಲಿಯೂ ಇರುವುದನ್ನು ಲಕ್ಷಿಸಿದರೆ ಆಯೆರಡು ಶಬ್ದಗಳೊಳಗಿರುವ ನಂಟು ತಿಳಿದು ಬರುವುದು. (ಕಿಟ್ಟೆಲ್ಲರ ನಿಘಂಟುವಿನಲ್ಲಿ 'ಗೋವೆ' ಎಂಬುದಕ್ಕೆ 'ಗೋಂ' ಎಂಬ

ರೂಪವೂ ಇದೆಯೆಂದು ಹೇಳಲಾಗಿದೆ.) ಸಂಸ್ಕೃತವು ಪ್ರಾಕೃತವಾಗಿ ರೂಪು ಗೊಳ್ಳುವಾಗ ಉಂಟಾಗುವ ವೈಚಿತ್ರ್ಯಗಳನ್ನು ಗಮನಿಸಿದರೆ ಕನ್ನಡ ಮತ್ತು ಪ್ರಾಕೃತ ಭಾಷೆಗಳ ಸಂಯೋಗದ ಫಲವಾಗಿ 'ಕೋಂಕ'ವು 'ಗೋಂಪ' (ಮತ್ತು 'ಗೋಂ') ಎಂದಾದುದರಲ್ಲಿ ಆಶ್ಚರ್ಯವೇನೂ ತೋರಲಾರದು. ಆದರೆ 'ಗೋರಾಷ್ಟ್ರ' ಎಂಬುದಕ್ಕೂ 'ಕೋಂಕ' ಎಂಬುದಕ್ಕೂ ಇರುವ ಸಂಬಂಧವು ಇಷ್ಟು ಸ್ಫುಟ ವಾಗಿಲ್ಲದಿರುವುದರಿಂದ ಅದು ಬೇರೆ ಮೂಲದ ಶಬ್ದವೆಂದು ತೋರಬಹು ದಾದರೂ ವಿಚಾರಾಂತ್ಯದಲ್ಲಿ ಈ ಶಬ್ದಕ್ಕೂ 'ಕೋಂಕ'ವೇ ಮೂಲವೆಂಬುದು ಗೊತ್ತಾಗದಿರುವುದಿಲ್ಲ. ಇದು ಹೇಗೆಂದರೆ – 'ಕೋಂಕಣ' ಎಂಬ ಶಬ್ದವನ್ನು ಮರಾಠಿಯಲ್ಲಿ 'ಕೋಕಣ' ಎಂದು ಉಚ್ಚರಿಸುತ್ತಾರೆ; ಇದರಿಂದ 'ಕೋಂಕ' ಶಬ್ದವು ಬಿಂದುರಹಿತವಾಗಿಯೂ ಇರಬಹುದಾಗಿದೆ ಎಂದು ಸಿದ್ಧವಾಗುತ್ತದೆ. ಆದ ಕಾರಣ 'ಗೋರಾಷ್ಟ್ರ' ಎಂಬ ಶಬ್ದದಲ್ಲಿಯೂ, 'ಕೋಂಕಣ'ವು 'ಕೋಕಣ'ವಾಗುವಾಗ ಹೇಗೆ ಬಿಂದುಲೋಪ ವಾಗಿದೆಯೋ ಹಾಗೆಯೇ ಬಿಂದು ಮಾಯವಾಗಿದೆಯೆಂದು ತಿಳಿದರೆ 'ಗೋರಾಷ್ಟ್ರ' ಎಂಬುದಕ್ಕೂ 'ಕೋಂಕ' ಎಂಬುದಕ್ಕೂ ಇರುವ ಸಂಬಂಧವು ಸ್ಫುಟವಾಗುತ್ತದೆ. 'ಉವಜ್ಝಾಯ' ಎಂಬುದು ಸವೆದು 'ಝಾ' ಎಂದಾದುದನ್ನೂ 'ಮಾತ್ರ' ಎಂಬುದು ಕೇವಲ 'ಮಾ' ಎಂದಾಗಿರುವುದನ್ನೂ ಪರಿಭಾವಿಸಿದರೆ 'ಕೋಂಕ' ಎಂಬುದು 'ಗೋ' ಎಂಬ ತ್ರುಟಿತ ರೂಪವನ್ನು ಪಡೆದುದು ಸೋಜಿಗವೆಂದು ತೋರಲಾರದು. 'ಗೋ' ಎಂಬ ಏಕಾಕ್ಷರನಾಮಕ್ಕೆ ವಿಭಕ್ತಿ ಸೇರಿದಾಗ ಅದು ದನ ಎಂಬರ್ಥದಲ್ಲಿ ಸುಪ್ರಸಿದ್ಧವಾಗಿರುವ ಶಬ್ದಕ್ಕೆ ಸಮಾನವಾಗಿ ಪರಿಣಮಿಸಿ ಅರ್ಥದಲ್ಲಿ ಅಸ್ಪಷ್ಟತೆಯನ್ನುಂಟುಮಾಡುವ ಕಾರಣ, 'ಕೋಂಕ'ದ ಅವಶಿಷ್ಟವಾಗಿರುವ 'ಗೋ' ಎಂಬುದು ಒಂದು ದೇಶದ ಹೆಸರಾಗಿ ಬಳಸುವುದಕ್ಕೆ ತಕ್ಕುದಾಗುವುದಕ್ಕಾಗಿ 'ರಾಷ್ಟ್ರ' ಎಂಬುದನ್ನು ಅದಕ್ಕೆ ಸೇರಿಸಿ ಬಳಸಿದುದರಿಂದ 'ಕೊಂಕಣ' ಎಂಬ ದೇಶಕ್ಕೇ 'ಗೋರಾಷ್ಟ್ರ' ಎಂಬ ಹೆಸರು ಬಂತೆಂದು ತಿಳಿಯಬಹುದಾಗಿದೆ. ನೆರೆಯ ಭೂಭಾಗಕ್ಕೆ ಇರುವ 'ಮಹಾರಾಷ್ಟ್ರ' ಎಂಬ ಹೆಸರು ಸಹ ಈ ಭೂಭಾಗದ ಹೆಸರಿಗೂ 'ರಾಷ್ಟ್ರ' ಎಂಬ ಶಬ್ದವು ಸೇರಿಕೊಳ್ಳಲು ಇನ್ನೊಂದು ಕಾರಣವಾಗಿದ್ದರಬೇಕು. ಸಂಕಲ್ಪ ಮಂತ್ರದಲ್ಲಿ 'ಗೋರಾಷ್ಟ್ರ' ಎಂದಿರದೆ 'ಗೋರಾಷ್ಟ್ರ ದೇಶೇ' ಎಂದು ಒಂದೇ ಅರ್ಥವನ್ನು ಕೊಡುವ ಎರಡು ಶಬ್ದಗಳು (ರಾಷ್ಟ್ರ ಮತ್ತು ದೇಶ) ಸೇರಿಕೊಳ್ಳುವುದಕ್ಕೆ ಕಾರಣವೇನಿರಬಹುದೆಂಬ ಶಂಕೆ ಇಲ್ಲಿ ಉತ್ಪನ್ನ ವಾಗಬಹುದು. ರಾಷ್ಟ್ರ ಎಂಬುದರ ಅರ್ಥವು ದೇಶವೆಂದು ಮಾತ್ರ ಆಗಿರದೆ, ಅದಕ್ಕೆ ಪ್ರದೇಶ, ರಾಜ್ಯ, ಸಾಮ್ರಾಜ್ಯ ಎಂಬ ಅರ್ಥಗಳಷ್ಟೇ ಅಲ್ಲದೆ 'ಜನತೆ' ಎಂಬರ್ಥವೂ ಇರುತ್ತದೆ. ಆಪಟೆಯವರ ನಿಘಂಟುವಿನಲ್ಲಿ 'ರಾಷ್ಟ್ರ' ಎಂಬ ಶಬ್ದಕ್ಕೆ ಮನುಸ್ಮೃತಿಯ ಆಧಾರದಿಂದ People, Nation ಎಂಬ ಅರ್ಥಗಳನ್ನೂ ಕೊಡಲಾಗಿದೆ. ಈ ಕಾರಣದಿಂದ ಸ್ಪಷ್ಟತೆಗೋಸ್ಕರ

'ಗೋರಾಷ್ಟ್ರದೇಶೇ' ಎಂದು ಹೇಳುವ ಸಂಪ್ರದಾಯವು ಬಂದುದಾಗಿದೆ. ತಾತ್ಪರ್ಯವೇನೆಂದರೆ, ಗೋರಾಷ್ಟ್ರ ದೇಶವೆಂದರೆ ಕೊಂಕಣದೇಶ ಎಂಬುದೇ ಅರ್ಥವಾಗಿರುತ್ತದೆ. ದಕ್ಷಿಣದ ಕನ್ಯಾಕುಮಾರಿಯಿಂದ ಮೊದಲ್ಗೊಂಡು ಉತ್ತರದ ಮುಂಬಯಿ ವರೆಗಿನ, ಸಮುದ್ರದ ಮತ್ತು ಸಹ್ಯಾದ್ರಿ ಶ್ರೇಣಿಯ ಮಧ್ಯದ ಭೂಭಾಗಕ್ಕೆ 'ಪರಶುರಾಮ ಕ್ಷೇತ್ರ'ವೆಂಬ ಹೆಸರಿರುವುದು ಎಲ್ಲರಿಗೂ ಗೊತ್ತಿದೆ. ಸಂಕಲ್ಪ ಮಂತ್ರದಲ್ಲಿಯೂ ಇದು 'ಪರಶುರಾಮ ಕ್ಷೇತ್ರೇ, ಗೋರಾಷ್ಟ್ರದೇಶೇ, ಗೋಕರ್ಣ ಮಂಡಲೇ' ಎಂದು ಉಚ್ಚರಿಸಲ್ಪಡುತ್ತದೆ. 'ಪರಶುರಾಮ ಕ್ಷೇತ್ರ' ಎಂಬ ಭೂಭಾಗವನ್ನು ಸ್ಥೂಲವಾಗಿ ವಿಂಗಡಿಸಿದರೆ, ಅದರ ಉತ್ತರ ಭಾಗವು 'ಗೋರಾಷ್ಟ್ರ ದೇಶ' (ಕೊಂಕಣದೇಶ) ವೆಂದೂ ದಕ್ಷಿಣ ಭಾಗವು 'ಕೇರಳ ದೇಶ'ವೆಂದೂ ಹೆಸರು ಪಡೆಯುತ್ತವೆ. ಸಂಕಲ್ಪ ಮಂತ್ರದ ಉಕ್ತಿಗೆ ಇಲ್ಲಿ ಹೇಳಲಾದ ಸ್ಥೂಲ ವಿಭಾಗವು ಆಧಾರವಾಗಿರುತ್ತದೆ. ಆದುದರಿಂದ ಸಂಕಲ್ಪಮಂತ್ರದ ತಾತ್ಪರ್ಯ ಹೀಗಾಗುತ್ತದೆ:– ಪರಶುರಾಮ ಕ್ಷೇತ್ರದೊಳಗೆ ಗೋರಾಷ್ಟ್ರ ದೇಶವು ಒಂದು ಭಾಗ; ಗೋರಾಷ್ಟ್ರ ದೇಶದೊಳಗೆ ಗೋಕರ್ಣಮಂಡಲವೆಂಬುದು ಒಂದು ಉಪ ವಿಭಾಗ (ಗೋರಾಷ್ಟ್ರ ದೇಶ ಅಥವಾ ಕೊಂಕಣದೇಶ ಎಂಬ ಭೂಭಾಗದಲ್ಲಿ ವಾಸಿಸುವವರೆಲ್ಲರೂ ಕೊಂಕಣಿಗರೆನ್ನಿಸಿಕೊಳ್ಳುವುದಿಲ್ಲ. ಕಾರಣವೇನೆಂದರೆ ಈ ಭೂಭಾಗದಲ್ಲಿ ಮರಾಠಿ, ಕೊಂಕಣಿ, ಕನ್ನಡ, ತುಳು ಎಂಬ ನಾಲ್ಕು ಭಾಷೆಗಳು ಬಳಕೆಯಲ್ಲಿರುವುದಾಗಿದೆ. 'ಕೊಂಕಣಿಗ' ಎಂಬ ಶಬ್ದವು 'ಕೊಂಕಣ' ಎಂಬುದಕ್ಕೆ 'ಇಗ' ಪ್ರತ್ಯಯವು ಸೇರಿ ಉಂಟಾದುದಲ್ಲವಾದುದರಿಂದ ಕೊಂಕಣ ದೇಶವಾಸಿಯೆಂಬರ್ಥವನ್ನು ಕೊಡುವುದಿಲ್ಲ. ಕೊಂಕಣಿ ಎಂಬ ಭಾಷಾನಾಮಕ್ಕೆ 'ಇಗ' ಪ್ರತ್ಯಯವು ಸೇರಿ 'ಕೊಂಕಣಿಗ' ಎಂಬ ರೂಪವು ಸಿದ್ಧವಾಗುತ್ತದೆ. ತಾತ್ಪರ್ಯವೇನೆಂದರೆ 'ಕೊಂಕಣಿಗ' ಎಂಬುದು 'ಕೊಂಕಣಿಯೇ ಮಾತೃಭಾಷೆಯಾಗುಳ್ಳವನು' ಎಂಬರ್ಥವನ್ನು ಮಾತ್ರ ಕೊಡುವಂತ ಹದಾಗಿದೆ. ಪೂರ್ವಕಾಲದಲ್ಲಿ ಈ ಭಾಷೆಯು ಕೊಂಕಣ ದೇಶದಲ್ಲಿ ಮಾತ್ರ ಪ್ರಚಲಿತವಾಗಿದ್ದುದರಿಂದ ಇದಕ್ಕೆ 'ಕೊಂಕಣಿ' ಎಂಬ ಹೆಸರು ಬಂದುದಾಗಿದೆ.)

---

೧೯೯೨. 'ವಿಚಾರ ಪ್ರಪಂಚ' - ಶ್ರೀ ಸೇಡಿಯಾಪು ಕೃಷ್ಣ ಭಟ್ಟರ ಲೇಖನಸಂಗ್ರಹ (ಸಂ. ಪಾದೇಕಲ್ಲು ವಿಷ್ಣು ಭಟ್ಟ)ದಲ್ಲಿರುವ 'ಶ್ರೀ ಗೌರೀಶ ಕಾಯ್ಕಿಣಿಯವರ ಜಿಜ್ಞಾಸೆ (ಮೀಮಾಂಸೆ?)ಗೆ ಪ್ರತಿಕ್ರಿಯೆ' ಲೇಖನದ ಆಯ್ದ ಭಾಗ.

# ಕೊಂಕಣಿ – ಒಂದು ಮೇಲ್ನೋಟ

- ಡಾ। ಒಲಿವಿನ್ಹೊ ಗೋಮ್ಸ್, ಪಿಎಚ್.ಡಿ.
ಭಾಷಾಂತರ : ಡಾ। ಕೆ. ಪದ್ಮನಾಭ ಕೇಕುಣ್ಣಾಯ.

---

## ಭಾಗ : ಒಂದು

'ಕೊಂಕಣಿ' ಭಾಷೆ ತನ್ನ ಹೆಸರನ್ನು ಪಡೆದುದು 'ಕೊಂಕಣ' ಎನ್ನುವ ಶಬ್ದದಿಂದ. ಭಾರತದ ಪಶ್ಚಿಮ ಕರಾವಳಿಯಲ್ಲಿ ಉತ್ತರದಲ್ಲಿ ಥಾಣೆ (ಮಹಾರಾಷ್ಟ್ರ) ಯಿಂದ ದಕ್ಷಿಣದಲ್ಲಿ ಹೊಸದುರ್ಗ (ಕರ್ಣಾಟಕ) ದವರೆಗೆ ಚಾಚಿಕೊಂಡಿರುವ, ಕಿರಿದಗಲದ ಭೂಪ್ರದೇಶಕ್ಕೆ ಅನಾದಿಕಾಲದಿಂದಲೂ 'ಕೊಂಕಣ' ಎನ್ನುವ ಹೆಸರಿದೆ. 'ಕೊಂಕ'ರ ನೆಲೆವೀಡು' ಎನ್ನುವ ಅರ್ಥವನ್ನು ಕೊಡುವ 'ಕೊಂಡ್ಕನ್' ಅಥವಾ 'ಕೊಂಗ್ವನ್' ಎಂಬುದರಿಂದ 'ಕೊಂಕಣ' ಎನ್ನುವ ಹೆಸರು ಬಂತು. 'ಕೊಂಕ' ಎಂಬುದು ಪ್ರಾಚೀನ ಕಾಲದಿಂದಲೂ ಈ ಪ್ರದೇಶದಲ್ಲಿ ವಾಸಿಸುತ್ತಿದ್ದ ಮೂಲ ನಿವಾಸಿ ಜನವರ್ಗವೊಂದರ ಹೆಸರು. ಇವರ ವಂಶಜರೇ ಈಗಿನ 'ಗೌಡಿಗಳು' ಅಥವಾ 'ಕುಣ್ಬಿಗಳು' ಎಂದು ಕರೆಯಲ್ಪಡುವ ಗೋವಾದ ಮೂಲನಿವಾಸಿಗಳು ಮತ್ತು ಮಹಾರಾಷ್ಟ್ರದ ಖಾನ್‌ದೇಶ ಪ್ರದೇಶ (ಧುಲೆ ಮತ್ತು ಜಲಗಾಂವ್)ದ ಅಲೆ ಮಾರಿಗಳಾದ 'ಕುಂಕುನ' ಎನ್ನುವ ಜನರು. ಇವರು ಬಿಹಾರದ ಛೋಟಾನಾಗಪುರ ತಪ್ಪಲು ಪ್ರದೇಶದಲ್ಲಿ ವಾಸಿಸುವ 'ಮುಂಡ' ಎನ್ನುವ ಜನ ಸಮುದಾಯಕ್ಕೆ ತೀರ ಹತ್ತಿರ ಸಂಬಂಧವುಳ್ಳವರು. ಕೊಂಕರ ಮತ್ತು ಕೊಂಡ್ಕನ್ ಅಥವಾ ಕೊಂಗ್ವನ್ ಎಂದು ಕರೆಯಲ್ಪಡುವ ಅವರ ನೆಲೆವೀಡಿನ ಕುರಿತಾಗಿ ಪ್ರಾಚೀನ ಭಾರತೀಯ ಸಾಹಿತ್ಯದಲ್ಲಿ ಮುಖ್ಯವಾಗಿ ಸಂಸ್ಕೃತದ 'ಬೃಹತ್ಸಂಹಿತಾ' ಮತ್ತು ತಮಿಳಿನ 'ಸಂಗಮ್' ಸಾಹಿತ್ಯದಲ್ಲಿ ಉಲ್ಲೇಖವಿದೆ.

ದಕ್ಷಿಣ ಏಷ್ಯಾದ ಮೂಲ ನಿವಾಸಿಗಳಾದ ಜನರು ಆಡಿಕೊಳ್ಳುತ್ತಿದ್ದ ಪ್ರಧಾನವಾದ ಮತ್ತು ವ್ಯವಸ್ಥಿತವಾದ ಭಾಷೆ ಇಂದು 'ಮುಂಡಾರಿ' ಎಂದು ಕರೆಯಲ್ಪಡುತ್ತದೆ. ಅಂದರೆ 'ಮುಂಡ'ರ ಭಾಷೆ ಎಂದರ್ಥ. ಮಿಶನರಿ ವಿದ್ವಾಂಸ ರಾದ ರೆವ. ಹಾಫ್‌ಮನ್ ಎಂಬವರು ಈ ಭಾಷೆಯಲ್ಲಿ – 'ಸ'ಕಾರದವರೆಗೆ – ಒಂದು ವಿಶ್ವಕೋಶವನ್ನು ಸಂಪಾದಿಸಿ ಪ್ರಕಟಿಸಿದ್ದರು. ಈ ವಿಶ್ವಕೋಶವನ್ನು

ಪರಿಶೀಲಿಸಿದಾಗ ಮುಂಡಾರಿ ಮತ್ತು ಕೊಂಕಣಿ ಭಾಷೆಗಳೊಳಗೆ ಶಬ್ದಸಂಪತ್ತು, ಅರ್ಥಗಳೊಳಗಿರುವ ಸೂಕ್ಷ್ಮ ವ್ಯತ್ಯಾಸ, ಉಚ್ಚಾರಣ ವೈವಿಧ್ಯ, ವಿಭಕ್ತಿಪ್ರತ್ಯಯಗಳ ನಡುವಿನ ವ್ಯತ್ಯಾಸ ಮೊದಲಾದ ನೆಲೆಗಳಲ್ಲಿ ಬಹಳ ಆಶ್ಚರ್ಯಕರವಾದ ಸಾಮ್ಯವಿದೆಯೆನ್ನುವುದು ಗೊತ್ತಾಗುತ್ತದೆ.

ಕೊಂಕರ ಈ ಮೂಲ ವಾಕ್ಸಂಪತ್ತಿಯ ಅಡಿಗಲ್ಲಿನ ಮೇಲೆ ಈ ಪ್ರದೇಶಕ್ಕೆ ಅನಂತರ ಬಂದ ವಲಸೆಗಾರರಿಂದಾಗಿ ದ್ರಾವಿಡಭಾಷೆಗಳ ಪದರಗಳು ಸೇರಿ ಕೊಂಡವು. ಆಧುನಿಕ ಸಂಶೋಧನೆಗಳು ತಿಳಿಸುವಂತೆ ಕೆಲವು ಸಮಯದ ಬಳಿಕ ಸುಮೇರಿಯದ ವಲಸೆಗಾರರು ಈ ಭಾಷೆಯ ಶಬ್ದಸಂಪತ್ತಿ, ವಾಕ್ಸಂಪತ್ತಿ ಹಾಗೂ ಜೀವನವಿಧಾನಗಳಲ್ಲಿ ಅವರದೇ ಆದ ಭಾಪನ್ನು ಒತ್ತಿದರು. ಮೌರ್ಯರ ವಿಸ್ತೃತವಾದ ರಾಜ್ಯಭಾರದ ಸಮಯದಲ್ಲಿ ಅರ್ಧಮಾಗಧಿ 'ಅಪಭ್ರಂಶ'ದ (ಭೌಗೋಳಿಕ ಉಪಭಾಷೆ) ಪ್ರಾಕೃತವು ಈ ಪ್ರದೇಶದಲ್ಲಿ ಅಡ್ಡಾಡಿತು. ಆ ಬಳಿಕ ಉತ್ತರದಿಂದ ಬಹುಸಂಖ್ಯೆಯಲ್ಲಿ ಮುಖ್ಯವಾಗಿ ಸಾರಸ್ವತರು (ಬ್ರಾಹ್ಮಣರು) ಮತ್ತು ಭಡರು (ಕ್ಷತ್ರಿಯರು) ಅವರ ಕೆಲಸಗಾರರೊಂದಿಗೆ (ಸುದಿರ್), ಹಾಗೂ ಕೆಲವು ವ್ಯಾಪಾರಿ (ವೈಶ್ಯರು)ಗಳೊಂದಿಗೆ ಸೇರಿಕೊಂಡು ಕ್ರಿಸ್ತಶಕದ ಆರಂಭ ಕಾಲದಲ್ಲಿ ವಲಸೆ ಬಂದರು. ಈ ಕೊನೆಗೆ ಉಲ್ಲೇಖಿಸಲಾದ ವಲಸೆಗಾರರಲ್ಲಿ ಮೊದಲು ಬಂದವರು ಮುಖ್ಯವಾಗಿ ಪೂರ್ವ ಪಂಜಾಬದವರು; ಅನಂತರ ಮುಸ್ಲಿಮರ ದಾಳಿಯ ವೇಳೆ ಬಂಗಾಳದಿಂದ ಹಾಗೂ ಕೊನೆಯದಾಗಿ ರಜಪೂತರು ರಾಜಸ್ಥಾನದಿಂದ ಬಂದರು.

ಈ ವಲಸೆಗಾರರು ದಕ್ಷಿಣಕ್ಕೆ ಬರುತ್ತಿದ್ದಂತೆ ಅವರ ಮೂಲಭಾಷೆಯಾದ ಉತ್ತರ ಭಾರತದ ಭಾಷೆಗಳನ್ನಾಡುತ್ತಿದ್ದರೂ ಅನಂತರ ಪಶ್ಚಿಮ ಭಾರತದಲ್ಲಿ ಆಡುತ್ತಿದ್ದ ಪ್ರಾಕೃತ ಅದರಲ್ಲೂ 'ಪ್ರಾಚೀನ ಭಾರತದ ಪದ್ಯಭಾಷೆ' ಎಂದು ಕರೆಯಲ್ಪಡುತ್ತಿದ್ದ ಉತ್ತರದ ಮಹಾರಾಷ್ಟ್ರೀ ಪ್ರಾಕೃತವನ್ನು ತಮ್ಮ ಭಾಷೆಯೊಂದಿಗೆ ಸಮೀಕರಿಸಿಕೊಂಡರು. ಸುಮಾರು ಎಂಟನೇ ಶತಮಾನದ ವೇಳೆಗಾಗಲೇ ಗೋವದ ಈಗಿನವರ ಪೂರ್ವಜರಾಗಿದ್ದ ಮೂಲನಿವಾಸಿಗಳನ್ನು ನೆಲೆತಪ್ಪಿಸಿ ತಾವು ಭದ್ರವಾಗಿ ತಳವೂರಿದರು. ಅಲ್ಲದೆ ಸಿಕ್ಕಿದ ಉತ್ತಮವಾದ ಜಮೀನನ್ನು ತಮ್ಮತಮ್ಮೊಳಗೇ, ಮುಖ್ಯವಾಗಿ ಪ್ರಬಲರಾಗಿದ್ದ ಸಾರಸ್ವತರು ಹಾಗೂ ಭಡರು ಹಂಚಿಕೊಂಡರು. ಮತ್ತು ಇತರ ಜನವರ್ಗದವರಿಗೆ ಕಡಮೆ ಜಮೀನು ಕೊಟ್ಟರು ಅಥವಾ ಅವರೊಂದಿಗೆ ಜೊತೆಯಾಗಿ ಅಧೀನಪಡಿಸಿಕೊಂಡರು. ಅವರು ಸ್ಥಳೀಯ ಜನರೊಂದಿಗೆ ಬೆರೆತು ವರ್ಣಸಂಕರಕ್ಕೂ ಕಾರಣರಾದುದಲ್ಲದೆ ಹೊಸ ನೆಲೆವೀಡಿನಲ್ಲಿ ಪ್ರಚುರವಾಗಿದ್ದ ಆಡುಮಾತಿನೊಂದಿಗೆ ತಮ್ಮ ಭಾಷೆಯನ್ನು ಮಿಶ್ರಗೊಳಿಸಿದರೆನ್ನಲಾಗುತ್ತದೆ. ಭಾಷೆಯ ಮೂಸೆಯಲ್ಲಿ ಅವರ ಪ್ರಾಕೃತ ಮತ್ತು ಕೊಂಕರ ಆಡುನುಡಿ ಬೆರೆತು ಒಂದಾಗಿ ಪ್ರಾಯಃ ಸುಮಾರು ಎರಡು

ಶತಮಾನಗಳ ಅನಂತರ ಬಹುವಾಗಿ ಇಂಡೋ-ಆರ್ಯ ಭಾಷಾ ಸ್ವರೂಪವನ್ನು ಹೊಂದಿದ, ಸೃಜನಾತ್ಮಕ ಅಭಿವ್ಯಕ್ತಿಯ ಮಾಧ್ಯಮವಾಗಿ "ಕೊಂಕಣಿ" ಎನ್ನುವ ಒಂದು ಸಂಮಿಶ್ರಭಾಷೆಯು ಸೃಷ್ಟಿಯಾಯ್ತು. ಇದಕ್ಕೆ ಸಂಸ್ಕೃತದ ಎಷ್ಟು ಪ್ರಬಲವಾದ ಒಂದು ಮೂಲಾಧಾರ ಮತ್ತು ವ್ಯಾಕರಣ ಸ್ವರೂಪ ಇತ್ತೆಂದರೆ ಈ ಸಂಮಿಶ್ರಭಾಷೆಯು 'ಸಂಸ್ಕೃತದ ಚೊಚ್ಚಲ ಮಗಳು' ಎಂದೇ ಕರೆಯಲ್ಪಟ್ಟಿತು.

ಉತ್ತರ ಮತ್ತು ದಕ್ಷಿಣ ಭಾರತದ ಭಾಷಾಸಮೂಹಗಳೊಳಗೆ ಒಂದು ಬಾಂಧವ್ಯವನ್ನು ಹೊಸೆದಂತಿರುವ ಉತ್ತರ ಭಾರತದ ಭಾಷಾಪರಿವಾರದ ಅತ್ಯಂತ ದಕ್ಷಿಣದ ಶಾಖೆಯಾಗಿರುವ ಇದನ್ನು ಪ್ರಖ್ಯಾತ ಭಾಷಾವಿಜ್ಞಾನಿಯೂ ಬಹು ಭಾಷಾವಿದ್ವಾಂಸರೂ ಆದ ಡಾ। ಜೋಸ್ ಪಿರೇರಾ ಅವರು 'ಆಧುನಿಕ ಇಂಡೋ -ಆರ್ಯ ಭಾಷೆಗಳಲ್ಲಿ ಅತ್ಯಂತ ಪ್ರಾಚೀನವಾದುದು' ಎಂದು ಅಧಿಕಾರವಾಣಿ ಯಿಂದ ಹೆಸರಿಸುತ್ತಾರೆ. ಆದರೆ, ದುರದೃಷ್ಟವಶಾತ್, ಇದು ಹುಟ್ಟಿದಂದಿನಿಂದಲೂ ಬಹುಶಃ ಇದನ್ನು ಆಡುವವರ ಸಂಖ್ಯಾಬಾಹುಳ್ಯದ ಹಾಗೂ ಜಿಗುಟಾದ ಸಮಾಜ ಭಾವನೆಯ ಕೊರತೆಯಿಂದ ಮತ್ತು ಭಾಷೆಯ ಬಗೆಗಿನ ಪಕ್ಷಪಾತ ಧೋರಣೆಯ ಅಭಾವದಿಂದ ಇದರ ಹುಟ್ಟನಾಡಿನಲ್ಲೇ ಇದಕ್ಕೆ ಮನ್ನಣೆಯಾಗಲಿ ಆಧಿಪತ್ಯವಾಗಲಿ ಆ ಕಾಲದಲ್ಲಿ ನಿರಾಕರಿಸಲ್ಪಟ್ಟಿತು. ಸಾಲದುದಕ್ಕೆ, ಇದರ ನೆರೆಯ ಪ್ರಬಲ ಭಾಷೆಗಳಾದ ಕನ್ನಡ ಮತ್ತು ಮರಾಠಿಭಾಷೆಗಳು ಕೊಂಕಣಿಯ ಅಧಿಕೃತ ಹಾಗೂ ಧಾರ್ಮಿಕ ಸ್ಥಾನಮಾನವನ್ನು ಕಸಿದುಕೊಂಡವು. ಇದಕ್ಕೆ ಕೊಂಕಣಿಯ ಹುಟ್ಟುನಾಡನ್ನು ತಮ್ಮ ಆಳ್ವಿಕೆಗೊಳಪಡಿಸಿಕೊಂಡ ಆಗಿನ ರಾಜರ ಮತ್ತು ಪಾಳೆಯಗಾರರ ಬೆಂಬಲವೂ ಇದ್ದಿತು.

ಯಾದವರಂತೆ, ಕನ್ನಡ ಆಡಳಿತಗಾರರು ಕೊಂಕಣವನ್ನು ಹಲವಾರು ವರ್ಷಗಳ ತನಕ ತಮ್ಮ ಅಂಕೆಯಲ್ಲಿಟ್ಟುಕೊಂಡಿದ್ದರಲ್ಲದೆ ಆ ಭಾಗದಲ್ಲಿ ಮರಾಠಿ ಯನ್ನು ಬಳಸುತ್ತಿದ್ದರು. ಅನಂತರ ಇವರನ್ನು ಸೋಲಿಸಿದ ಮುಸ್ಲಿಂ ಬಹಮನಿಗಳು ಕೂಡ ಮರಾಠಿಗೆ ಅದರ ಅಧಿಕೃತ ಸ್ಥಾನಮಾನ ಮುಂದುವರಿಯುವುದಕ್ಕೆ ಸಹಾಯಕರಾದುದರಿಂದ ಬಿಜಾಪುರದ ಸುಲ್ತಾನರ ಕಾಲದಲ್ಲೂ ಮರಾಠಿಯೇ ಅಧಿಕೃತ ಸ್ಥಾನಮಾನವನ್ನನುಭವಿಸಿತು. ವಿಜಯನಗರ ರಾಜರು ತಮ್ಮ ಆಡಳಿತದ ಉನ್ನತ ಹುದ್ದೆಗಳಿಗೆ ಗೋವದ ಬ್ರಾಹ್ಮಣರನ್ನು ಆಹ್ವಾನಿಸಿದ್ದರಿಂದ, ಹೊಸ ಫಲದ ಆಮಿಷಕ್ಕೆ ಬಲಿಯಾಗಿ, ಅವರು ದೇವಸ್ಥಾನಗಳನ್ನು ತೊರೆದುಹೋದರು. ತತ್ಫಲವಾಗಿ ಅವು ಹೊಸದಾಗಿ ಬರಿಸಲ್ಪಟ್ಟ ಮರಾಠಿ ಬ್ರಾಹ್ಮಣರ ವಶ ವಾದುವಲ್ಲದೆ ಅವರು ಖಾಲಿ ಬಿದ್ದ ಹುದ್ದೆಗಳಿಗೆ ತಮ್ಮವರನ್ನೇ ನೇಮಿಸಿ ಕೊಂಡರು ಮತ್ತು ಈ ಕಾರ್ಯಾಚರಣೆಯಿಂದಾಗಿ ಗೋವದ ಹಿಂದುತ್ವದ ಮೇಲೆ ತಮ್ಮದೇ ಆದ ದೇಶೀಯ ಭಾಷಾಪ್ರಭುತ್ವವನ್ನುಂಟುಮಾಡಿದರಲ್ಲದೆ ಅದು ಅವರ ಪವಿತ್ರ ಆಡುನುಡಿಯಾಯಿತು ಮತ್ತು ತಮ್ಮ ಸಹಸದಸ್ಯರು ಕ್ರೈಸ್ತಮತಕ್ಕೆ

ಪರಿವರ್ತನೆಗೊಳ್ಳುವ ಎಚ್ಚರದಲ್ಲಿ ಪ್ರಜ್ಞಾಪೂರ್ವಕವಾಗಿ ಅದನ್ನು ಜಡ್ಡುಗಟ್ಟಿಸಿದರು. ಇದರ ಅನರ್ಥಕಾರಕ ಪರಿಣಾಮವೆಂದರೆ ಕೊಂಕಣಿಯು ಅದರ ಪವಿತ್ರ ಪರಿಸರದ ನ್ಯಾಯೋಚಿತ ಸ್ಥಾನದಿಂದ ಹಿಂತೆಗೆಯಲ್ಪಟ್ಟು ಪಾಳುನೆಲಕ್ಕಟ್ಟಲ್ಪಟ್ಟಿತು.

ಪುರೋಹಿತವರ್ಗ ಮತ್ತು ಅಧಿಕಾರೀವರ್ಗವು, ಲಾಭದಾಯಕ ಗೋಮಾಳ ವನ್ನು ಬೆಂಬತ್ತಿಹೋಗಲು, ಕೊಂಕಣಿಯನ್ನು ತೊರೆದರೂ, ತನ್ನ ಇತಿಹಾಸದ ವಿಪರ್ಯಯದಾದ್ಯಂತ ಕೊಂಕಣಿ ಸಮಾಜವು ಪರಕೀಯ ಪ್ರಭುತ್ವಕ್ಕೊಳಪಟ್ಟು ವ್ಯಥಿತವಾಗಿದ್ದರೂ ಜನಸಮೂಹವು ಅದನ್ನು ಪ್ರೀತಿಯಿಂದ ಪಾಲಿಸಿಪೋಷಿಸಿತು. ಅದರ ಆಂತರ್ಯವನ್ನಾಳುತ್ತಿದ್ದ ಇಂಚರವು ಪ್ರಜ್ವಲಿಸಿ ಕಾವ್ಯವಾಗಿ ಹೊರಹೊಮ್ಮಿ ಜನರ ಉಚ್ಚರಿಸುವ ಓಷ್ಠಾಧರಗಳಲ್ಲಿ ಹೂವಾಗಿ ಅರಳಿ ಆ ಭಾಷೆಯನ್ನು ಜೀವಂತವಾಗಿ ಮತ್ತು ಚೇತನಾತ್ಮಕವಾಗಿರಿಸಿತು. ಆಧುನಿಕ ಇಂಡೋ–ಆರ್ಯ ಭಾಷೆಗಳು ಸಂಸ್ಕೃತದ ಕಠಿನತರವಾದ ಸೈದ್ಧಾಂತಿಕ ಸಂಕೋಲೆಯನ್ನು ಅಲುಗಿಸಿ ತಮ್ಮದೇ ಆದ ಸ್ವತಂತ್ರ ಸಾಹಿತ್ಯಮಾರ್ಗವನ್ನು ಕಂಡುಕೊಳ್ಳುವ ಕಾರ್ಯದಲ್ಲಿ ಮಗ್ನವಾಗಿದ್ದಾಗ – ಮರಾಠಿಯೂ ಅಂಥವುಗಳಲ್ಲಿ ಒಂದು – ಕೊಂಕಣಿಯು ಅಂತಹ ಒಂದು ಪ್ರಯತ್ನವನ್ನು ಸಫಲವಾಗಿ ಕೈಕೊಳ್ಳಲು ಸಮರ್ಥವಾಗಿರಲಿಲ್ಲ. ಯಾಕೆಂದರೆ ಮರಾಠಿಯು, ತನಗಿದ್ದ ಅಧಿಕಾರದ ಬೆಂಬಲದಲ್ಲಿ, ಡಾ। ಪಿರೇರಾ ಪ್ರತಿಪಾದಿಸುವಂತೆ 'ತನ್ನ ಹಳೆಯ ಸೋದರಿ ಕೊಂಕಣಿಯನ್ನು ದಬ್ಬಾಳಿಕೆಯ ಅಂಕೆಯಲ್ಲಿಟ್ಟುಕೊಳ್ಳಲು' ತನ್ನದೇ ಆದ ವಿಮೋಚನೆಯನ್ನು ಉಪಯೋಗಿಸಿತು. ಕೊಂಕಣಿಯ ಪ್ರಬಲವಾದ ಅಂತಸ್ಸತ್ವ ಮತ್ತು ಸ್ಥಿತಿಸ್ಥಾಪಕಶಕ್ತಿ ಮಾತ್ರ ಅದು ಇಂತಹ ವಿಷಮತೆಗಳ ವಿರುದ್ಧ ಬದುಕಿರಲು ಮತ್ತು ತನ್ನ ಬೆಳವಣಿಗೆಯನ್ನು ಹೇಗಾದರೂ ಕಾಪಾಡಿಕೊಳ್ಳಲು ಅನುಕೂಲ ಒದಗಿಸಿತು.

**ಲಿಖಿತ ಕೊಂಕಣಿಯ ಮೊದಲ ಗುರುತುಗಳು :**

ಕನ್ನಡ ಅರಸರು ಕೊಂಕಣಿಯ ತಾಯ್ನಾಡನ್ನು ಆಳಿದಾಗ, ಕೊಂಕಣಿ ಭಾಷೆ ಕ್ರಿ.ಶ. ಸುಮಾರು 11ನೇ ಶತಮಾನದ ವೇಳೆಗೆ ತನ್ನ ಚೇತನ ಶಕ್ತಿಯಿಂದ ಸರ್ವಾಂಗಪರಿಪೂರ್ಣವಾಗಿ ಬೆಳೆಯಿತು. ಈ ಶತಮಾನದ ಅರುಣೋದಯ ಕಾಲದಲ್ಲಿ ಮೊತ್ತಮೊದಲಿಗೆ, ಕನ್ನಡಿಗರು – ಬಹುಶಃ ಕನ್ನಡ ಅರಸರಾದ ಚಾವುಂಡರಾಯ ಮತ್ತು ಗಂಗರಾಜರ ಶ್ರವಣಬೆಳಗೊಳದ ಬೃಹತ್ ಬಾಹುಬಲಿ ಮೂರ್ತಿಯ ಅಥವಾ ಗೊಮ್ಮಟೇಶ್ವರನ (ಕ್ರಿ.ಶ. 1116-17) ಸಾನ್ನಿಧ್ಯದಲ್ಲಿ ರುವಂತಹ ಹಾಗೂ ಇತರ ತಮ್ಮ ಶಾಸನಗಳಲ್ಲಿ – ಕೊಂಕಣಿಯ ಇಂತಹ ಬೆಳವಣಿಗೆಯನ್ನು ಗುರುತಿಸಿದರೆಂದು ಕಂಡುಬರುತ್ತದೆ. ಅಲ್ಲಿ 'ಕರವಿಯಲೆಮ್' (ಮಾಡಿಸಿದ) ಎನ್ನುವ ಶಬ್ದ/ಪದಪುಂಜವು ಮೊದಲು ಹಳೆಯ ಮರಾಠಿಯೆಂದು ನಂಬಲಾಗಿದ್ದರೂ ಬಳಿಕ, ಅದು ಹಾಗಲ್ಲ, ಆಧುನಿಕ ಕೊಂಕಣಿಗರಲ್ಲಿ

ಬಳಕೆಯಲ್ಲಿರುವ ವಿಶಿಷ್ಟವಾದ ಕೊಂಕಣಿ ಪ್ರೇರಣಾರ್ಥಕ ಪ್ರತ್ಯಯವಾದ 'ಯ' ಎನ್ನುವುದರಿಂದ ಅದು ಅಧಿಕೃತವಾಗಿ ಕೊಂಕಣಿಯದ್ದೆಂದು ಸಾಧಿತವಾಗಿದೆ. ಆಗಿನ ಕಾಲದಲ್ಲಿದ್ದ ಕೊಂಕಣಿಯ ಬಳಕೆಗೆ ಇನ್ನೊಂದು ರಾಜವಂಶದ ಸಾಕ್ಷಿಯೆಂದರೆ ಭಾರತೀಯ ಭಾಷೆಗಳಲ್ಲಿದ್ದ ಜನಪದ ಸಾಹಿತ್ಯ ಹಾಗೂ ಹಾಡುಗಳ ಒಬ್ಬ ಅಭ್ಯಾಸಿಯಾಗಿದ್ದ ಚಾಲುಕ್ಯ ರಾಜ ಮುಮ್ಮಡಿ ಸೋಮೇಶ್ವರ. ಅದೇ ಶತಮಾನ ದಲ್ಲಿ ಅವನು ತನ್ನ 'ಮಾನಸೋಲ್ಲಾಸ'ದಲ್ಲಿ ಉಲ್ಲೇಖಿಸಿದ ಒಂದು ದ್ವಿಪದಿಯಲ್ಲಿ ಹೇಳಿದುದು ಮಹಾರಾಷ್ಟ್ರೀ ಪ್ರಾಕೃತವನ್ನು. ಆದರೆ ಆ ಪದ್ಯದ ಮೊದಲ ಚರಣದಲ್ಲಿರುವ 'ಕ' ಎನ್ನುವ ಚತುರ್ಥೀಪ್ರತ್ಯಯವು ನಿಜಾಂಶವನ್ನು ಹೊರ ಗೆಡಹುತ್ತದೆ, ಡಾ। ಪಿರೇರಾ ಪ್ರತಿಪಾದಿಸುವಂತೆ, ಅದು ಮಹಾರಾಷ್ಟ್ರಿಯಿಂದ ಮೊದಲು ಹುಟ್ಟಿದ ಕೊಂಕಣಿಯಲ್ಲಿರುವಂತಹದು (ಎರಡನೆಯದಾಗಿ ಹುಟ್ಟಿದ್ದು ಮರಾಠಿ.)

ಮೊದಲಿನಿಂದಲೂ ಮರಾಠಿಯು ತನ್ನ ಹಿರಿಯಕ್ಕ, ಅದಕ್ಕಿಂತ ಹೆಚ್ಚಾಗಿ ನತದೃಷ್ಟೆ ಕೊಂಕಣಿಯ ಮೇಲೆ ಅಧಿಕಾರ ಚಲಾಯಿಸಲು ಮತ್ತು ಅದರ ಬೆಳ ವಣಿಗೆಯನ್ನು ಕುಂಠಿತಗೊಳಿಸಲು ಶತಪ್ರಯತ್ನ ಮಾಡುತ್ತಾ ಇತ್ತು. ಇಂತಹ ಕೃತ್ಯವು ಅಲ್ಲಿಯ ಆಳ್ವಿಕೆಯವರಿಂದ ಪ್ರೋತ್ಸಾಹಿಸಲ್ಪಡುತ್ತಿದ್ದ ಕಾರಣ, ಈ ಕಾಲ ಘಟ್ಟದಲ್ಲಿ ರಚಿತವಾದ ಕೊಂಕಣದ ಶಾಸನಗಳಲ್ಲಿ ಹೆಚ್ಚಿನವು ಮರಾಠಿಯಲ್ಲಿರು ವುದು ಕಂಡುಬರುತ್ತದೆ. ಇವುಗಳ ನಡುವೆ ಕೊಂಕಣಿವಾದವು ಚಿಗುರುತ್ತಿತ್ತು. ಕ್ರಿ.ಶ. 1348ರ ವೆರಮ್ ಶಾಸನ ಈ ಘಟನೆಯ ಒಂದು ಸಂಗತಿ. ಅಲ್ಲಿಂದ ಮುಂದೆ ಕೊಂಕಣದ ಬರೆಹಗಾರರಿಂದ ರಚಿತವಾದ ಮರಾಠಿಯಲ್ಲಿರುವ ಗ್ರಂಥಪಾಠಗಳು ಮರಾಠಿಯ ಉನ್ನತ ಪ್ರದೇಶದ್ದಕ್ಕಿಂತ ಭಿನ್ನವಾಗಿ ತಗ್ಗು ಪ್ರದೇಶದ ಅರ್ಥಾತ್ ಕೊಂಕಣದ ಸುಶ್ರಾವ್ಯವಾದ ಆಡುನುಡಿಯಲ್ಲಿ ರಚಿತವಾದ ಪದಪುಂಜ, ಶಬ್ದ ಗಳನ್ನು ಭದ್ರವಾಗಿ ಸೇರಿಸಿಕೊಂಡಿರುವುದು ಕಂಡುಬರುತ್ತದೆ.

**ಕೊಂಕಣಿಯಲ್ಲಿ ಉಪಲಬ್ಧವಾಗಿರುವ ಪ್ರಥಮ ಪದ್ಯ :**

ಆದರೆ ಆ ಆರಂಭಕಾಲಮಾನದಲ್ಲಿ ಅಸ್ತಿತ್ವದಲ್ಲಿದ್ದ ಕೆಲವು ಕೊಂಕಣಿ ಗೀತೆಗಳ ಬಗ್ಗೆ ಅತ್ಯಂತ ಮಹತ್ತರವಾದ ಪುರಾವೆಯು ಮರಾಠಿಗರಿಂದಲೇ ಒದಗಿ ಸಲ್ಪಟ್ಟಿದೆ. ಅದು ಅತ್ಯಂತ ಪ್ರಸಿದ್ಧರ ಬರೆಹಗಳಿಂದ, ಮುಖ್ಯವಾಗಿ ಹದಿನಾಲ್ಕನೇ ಶತಮಾನದ ಮೊದಲ ಭಾಗದಲ್ಲಿ ಪ್ರವರ್ಧಮಾನಕ್ಕೆ ಬಂದ ಸಂತ-ಕವಿ ಸಂತ ನಾಮದೇವನ ಬರೆಹಗಳಿಂದ ಬಂದಿದೆ. ಆ ಭಕ್ತ ಕವಿಯು, ಐವರು ಗೋಪಿಕಾ ಸ್ತ್ರೀಯರು ಸರೋವರವೊಂದರಲ್ಲಿ ಸ್ನಾನ ಮಾಡುತ್ತಿದ್ದಾಗ ಶ್ರೀಕೃಷ್ಣನು ಅವರ ವಸ್ತ್ರಗಳನ್ನು ಅಪಹರಿಸಿದ ಸನ್ನಿವೇಶವನ್ನು ವಿವರಿಸುತ್ತಾ, ಆ ಐವರಲ್ಲಿ ಒಬ್ಬಾಕೆ ಕೊಂಕಣಿ ಮಾತನ್ನಾಡುತ್ತಿದ್ದ ಹುಡುಗಿ ಮತ್ತು ಇತರರು ಮರಾಠಿ ಮತ್ತಿತರ

ಭಾಷೆಗಳನ್ನಾಡುತ್ತಿದ್ದವರು ಎನ್ನುತ್ತಾನೆ. ಆ ಬಟ್ಟೆಗಳಿಲ್ಲದೆ ಅವರು ಚಳಿಯಿಂದ ನಡುಗುತ್ತಿದ್ದುದರಿಂದ ಅವುಗಳನ್ನು ಮರಳಿಸಬೇಕೆಂದು ಅವರು ಆ ತುಂಟ ದೇವನಲ್ಲಿ ದೈನ್ಯದಿಂದ ಪ್ರಾರ್ಥಿಸುತ್ತಿದ್ದರು. ಕವಿಯು ಕೊಂಕಣಿ ಹುಡುಗಿಯ ಬಾಯಿಯಿಂದ ಕೊಂಕಣಿಯಲ್ಲಿ ಒಂದು ಸುಂದರವಾದ ಪದ್ಯ ಬರುವಂತೆ ರಚಿಸುತ್ತಾನೆ. ಎಲ್ಲವನ್ನೂ ಕೊಡುವ ಆ ದೇವನಲ್ಲಿ, ತನ್ನ ವಸ್ತ್ರಗಳನ್ನು ಮರಳಿಸುವಂತೆ ತನ್ನ ದೀನಾವಸ್ಥೆಯನ್ನು ಬಹಳ ಮಾರ್ಮಿಕವಾದ ಭಾಷೆಯಿಂದ ಶ್ರದ್ಧಾಪೂರ್ವಕವಾಗಿ ಆಕೆ ಬೇಡಿಕೊಳ್ಳುತ್ತಾಳೆ. ಈ ಭಾಷೆಯೇ ವಿಶಿಷ್ಟವಾದ ಕೊಂಕಣಿ.

ಈ ಕಾಲದ ಕೊಂಕಣಿ ಕವಿಗಳು ಸಹಜವಾಗಿ ಮರಾಠ ಸಂತಕವಿಗಳ ಸರಳ ವಸ್ತುವನ್ನೊಳಗೊಂಡ ಭಕ್ತಿಕಾವ್ಯದ ಮುಖ್ಯಪ್ರವಾಹಕ್ಕೆ ಸೆಳೆಯಲ್ಪಟ್ಟರು ಮತ್ತು ಮರಾಠಿಯಲ್ಲೇ ಕಾವ್ಯರಚನೆ ಮಾಡಿದರು. ಆದರೆ ಆ ಭಾಷೆಯಲ್ಲಿದ್ದ ಪದ್ಯಗಳು ಆಗಿನ ವಿದ್ಯಾವಂತ ಕೊಂಕಣಿಗರಿಗೇ ಅಸಂವೇದ್ಯವಾಗಿ ಕಂಡು ಬಂದುದರಿಂದ ಅವರ ತಿಳಿವಿಗೋಸ್ಕರ ಕೊಂಕಣಿಯಲ್ಲಿ ಅವುಗಳ ಅನುವಾದ ಗಳನ್ನು ಮತ್ತು/ಅಥವಾ ತಾತ್ಪರ್ಯಗಳನ್ನು ಬರೆಯಬೇಕಾಯ್ತು. ಇದನ್ನು ಆಗಿನ ವಿಜಯನಗರದ ಕನ್ನಡ ಲಿಪಿಗಳನ್ನು ಬಳಸಿ ಮಾಡಲಾಯಿತು. ಪೋರ್ಚುಗೀಸ್ ಮಿಶನರಿಗಳು ಮತ್ತು ದೊರೆಗಳು ಕೊಂಕಣಿಯನ್ನು 'ಕನರಿಮ್' (ಕನ್ನಡ) ಎಂಬ ಅಭಿಧಾನದಿಂದ ಕರೆಯಲು ಬಹುಶಃ ಇದೂ ಒಂದು ಕಾರಣವಾಗಿದ್ದಿರಬೇಕು. ಯಾಕೆಂದರೆ, ಅವರು ಕೊಂಕಣಿ ಪಠ್ಯವನ್ನು ಕನ್ನಡ ಲಿಪಿಯಲ್ಲಿ ಕಂಡದ್ದಲ್ಲದೆ, ಆ ಶಬ್ದವು ಸಹ ಆಗಿನ ಪಾರ್ಸಿ ವ್ಯಾಪಾರಿಗಳ ಆಡುಮಾತಿನಲ್ಲಿ ಬಳಕೆಯಲ್ಲಿದ್ದ ಕಿನಾರೆ ಎಂಬರ್ಥದ 'ಕನರಿ' ಎಂಬುದರಿಂದ ಬಂದಂತೆ ತಿಳಿದರು. ಆ ಬರೆಹಗಳ ಮರಾಠಿ ಪಠ್ಯಗಳ ಜೊತೆ ಕನ್ನಡ ಲಿಪಿಯನ್ನುಪಯೋಗಿಸಿ ಕೊಂಕಣಿಯಲ್ಲಿ ಅನುವಾದಗಳನ್ನೋ ತಾತ್ಪರ್ಯಗಳನ್ನೋ ಕೊಡಲಾಗುತ್ತಿತ್ತು.

### ಕೊಂಕಣಿಯ ಉಪಲಬ್ಧವಾದ ಪ್ರಥಮ ಶಿಷ್ಟಸಾಹಿತ್ಯ :

ಕ್ರಿ.ಶ. 1510 ರಲ್ಲಿ ಪೋರ್ಚುಗೀಸರ ಆಗಮನದ ಅನಂತರ, ರೋಮನ್ ಲಿಪಿಯ ಸ್ವೀಕಾರದ ಬಳಿಕ, ಮಿಶನರಿಗಳು ಮುಖ್ಯವಾಗಿ ಪೋರ್ಚುಗೀಸ್ ಮಿಶನರಿಗಳು ಇವುಗಳಲ್ಲಿ ಕೆಲವು ಕೃತಿಗಳನ್ನು ಆ ಲಿಪಿಗೆ ಲಿಪ್ಯಂತರಗೊಳಿಸಿದರು. ಕೊಂಕಣಿಯಲ್ಲಿ ಲಬ್ಧವಾಗಿರುವ ಅತಿ ಹಳೆಯ ಪ್ರಾಚೀನ ಸಾಹಿತ್ಯಕೃತಿಯಾದ 'ಅಶ್ವಮೇಧ್-ರಘುನಾಥಾಚ್ಯ ವಂಶಾಚಿ ಕಥಾ' ವಿಸ್ತೃತವಾದ 'ರಾಮಾಯಣ-ಮಹಾಭಾರತದ ಕಥೆಗಳು' ಎನ್ನುವುದು ವಿರೋಧಾಭಾಸವೆನ್ನುವಂತೆ ಈ ರೋಮನ್ ಲಿಪಿಯಲ್ಲೇ ಬರೆದಿಡಲ್ಪಟ್ಟಿದೆ. ಈ ಕೃತಿ ಇನ್ನೂ ಪೋರ್ಚುಗೀಸ್ ಪಟ್ಟಣ ಬರ್ಗಾದ ಸಾರ್ವಜನಿಕ ಗ್ರಂಥಾಲಯದಲ್ಲಿ ಹಸ್ತಪ್ರತಿರೂಪದಲ್ಲೇ ಇದೆ. ಇದರ ಕೃತಿಕಾರನು ಕೃಷ್ಣದಾಸ ಶರ್ಮ ಎಂದು ತಿಳಿಯಲಾಗಿದೆ. ಈತನ ಮರಾಠೀ

ಕಾವ್ಯಕೃತಿಯಾದ 'ಕೃಷ್ಣಚರಿತ' ಎನ್ನುವುದು ಕೂಡ ಹಸ್ತಪ್ರತಿರೂಪದಲ್ಲೇ ಇದೆ. ಆದರೆ ಅಲ್ಲಿಯ ಕರ್ತೃಗಳು ಬೇರೆಬೇರೆ ಕಾವ್ಯನಾಮಗಳನ್ನು ಹೊಂದಿದ ಹಲವರೆನ್ನುವಂತೆ ಕಂಡುಬರುತ್ತದೆ. ಕೃಷ್ಣದಾಸನ ಹಸ್ತಪ್ರತಿಯಲ್ಲಿರುವುದು ಸಂವೇದನಶೀಲ ಹಾಗೂ ಲವಲವಿಕೆ ಹುಟ್ಟಿಸುವ ವಾಕ್ಯಗಳಿಂದ ಕೂಡಿದ ವಿಶಿಷ್ಟ ಮತ್ತು ಸಂಪದ್ಭರಿತವಾದ ಕೊಂಕಣಿ ಗದ್ಯ. ಇದರ ಶೈಲಿಯ ಅಧ್ಯಯನದಿಂದ ಈ ಭಾಷೆಯು ಹಲವು ಸಮಯದವರೆಗಲ್ಲದಿದ್ದರೂ ಸಾಹಿತ್ಯದಲ್ಲಿ ಬಳಕೆಯಲ್ಲಿದ್ದು ದನ್ನು ಮತ್ತು ಬೆಳವಣಿಗೆಯ ಮೊದಲ ಹಂತದಲ್ಲಿದ್ದುದನ್ನು ಖಚಿತಪಡಿಸುತ್ತದೆ.

ಕೃಷ್ಣದಾಸ ಮತ್ತು ಇತರ ಆ ಗುಂಪಿನ ಕವಿಗಳ ಗದ್ಯಶೈಲಿಯು ವಿದೇಶೀ ಮಿಶನರಿಗಳು ಅನಂತರ ರೂಪಿಸಿದ ಕೊಂಕಣಿಗಿಂತ ಭಿನ್ನವಾದುದು. ಈ ಮಿಶನರಿಗಳ ಗದ್ಯವು ಬಹುಕಾಲದಿಂದ ರೂಢಿಯಲ್ಲಿದ್ದ ಲ್ಯಾಟಿನ್ ವಾಕ್ಯರಚನೆಯ ಮಾರ್ಗದಲ್ಲಿ ರೂಪಿತವಾದಂಥವು ಮತ್ತು ವಿಕೃತ ಪ್ರತಿಮಾಶಿಲ್ಪದಿಂದ ಸಿಂಗರಿ ಸಲ್ಪಟ್ಟಂಥವು. ಕ್ರಿ.ಶ. 1565 ರ ಅನಂತರ ಹಳೆಯ ಗೋವಾ, ಕೊರಾವ್ಲೊ, ರಾಚೊಲ್, ಮಾಪುಸಾಗಳಲ್ಲಿ ಮಿಶನರಿಗಳಿಗಾಗಿಯೇ ವಿಶೇಷವಾಗಿ ಸ್ಥಾಪಿಸಲ್ಪಟ್ಟ ಶಾಲೆಗಳಲ್ಲಿ ಕೊಂಕಣಿಯು ಬೋಧಿಸಲ್ಪಟ್ಟ ಮೇಲೆ ಅವರು ಆ ಭಾಷೆಯ ಗಹನತೆಗಳನ್ನೆಲ್ಲ – ಇವನ್ನವರು ಮಾತಿನ ಮಾಟ ಮತ್ತು ಸಂಕೀರ್ಣತೆ ಎಂದು ಕರೆದರು – ಕರಗತಮಾಡಿಕೊಂಡರು ಮತ್ತು ಅದರಲ್ಲಿ ಧೈರ್ಯವಾಗಿ ಬರೆಯ ತೊಡಗಿದರು. ಈ ಸಮಯದ ಸುಮಾರಿಗೆ ಆಧುನಿಕ ಲ್ಯಾಟಿನ್‌ನಿಂದ ಹುಟ್ಟಿಬಂದ ಯುರೋಪಿನ ಭಾಷೆಗಳು ಅವುಗಳ ಪೂರ್ವಜಭಾಷೆಯ ಆಧಾರದಲ್ಲಿ ವ್ಯವಸ್ಥಿತ ವಾಗಿ ರೂಪಿಸಲ್ಪಟ್ಟವು. ಇದೇ ಮಾದರಿಯನ್ನು ಕೊಂಕಣಿಯು ತನ್ನ ವ್ಯಾಕರಣ ರಚನೆಯ ವಿಶ್ಲೇಷಣೆಯಲ್ಲಿ, ಆಕೃತಿಮಾ ಶಾಸ್ತ್ರದಲ್ಲಿ ಮತ್ತು ವಾಕ್ಯವಿಜ್ಞಾನ ಕ್ಷೇತ್ರಗಳಲ್ಲಿ, ಮತ್ತು ಅವುಗಳಿಗೆ ಒಂದು ಹೊಸ, ವಿಕಸಿತ ಗದ್ಯ ಹಾಗೂ ಕೋಶವಿಜ್ಞಾನವನ್ನು ಕೊಡುವುದರಲ್ಲಿ ಅನುಸರಿಸಿತು. ಈ ಕೊಡುಗೆ ಆ ಕಾಲದ ಇತರೆಲ್ಲ ಆಧುನಿಕ ಇಂಡೋ–ಆರ್ಯಭಾಷೆಗಳಿಗಿಂತ ಮೇಲ್ಮಟ್ಟದ ಸಾಧನೆಯಾಗಿದೆ.

**ಕೊಂಕಣಿ ಸಾಹಿತ್ಯದ ನಾಶ :**

ಆದರೆ ಹಿಂದೆ ಮಾಡಿದ ಅಪರಾಧಕ್ಕೆ ಪ್ರಾಯಶ್ಚಿತ್ತ ಹಾಗೂ ಪರಿಹಾರ ರೂಪವಾದ ಈ ಸಾಹಸ ಕೈಕೊಳ್ಳುವ ಮೊದಲು ಪೋರ್ಚುಗಲ್‌ನಿಂದ ಬಂದ ಕ್ರಿಶ್ಚಿಯನ್ ಛಲವಾದಿಗಳು ತಮ್ಮ ವಿಜಯ ಯಾತ್ರೆಯ ಮತ್ತು ಅತ್ಯುತ್ಸಾಹದ ಮೊದಲ ಹಂತದಲ್ಲಿ ನಾಶಯೋಗ್ಯವೆಂದು ಹಾಗೂ ಮತವಿರೋಧಿ ಎಂದು ತಾವು ತಿಳಿದ ಎಲ್ಲವನ್ನೂ ಸರ್ವನಾಶಗೊಳಿಸಿದರು. ಸಾಕ್ಷಿಗಳ ವರದಿಗಳ ಪ್ರಕಾರ ಈ ಸರ್ವನಾಶವು ಕೊಂಕಣಿಯಲ್ಲಿರುವುದೆಂದು ಹೇಳಲಾದ ಸಾಹಿತ್ಯಿಕ ದಾಖಲೆಗಳನ್ನು ಮತ್ತು ಕೃತಿಗಳನ್ನು ಒಳಕೊಂಡಿತ್ತು. ಈ ಅಳಿವಿನಿಂದ ಪಾರಾಗಲು ಶಕ್ತವಾಗಿದ್ದ

ಒಂದು ಸಣ್ಣ ತುಣುಕಿನಲ್ಲಿ ಕೃಷ್ಣದಾಸನ ಕಥೆಗಳು ಮತ್ತು ಇತರ ಕೆಲವರ ಕೃತಿಗಳು ಸೇರಿವೆ. ಹಲವಾರು ದೇವಸ್ಥಾನಗಳು ಕೆಡವಲ್ಪಟ್ಟಾಗ ಆ ಕಾಲದಲ್ಲಿ ಅವುಗಳಲ್ಲಿದ್ದಂತಹ ಮುಖ್ಯವಾಗಿ ಧಾರ್ಮಿಕ ಕೃತಿಗಳ ನಾಶವೆಷ್ಟೆಂಬುದು ನಿಖರವಾಗಿ ನಮಗೆ ತಿಳಿಯದು. ಈ ದಳ್ಳುರಿಯು ಎಲ್ಲ ಜನರ ಸಾಹಿತ್ಯಿಕ ಸಂಪತ್ತನ್ನು ಸೂರೆಗೊಂಡಿತು ಮತ್ತು ಅವರ ಮನಸ್ಸಿಗೆ ಆಘಾತ ವನ್ನುಂಟುಮಾಡುವಂತೆ ಅವರ ಸಾಂಸ್ಕೃತಿಕ ನೆಲೆಗಟ್ಟನ್ನೇ ಅಲುಗಾಡಿಸಿತು.

**ಮಿಶನರಿಗಳ ರಚನಾತ್ಮಕ ಕಾರ್ಯ :**

ಈ ಧ್ವಂಸದ ಉದ್ರೇಕ ಕಡಮೆಯಾದ ಮೇಲೆ ಮತ್ತು ಅಳಿದ ಮೇಲೆ ಹಾಗೂ ತಮ್ಮ ಹುಚ್ಚು ಸಾಹಸಕಾರ್ಯದ ತಪ್ಪನ್ನು ಅರಿತೊಡನೆ ಆಳುವವರು ಬಹಳ ಶ್ರದ್ಧೆಯಿಂದ ರಚನಾತ್ಮಕ ಕಾರ್ಯಗಳನ್ನು ಕೈಕೊಂಡರು. 1556ರಷ್ಟು ಹಿಂದೆಯೇ, ಈ ಉಪಖಂಡದಲ್ಲೇ ಮೊತ್ತಮೊದಲಬಾರಿಗೆ ಎಂಬಂತೆ, ಗೋವಾ ದಲ್ಲಿ ರೋಮನ್ ಅಕ್ಷರದ ಮೊಳೆಗಳಿಂದ ಕೂಡಿದ ಮುದ್ರಣಾಲಯವೊಂದರ ಸ್ಥಾಪನೆಯು ಇತರ ಯಾವುದೇ ಭಾರತೀಯ ಭಾಷೆಗಳಿಗಿಂತ ಮೊದಲು ಕೊಂಕಣಿಗೆ ಪ್ರಪ್ರಥಮ ಮುದ್ರಿತ ಪುಸ್ತಕವನ್ನು ಒದಗಿಸಿತು. ಆದರೆ ಈ ಅನು ಕೂಲಕರ ಮುಂದಡಿ ಪ್ರಾಯಃ ಎರಡು ಸ್ಪಷ್ಟ ಕಾರಣಗಳಿಂದಾಗಿ ಗಣನೀಯವಾಗಿ ಕುಂಠಿತಗೊಂಡಿತೆಂದು ತೋರುತ್ತದೆ : ಒಂದನೆಯದಾಗಿ ಮುಖ್ಯವಾಗಿ ಪುರೋಹಿತ ವರ್ಗದವರೇ ಆಗಿದ್ದ ಓದುಗರ ಅಭಾವ, ಮತ್ತು ಎರಡನೆಯದಾಗಿ ರೋಮನ್ ಲಿಪಿಯ ಸ್ವೀಕಾರ. ಈ ಎರಡನೆಯ ಸಂಗತಿ ದೇವನಾಗರಿ ಲಿಪಿಯು ಅದನ್ನು ಉಪಯೋಗಿಸುತ್ತಿದ್ದವರಿಗೇ ಬಹಳ ಬೇಗನೆ ಅಪರಿಚಿತವಾಗುವಂತೆ ಮಾಡಿತು ಮತ್ತು ಪರಿಣಾಮವಾಗಿ ಸಂಸ್ಕೃತಭಾಷೆ ನಿಧಾನವಾಗಿ ಅವರ ಗ್ರಹಿಕೆಗೆ ಹಾಗೂ ಉಲ್ಲಾಸಕ್ಕೆ ಸಿಕ್ಕದೆಹೋಯಿತು. ಈ ಪರಕೀಯತೆಯ ವಿಚ್ಛಿದ್ರಕಾರಕ ಪರಿಣಾಮ ವೆಂದರೆ ಕೊಂಕಣಿಗರು ತಮ್ಮ ಪಾಂಡಿತ್ಯದ ಮತ್ತು ಸಂಕೀರ್ಣ ಶಬ್ದಗಳ ಪೋಷಣೆಗೆ ತಮ್ಮ ಮಾತೃಭಾಷೆಯ ಆಶ್ರಯಸ್ಥಾನ ಅರ್ಥಾತ್ ಸಂಸ್ಕೃತದತ್ತ ತಿರುಗುವ ಬದಲು ಪೋರ್ಚುಗೀಸ್‌ನತ್ತ ಹೊರಳಬೇಕಾಯಿತು. ಇದರೊಂದಿಗೆ ಈ ವಿಕೃತಿಯು ಭಾಷೆಯೊಳಗೆ ನುಸುಳಿದ ಹಾನಿಕಾರಕ ಪರಿಣಾಮವಾಗಿ ಅದು ಶಕ್ತಿಗುಂದಿತು.

ಆದರೂ, ಶ್ರದ್ಧಾವಂತ ಮಿಶನರಿಗಳ ಪ್ರಯತ್ನದಿಂದಾಗಿ ಕೊಂಕಣಿಯ ಪುನಾರಚನೆಯ ಈ ಅಗಾಧ ಯೋಜನೆ ಸರ್ವವಿಧದಲ್ಲೂ ಪೂರ್ಣಪ್ರಮಾಣದಲ್ಲಿ ಆರಂಭಗೊಂಡಿತು. 1563ರ ವೇಳೆಗೆ, ಹಳೆಯ ಗೋವಾದಲ್ಲಿದ್ದ ಜೆಸ್ಯುಯಿಟ್ ಶಕ್ತಿ ಕೇಂದ್ರವಾದ ಸೈಂಟ್ ಪಾಲ್ ಕಾಲೇಜಿನ ಬೋಧಕನಾಗಿದ್ದ, ಅನಂತರ ಗೋವಾದ ದೀಕ್ಷೆತೊಟ್ಟ ಮೊದಲ ಪಾದ್ರಿಯಾಗಲಿದ್ದ, ಅಂದ್ರ್‌ವಾಜ್ ಎಂಬಾತ ಮೊತ್ತ ಮೊದಲ ಕೊಂಕಣಿ ವ್ಯಾಕರಣವನ್ನು ತಯಾರಿಸಿದನು. ಇದರ ಆಧಾರದ

ಮೇಲೆ 1568 ಮತ್ತು 1617 ನಡುವೆ ಆಂಗ್ಲ ಜೆಸ್ಯುಯಿಟ್ ಥಾಮಸ್ ಸ್ಟೀಫನ್ಸ್ (1549-1617)ಎನ್ನುವವನು ಕೊಂಕಣಿಭಾಷೆಯ ಗ್ರಾಂಥಿಕರೂಪವನ್ನು ದೃಢಪಡಿಸಿ ವಿಸ್ತೃತವಾದ ಕೊಂಕಣಿ ವ್ಯಾಕರಣ ಗ್ರಂಥವನ್ನು ಬರೆದನು. ಇದು ಅವನ ಮರಣಾನಂತರ 1640ರಲ್ಲಿ ಪ್ರಕಟವಾಯಿತು. ಈ ಕೃತಿಯು ಬಳಿಕ ಅಸಾಧಾರಣ ಪ್ರತಿಭೆಯ ಭಾಷಾವಿಜ್ಞಾನಿಯಾದ ಹೆನ್ರಿಕ್ ಹೆನ್ರಿಕ್ಸ್ (1520-1600), ಜೋವಾ ದೆ ಸಾನ್ ಮತಿಯಾಸ್, (1595ರಿಂದ 1647ರವರೆಗೆ ಜೀವಿಸಿದ್ದಾತ), ಸೈಮಾವೊ ಐವರೆಸ್ (1695ರಿಂದ 1744ರವರೆಗೆ ಬದುಕಿದ್ದಾತ), ಕಾರೆಲ್ ಪ್ರಿಕ್ರಿಲ್ (1718-1785) ಮೊದಲಾದವರಿಂದ ಬೆಳೆಸಲ್ಪಟ್ಟಿತು ಮತ್ತು ಕೊನೆಗೆ ಗೋವಾ ಸಂಜಾತನಾದ ಫ್ರಾನ್ಸಿಸ್ಕನ್ ಸಂನ್ಯಾಸಿ ಗಾಸ್ಪರ್ ದೆ ಸಾನ್ ಮಿಗ್ವುವೆಲ್ (1595 ಮತ್ತು 1647ರ ನಡುವೆ ಜೀವಿಸಿದ್ದಾತ) ಎಂಬವನಿಂದ ತನ್ನ ಚಿರಸ್ಥಾಯಿಯಾದ ಗ್ರಂಥ 'ಆರ್ಟ್ ಡಿ ಲಿಂಗೋವಾ ಕನರಿಮ್' ಎಂಬುದರಲ್ಲಿ ಸುಮಾರು 1635ರ ವೇಳೆಗೆ ಪರಿಪೂರ್ಣತೆಗೆ ತರಲ್ಪಟ್ಟಿತು. ಇತಾಲಿಯನ್ ಜೇಸುಯಿಟ್ ಆದ ಇಗ್ನಾಜಿಯೋ ಅರ್ಕಮೋನ್ (1615-1683) ಎಂಬಾತ ತನ್ನ 'ಜಾನುವಾ ಇಂಡಿಕಾ ಸಿವ್ ಪ್ರೊ ಕೊಂಕಣಿಕ್ಯಾಟ್ ಡೆಕ್ಕಾನಿಕಾ ಲಿಂಗ್ವಿಸ್' (ಕೊಂಕಣಿ ಮತ್ತು ದಕ್ಖಣಿ ಭಾಷೆಗಳಿಗೆ ಭಾರತೀಯ ಮಹಾದ್ವಾರ) ಎನ್ನುವ ಕೃತಿಯಲ್ಲಿ ಕೊಂಕಣಿ ಮತ್ತು ಮರಾಠಿ ವ್ಯಾಕರಣಗಳ ಸಾದೃಶ್ಯ ವೈದೃಶ್ಯಗಳನ್ನು ಬಹಳ ವಿಸ್ತಾರವಾಗಿ ಮತ್ತು ವ್ಯವಸ್ಥಿತವಾಗಿ ಕೊಟ್ಟಿದ್ದಾನೆ.

ವ್ಯಾಕರಣದ ಅಧ್ಯಯನದ ಜೊತೆಗೇ, ಶಬ್ದಸಂಪತ್ತಿನ ವಿಶ್ಲೇಷಣೆಯನ್ನೂ ವಿಸ್ತೃತವಾದ ಅಧ್ಯಯನವನ್ನೂ ಮಾಡಲಾಗಿದೆ. ಕೊಂಕಣಿಯ ಶಬ್ದಗಳನ್ನು ಸಂಕಲಿಸಿದ ಮೊದಲಿಗರಲ್ಲಿ ಪ್ರಸಿದ್ಧನಾದ ಡಾ। ಗಾರ್ಸಿಯಾ ಡ ಒರ್ಟಾ (1530-1572)ಎನ್ನುವವನು ತನ್ನ 'ಕೊಲೊಕ್ವಿಯೊಸ್ ದೊಸ್ ಸಿಂಪ್ಲೆಸ್ ಎ ಡ್ರೊಗಾಸ್ ಮೆದಿಸಿನಾಯಿಸ್' ಎಂಬ ಗ್ರಂಥದಲ್ಲಿ ಗಿಡಮರಗಳ ಕೊಂಕಣಿ ಪಾರಿಭಾಷಿಕಪದ ಗಳನ್ನು ಉಲ್ಲೇಖಿಸಿದ್ದಾನೆ. ಆದರೆ ಕೊಂಕಣಿ ಶಬ್ದಗಳು, ಪದಪುಂಜಗಳು, ನುಡಿಗಟ್ಟುಗಳು ಮೊದಲಾದವುಗಳನ್ನು ವ್ಯವಸ್ಥಿತ ಕ್ರಮದಲ್ಲಿ ಬಹಳ ವಿಸ್ತಾರವಾಗಿ ಪಟ್ಟಿಮಾಡಿದ ಮೊದಲ ವಿದ್ವಾಂಸರುಗಳೆಂದರೆ 16ನೇ ಶತಮಾನದ ಉತ್ತರಾರ್ಧ ದಲ್ಲಿ ಸಾಲ್ಸೀಟ್ ಹಾಗೂ ಗೋವಾದ ತಮ್ಮ ದುರ್ಗಗಳಲ್ಲಿ ನೆಲಸಿದ್ದ ಅಸಂಖ್ಯಾತ ಜೇಸುಯಿಟ್‌ಗಳು. ಅವರ ಪರಿಶ್ರಮದ ಫಲಗಳನ್ನು ಎರಡು ಸಂಪುಟಗಳಲ್ಲಿ ಸಂಗ್ರಹಿಸಲಾಗಿದೆ. ವ್ಯಾಕರಣದ ಕುರಿತಾಗಿ ಬರೆದ, ತನ್ನ ಗುರುವಿನ ಕೃತಿಗೆ ತನ್ನ ಕೊಡುಗೆಗಳನ್ನೂ ಸೇರಿಸಿದ ಡಿಯಾಗೋ ರಿಬೈರೋ (1560-1633) ತನ್ನ ಎರಡು ಸಂಪುಟಗಳ 'ವೊಕಾಬುಲಾರಿಯೋ ದ ಲಿಂಗ್ವಾ ಕನರಿಮ್' (1626) ಎಂಬುದರಲ್ಲಿ ಈ ಸಂಗ್ರಹಕ್ಕೆ ಅಸಂಖ್ಯಾತ ನುಡಿಗಟ್ಟುಗಳನ್ನು ಸೇರಿಸಿ ವಿಸ್ತರಿಸಿದ್ದಾನೆ. ಅಂತೋನಿಯೋ ದೆ ಸಲ್ಡಾನಾ (1598-1683) ಎನ್ನುವ

ಕುಶಲ ಗದ್ಯಲೇಖಕನು ಸಹ ಕೊಂಕಣಿ ಶಬ್ದಭಂಡಾರದ ರಚನೆಯಲ್ಲಿ ತನ್ನ ಸಮರ್ಥ ಸಹಾಯವನ್ನು ಎರವಲಾಗಿ ಕೊಟ್ಟಿದ್ದಾನೆ. ಈ ಕೃತಿಯು ಅವನ ಸಧರ್ಮಿಯಾದ ಮಿಗ್ವೆಲ್ ದೆ ಅಲ್ಮೇಡಾ (1604-1683) ಎಂಬಾತನಿಂದ ಗಮನಾರ್ಹವಾಗಿ ಪೂರೈಸಲ್ಪಟ್ಟಿತು. ಅವನು ತನ್ನದೇ ಆದ, ಸುಮಾರು 50,000 ಶಬ್ದಗಳ ಬೆನೆಡಿಟೊ ಪಿರೇರಾನ ವಿಸ್ತಾರವಾದ 'ಪ್ರೊಸೊಡಿಯಾ ಇನ್ ವೊಕಾಬುಲಾರಿಯಮ್ ಟ್ರೈಲಿಂಗ್' (1634) ಎನ್ನುವ ಬೃಹತ್ಕೃತಿಯನ್ನು ಅವಲಂಬಿಸಿದನೆನ್ನಲಾಗಿದೆ. ರೋಮ್‌ನ ಜೆಸ್ಯುಯಿಟ್ ಪತ್ರಾಗಾರದಲ್ಲಿ ಸುರಕ್ಷಿತವಾಗಿಟ್ಟ 'ಲೆಕ್ಸಿಕನ್ ರೋಮನಸ್' ಮತ್ತು ಲಿಸ್ಬನ್‌ನ ರಾಷ್ಟ್ರೀಯ ಗ್ರಂಥಾಲಯದಲ್ಲಿ ಜೋಪಾನವಾಗಿಟ್ಟ 'ಲೆಕ್ಸಿಕನ್ ಲಿಸ್ಬೊನೆನ್ಸ್' ಎಂಬ ಎರಡು ನಿಘಂಟುಗಳು ಕ್ರಮವಾಗಿ ಸಲ್ಡಾನಾ ಮತ್ತು ಅಲ್ಮೇಡಾ ಅವರದ್ದೆಂದು ಹೇಳಲಾಗಿದೆ. ಈ ಜೆಸ್ಯುಯಿಟ್‌ಗಳಲ್ಲದೆ ಫ್ರಾನ್ಸಿಸ್ಕನ್ ಸಂನ್ಯಾಸಿಗಳು ಕೂಡ ಕೊಂಕಣಿ ನಿಘಂಟು ರಚನಾ ಶಾಸ್ತ್ರಕ್ಕೆ ತಮ್ಮ ಕೊಡುಗೆಗಳನ್ನಿತ್ತಿದ್ದಾರೆ. ಅಂತಹ ಕೆಲವು ಪ್ರಖ್ಯಾತ ವ್ಯಕ್ತಿಗಳಲ್ಲಿ ಮಾನ್ಯುವಲ್ ಬಾನ್ಹಾ ಮತ್ತು ಗಾಸ್ಪರ್ ದೆ ಸಾನ್ ಮಿಗ್ವೆಲ್ ಮಹಾಶಯರು ಸೇರಿದ್ದಾರೆ. ಗಾಸ್ಪರ್‌ನ ಸಮೃದ್ಧ ಬೃಹತ್ಕೃತಿಯು ಎರಡು ಸಂಪುಟಗಳಲ್ಲಿತ್ತು; ಆದರೆ ಈಗ ಅವು ನಷ್ಟವಾಗಿವೆ ಎನ್ನಲಾಗಿದೆ. 'ಪ್ರೊಸೊಡಿಯಾ ಡೆಲ್ಲಾ ಲಿಂಗ್ವಾ ಕನರಿನಾ' ಎನ್ನುವ ಹೆಸರಿನ, ಬಹುಶಃ ಈ ಕಾಲದ ಕೊನೆಯ ಪ್ರಮಾಣಭೂತ ಕೊಂಕಣಿ ನಿಘಂಟುವನ್ನು ರಚಿಸಿದವನು ಡಿಯಾಗೋ ದೆ ಅಮರಲ್ (1699ರ ಅನಂತರ 1762) ಎನ್ನುವವನು. ಈ ಕೃತಿಗಳು ಮತ್ತು ಕೊಂಕಣಿ, ಮರಾಠಿ, ಸಂಸ್ಕೃತ, ಇತಾಲಿಯನ್, ಗ್ರೀಕ್ ಮತ್ತು ಲ್ಯಾಟಿನ್‌ನಂತಹ ಭಾಷೆಗಳ ಸಾದೃಶ್ಯವೈದೃಶ್ಯಗಳ ಬಗ್ಗೆ ತಿಳಿಸುವ ಇತರ ಭಾಷಾಶಾಸ್ತ್ರಕ್ಕೆ ಸಂಬಂಧಪಟ್ಟ ಸಂಶೋಧನೆಗಳು ಅವುಗಳಿಗಿಂತ ಎಷ್ಟೋ ಅನಂತರ ವಿಕಸಿತವಾದ ತೌಲನಿಕ ಭಾಷಾವಿಜ್ಞಾನಕ್ಕೆ ಅಗ್ರಗಾಮಿಯೆನ್ನಬಹುದಾದಂತಹ ವಿಚಾರಗಳನ್ನು ಸೂಚಿಸಿದ ಸ್ವಭಾವದ್ದಾಗಿವೆ.

## ಭಾಗ : ಎರಡು

# ಕೊಂಕಣಿಯ ಏಳು ಉಪಭಾಷೆಗಳು
(ಶಷ್ಟಿ, ಕಾರ್ವಾರೀ, ಬಾರ್ಹದೇಶೀ, ಮಂಗ್ಳೂರಿ, ಕೊಡಿಯಾಳಿ, ಅಂತ್ರೂರ್ಝಿ, ಕೇರಳಿ)

1683ರಲ್ಲಿ ಗೋವಾಕ್ಕೆ ಮರಾಠರು ಇಟ್ಟ ದಾಳಿ ಕೊಂಕಣಿಯ ಅವನತಿಗೆ ಸಂಕೇತವಾಯಿತು. ಅಸಾಮಾನ್ಯ ವ್ಯಕ್ತಿಯಾದ ಶಂಭಾಜಿರಾಜೆ ಸ್ವತಃ ಪೋರ್ಚುಗೀಸರ ಪೌರ್ವಾತ್ಯ ಸಾಮ್ರಾಜ್ಯದ ಸಂಪದ್ಭರಿತ ರಾಜಧಾನಿಯಾಗಿದ್ದ ಗೋವಾದ ಹಳೆಯ ಪಟ್ಟಣದ ಕದವನ್ನು ತಟ್ಟಿ ಇಂದು ಕುಂಬಾರ್ಜುವ ಕಾಲುವೆ ಎಂದು ಕರೆಲ್ಪಡುವ ಮಾಂಡೋವಿ ನದೀಶಾಖೆಯ ಇನ್ನೊಂದು ದಡದಲ್ಲಿ ಭಯಾನಕವಾದ ವ್ಯೂಹ ರಚನೆಮಾಡಿದ್ದಲ್ಲದೆ ಈ ಕಾರ್ಯಾಚರಣೆಯಲ್ಲಿ ಅದಾಗಲೇ ಗೆದ್ದಿದ್ದ ಝುವೆಂ ದ್ವೀಪದಲ್ಲಿ ಚರ್ಚೊಂದನ್ನು ಪುಡಿಗುಟ್ಟಿದನು. ಆಗಿನ ಗೋವಾದ ವೈಸರಾಯ್ ಆಗಿದ್ದ, ಆಲ್ವರ್‌ನ 'ಕೌಂಟ್' ತನ್ನ ಪಟ್ಟಣಕ್ಕೆ ನಿರ್ದಯ ಶತ್ರುಗಳು ದಾಳಿಯಿಟ್ಟುದರಿಂದ ಇಂಡೀಸ್‌ನ ದೂತನಾಗಿದ್ದ ಸೈಂಟ್ ಕ್ಸೇವಿಯರ್‌ನ ಗೋರಿಗೆ ಯಾತ್ರೆಹೊರಟನು ಮತ್ತು ವೈರಿಗಳಿಂದ ತನ್ನನ್ನು ರಕ್ಷಿಸಬೇಕೆಂದು ಆ ಸಂತನಲ್ಲಿ ಮೊರೆಯಿಟ್ಟನು. ಆ ಸಂತನ ಪವಾಡವೋ ಎನ್ನುವಂತೆ, ಪೋರ್ಚುಗೀಸರ ಮೇಲಿನ ನಿಶ್ಚಿತವಾದ ವಿಜಯ ಸನ್ನಿಹಿತವಾಗುವ ವೇಳೆಗೆ ಆತನ ಸ್ವಂತ ಕೋಟೆಗೆ ಮೊಗಲರಿಂದ ದಾಳಿಯ ಬೆದರಿಕೆ ಬಂದುದರಿಂದ ಈ ಮುತ್ತಿಗೆಯನ್ನು ಹಿಂತೆಗೆದು ಕೊಂಡು ತನ್ನ ಸ್ವಂತ ಪ್ರಾಂತಕ್ಕೆ ಹಿಮ್ಮೆಟ್ಟಬೇಕಾಯಿತು ಮತ್ತು ಈ ಘಟನೆ ಯಿಂದಾಗಿ ಬಹುಶಃ ಗೋವಾದ ಮತ್ತು ಅಲ್ಲಿಯ ಭಾಷೆಯ ಚರಿತ್ರೆ ಬೇರೊಂದು ಪಥವನ್ನು ಗುರುತಿಸುವಂತಾಯಿತು.

ಬಳಿಕ ತಂತ್ರಗಾರನಾದ ಕೌಂಟ್ ಈ ಘಟ್ಟದಲ್ಲಿ ಗೋವಾದ ಪ್ರಜೆಗಳ - ಅವರಲ್ಲಿ ಹೆಚ್ಚಿನವರು ಕ್ರಿಶ್ಚಿಯನರಾಗಿದ್ದರೂ - ನಿಷ್ಕಾಪಟ್ಯವನ್ನು ಸಂದೇಹಿಸುತ್ತಾ ತಮ್ಮ ಸಧರ್ಮಿಯಾದ ದೊರೆಗಳಿಗೆ ಅವರಿಂದ ವಿಧೇಯತೆಯನ್ನು ಅಪೇಕ್ಷಿಸು ತ್ತಿದ್ದು, ಪೋರ್ಚುಗೀಸ್ ಪ್ರಭುತ್ವದ ಒಳಿತನ್ನು ಕಾಪಾಡುವ ತೋರಿಕೆಯ ಪ್ರದರ್ಶನವೆಂಬಂತೆ ಅವರನ್ನು ಉಳಿದ ಸಹಪ್ರಜೆಗಳಿಂದ ಸಾಂಸ್ಕೃತಿಕವಾಗಿ ಪ್ರತ್ಯೇಕಿಸಲು ಆತುರಪಟ್ಟು ಗೋವಾದ ಕ್ರಿಶ್ಚಿಯನರ ಮತ್ತು ಇತರರ ನಡುವೆ ಇದ್ದ ಒಂದೇ ಬಂಧಕವಾದ ಕೊಂಕಣಿಯ ದಮನಕ್ಕಾಗಿ ಕಠೋರವಾದ ಶಾಸನ ಗಳನ್ನು ಹೊರಡಿಸಿದನು. ಇದು ನಡೆದುದು 1684ರಲ್ಲಿ ಅಂದರೆ ಅಲ್ಲಿಯ ಅತ್ಯಂತ ಬಲಿಷ್ಠರಾಗಿದ್ದ ಮಿಗ್ವೆಲ್ ದೆ ಅಲ್ಮೇಡಾ, ಇಗ್ನಾಝಿಯೋ ಅರ್ಕಮೋನ್ ಮತ್ತು ಅಂತೋನಿಯೋ ದೆ ಸಲ್ಡಾನಾ ಅವರು ಸತ್ತು ಸರಿಯಾಗಿ ಒಂದು ವರ್ಷದ ಅನಂತರ. ಈ ಶಾಸನಗಳು ಸಾರಾಸಗಟಾಗಿ ಅತಿಕ್ರಮಿಸಲ್ಪಟ್ಟವು.

ಆಳುವವರು ಕೊಂಕಣಿ ಭಾಷೆಯು ಮತ್ತೂ ಜೀವಂತವಾಗಿರುವುದನ್ನು ಮನಗಂಡು 1687ರಲ್ಲಿ ಈ ಶಾಸನಗಳನ್ನು ಊರ್ಜಿತಗೊಳಿಸಿದರು. ಫ್ರಾನ್ಸಿಸ್ಕನ್‌ಗಳ ದುರ್ಬೋಧನೆಯಿಂದಾಗಿ ಸಾಗರೋತ್ತರ ಸಲಹಾಮಂಡಳಿಯ ಒಂದು ನಿಬಂಧನೆ 1684 ಮತ್ತು 1687ರ ಕೊಂಕಣಿಯ ವಿರುದ್ಧದ ಶಾಸನವನ್ನು ಪುನರುಜ್ಜೀವನಗೊಳಿಸಿತು. ಇದರ ವಕ್ತಾರನಾಗಿದ್ದ ಅಮರಾಲ್ ದೆ ಕುಟಿನ್ಹೋನ ಮುಖಾಂತರ ಕ್ರಮಬದ್ಧ ವಿಚಾರಣೆಮಾಡಿಸಿ, ಕೊಂಕಣಿ ಕ್ರಿಶ್ಚಿಯನರು ತಮ್ಮ ಭಾಷೆಯನ್ನು ತೊರೆಯಬೇಕು ಮತ್ತು ಪೋರ್ಚುಗೀಸನ್ನು ಮಾತ್ರ ಮಾತನಾಡಬೇಕು, ಇದರಿಂದ 'ಹಿಂದೂ ಗುರುಗಳಿಗೆ' ಅವರೊಡನೆ ಯಾವುದೇ ಸಂಪರ್ಕವಿರುವುದಿಲ್ಲ ಮತ್ತು ಅವರು ವಿಶ್ವಾಸದಿಂದ ವಿಮುಖರಾಗುತ್ತಾರೆ ಎಂದು ಭಾವಿಸಿ 1731ರಲ್ಲಿ ಒಂದು ಠರಾವು ಮಾಡಿತು. 1739ರಲ್ಲಿ ಲಿಸ್ಬನ್‌ನ ಸರಕಾರವು ಗೋವಾದ ವೈಸೆರಾಯ್‌ಗೆ, 1687ರ ಶಾಸನವನ್ನು ಜಾರಿಗೊಳಿಸುವಂತೆ ಆಜ್ಞೆ ಮಾಡಿತು; ಆದರೆ ಅದು ಯಾವ ಪರಿಣಾಮವನ್ನೂ ಬೀರಲಿಲ್ಲ. 1745ರಲ್ಲಿ ಲಾರೆನ್ಸ್ ದೆ ಸಾಂತ ಮರಿಯಾ ಎನ್ನುವ ಗೋವಾದ ಕ್ರೈಸ್ತಗುರು, ಗೋವಾದಲ್ಲಿದ್ದ ಕ್ರಿಶ್ಚಿಯನರೆಲ್ಲ ಪೋರ್ಚುಗೀಸನ್ನೇ ಮಾತನಾಡಬೇಕು ಇಲ್ಲದಿದ್ದರೆ, ಮದುವೆಯಾಗಲು ಅಥವಾ ಪಾದ್ರಿಗಳಾಗಲು ಅವರಿಗೆ ಅವಕಾಶವನ್ನೇ ಕೊಡಲಾಗುವುದಿಲ್ಲ ಎಂದು ವಿಧಿಸಿದನು ಮಾರ್ಕ್ವಿಸ್ ದೆ ಪೊಂಬಾಲ್ ಎಂಬಾತ ಪೋರ್ಚುಗಲ್‌ನ ಪ್ರಧಾನಮಂತ್ರಿಯಾಗಿ ಅಧಿಕಾರಕ್ಕೆ ಬಂದಾಗ ಕೊಂಕಣಿಗೆ ಅನುಕೂಲಕರವಾದ ಪರಿಸ್ಥಿತಿ ಒದಗಿದಂತೆ ತೋರುತ್ತದೆ. ಆತ, ಕ್ರೈಸ್ತ ಪಾದ್ರಿಗಳೆಲ್ಲ ತಮ್ಮ ಸಮುದಾಯದವರ ಭಾಷೆಯನ್ನು ತಿಳಿದಿರುವಂತೆ ನೋಡಿಕೊಳ್ಳಬೇಕೆಂದು ಗೋವಾದ ಕ್ರೈಸ್ತಗುರು ನೈವ ಬ್ರಮ್‌ಗೆ ಆದೇಶಿಸಿದನು. ಆದರೆ, ಈಗ ಆ ಆದೇಶವನ್ನು ನಿರ್ಲಕ್ಷಿಸುವ ಸರದಿ ಕ್ರೈಸ್ತ ಪಾದ್ರಿಗಳದ್ದಾಯಿತು ಮತ್ತು ಅವರದನ್ನು 1777ರವರೆಗೆ ಅಂದರೆ, ಮಾರ್ಕ್ವಿಸ್‌ನು ವಜಾಮಾಡಲ್ಪಡುವವರೆಗೆ ಮುಂದುವರಿಸಿದರು.

ಮತ್ತೊಮ್ಮೆ ಅಧಿಕಾರೀವರ್ಗದಿಂದ ಅಪಾಯ ಕೊಂಕಣಿಯ ಕುತ್ತಿಗೆಗೆ ಬಂತು. 1778ರಲ್ಲಿ ಗೋವಾದ ಕ್ರೈಸ್ತಗುರು ಅಸ್ಸುನ್ಸಾವೊ ದೆ ಬ್ರಿಟೊ ಎನ್ನುವವನು, ಮಕ್ಕಳಿಗೆ ಮತಬೋಧನೆಯು ಮತ್ತು ನಿರೂಪಕನ ಮೂಲಕ ಮಾಡುವ ಮರಣಕಾಲದ ಪಾಪನಿವೇದನೆಯು ಕೂಡ ಪೋರ್ಚುಗೀಸ್‌ನಲ್ಲಿ ನಡೆಯಲು ಮಾತ್ರ ಅನುಮತಿಕೊಡಬೇಕೆಂದು ವಿಧಿಸಿದನು. ಅವನ ಉತ್ತರಾಧಿಕಾರಿ, ಮಾನ್ಯುವಲ್ ದೆ ಸಾಂತ ಕ್ಯಾತರಿನಾ ಈ ಆಜ್ಞೆಯನ್ನೇ ಪುನರುಚ್ಚರಿಸಿದ್ದಲ್ಲದೆ ಹೆಚ್ಚೇನನ್ನೂ ಮಾಡಲಿಲ್ಲ. 1812ರಲ್ಲಿ ಕ್ರೈಸ್ತಗುರು ಮಾನ್ಯುವಲ್ ದೆ ಸಾನ್ ಗಾಲ್ದಿನೊ ಎನ್ನುವವನು, ಕೊಂಕಣಿ ಮಕ್ಕಳು ಶಾಲೆಗಳಲ್ಲಿ ತಮ್ಮ ಮಾತೃಭಾಷೆಯಲ್ಲಿ ಮಾತನಾಡುವುದನ್ನು ತಡೆಯಬೇಕೆಂದು ಕಟ್ಟಪ್ಪಣೆ ಮಾಡಿದನು. 1847ರಲ್ಲಿ, ಅವನ ಉತ್ತರಾಧಿಕಾರಿಯಾದ ಜೋಸ್ ಮರಿಯಾ ದೆ ಸಿಲ್ವಾ

ತೊರೆಸ್ ಈ ಕುಪ್ರಸಿದ್ಧ ಆಜ್ಞೆಯನ್ನು ಜೆಸ್ಯುಯಿಟ್ ಪಾಠಶಾಲೆಗಳಿಗೂ ವಿಸ್ತರಿಸಿದನು. 1831ರಲ್ಲಿ, ಮೊತ್ತಮೊದಲ ಬಾರಿಗೆ ಸರಕಾರದಿಂದ ರಾಷ್ಟ್ರೀಯ ಶಾಲೆಗಳು ಸ್ಥಾಪಿತವಾದಾಗ ಅದರ ಪಾಠಕ್ರಮದಿಂದ ಕೊಂಕಣಿಯನ್ನು ಉದ್ದೇಶಪೂರ್ವಕ ಹೊರತು ಪಡಿಸಲಾಯಿತು. ಅನಂತರದ ದಶಕದಲ್ಲಿ ಗೋವಾದ ಕೆಲವು ವಿದ್ಯಾ ಸಂಸ್ಥೆಗಳಲ್ಲಿ ಮರಾಠಿ, ಕನ್ನಡ, ತಮಿಳು, ಮಲಯಾಳಂ, ಹಿಂದೂಸ್ತಾನಿ ಮೊದಲಾದ ಭಾಷೆಗಳಿಗೆ ಪೀಠವನ್ನು ಸ್ಥಾಪಿಸಿದಾಗ ಇವೆಲ್ಲವುಗಳಿಗಿಂತ ಕೊಂಕಣಿ ಯನ್ನು ಉದ್ದೇಶಪೂರ್ವಕ ಹೊರಗಿಡಲಾಯಿತು. ಕೊಂಕಣಿಯು ತನ್ನದೇ ಹುಟ್ಟು ನಾಡಿನಲ್ಲಿ ಮತ್ತು ತನ್ನದೇ ಆಳುವವರಿಂದ ಇಷ್ಟೊಂದು ಕಠಿನವಾದ ಹಿಂಸೆಯನ್ನು ಅನುಭವಿಸಬೇಕಾಯಿತು.

ಇವೆಲ್ಲವುಗಳ ಪರಿಣಾಮವಾಗಿ, ಹಲವಾರು ಗೋವಾ ಕ್ರಿಶ್ಚಿಯನ್ ಕುಟುಂಬಗಳು ಪೋರ್ಚುಗೀಸ್‌ನತ್ತ ತಿರುಗಲು ಪ್ರೇರಣೆಯೊದಗಿತು. ಮತ್ತು ಇದು ಗೌರವದ ಒಂದು ಲಾಂಛನವೆಂಬಂತೆ ಪ್ರದರ್ಶಿತವಾಯಿತು. ಇದರ ವಿನಾಶಕಾರಕ ದುಷ್ಪರಿಣಾಮವೆಂದರೆ, ಕೊಂಕಣಿಭಾಷಿಗರು ಸಂಪೂರ್ಣ ಐಕ್ಯಭ್ರಷ್ಟರಾಗುವುದರ ಮೂಲಕ ಕೊಂಕಣಿಯ ಒಂದೇ ಪ್ರಮಾಣಭೂತ ಸಾಹಿತ್ಯಿಕರೂಪವು ಚೂರು ಚೂರಾಗಿ ಶಿಥಿಲವಾಯಿತು. ಈ ಭಗ್ನಾವಶೇಷದಿಂದ ಏಳು ಸಾಹಿತ್ಯಿಕ ಉಪ ಭಾಷೆಗಳು ಅಥವಾ ಭಾಷಾಪ್ರಭೇದಗಳು ಉದ್ಭವಿಸಿದವು ಮತ್ತು ಕೊಂಕಣಿಯಲ್ಲಿ ಸಾಹಿತ್ಯರಚನೆಯ ಕನಿಷ್ಠತರ ಸಂಘಟಿತಪ್ರಯತ್ನ ಹಾಗೂ ಸಂಪರ್ಕದ ವೇಳೆ, ಮೇಲೆ ಹೇಳಿದ ದಾಳಿಯ ಫಲವಾಗಿ ಚದುರಿಹೋಗಿದ್ದ ಜನವರ್ಗಗಳಲ್ಲಿ ತಮ್ಮದೇ ಆದ ಸ್ವತಂತ್ರಗತಿಯನ್ನು ಪಡೆದುಕೊಂಡವು. ಈ ಉಪಭಾಷೆಗಳು ಅಥವಾ ಭಾಷಾಪ್ರಭೇದಗಳು ಯಾವುವೆಂದರೆ, ಶಷ್ಟಿ, ಕೇರಳಿ, ಕಾರ್ವಾರಿ (ಕೊನೆಯ ಎರಡು ಕ್ರಮವಾಗಿ ದಕ್ಷಿಣ ಮತ್ತು ಉತ್ತರ ಕನ್ನಡದ ಹಿಂದೂ ಕೊಂಕಣಿಗರ ಆಡುನುಡಿ), ಬಾರ್ಹದೇಶಿ, ಮಂಗ್ಳೂರಿ (ದಕ್ಷಿಣದ ಕ್ರಿಶ್ಚಿಯನ್ ಕೊಂಕಣಿ) ಮತ್ತು ಅಂತ್ರೂಝಿ.

**ಶಷ್ಟಿ ಪ್ರಭೇದ :**

ಕೊಂಕಣಿಯು ಅನುಭವಿಸುತ್ತಿದ್ದ ಯಾತನೆಯ ಈ ಕಷ್ಟಕರ ಸಮಯದಲ್ಲೇ, ಗದ್ಯಗಳು, ನಿಘಂಟುಗಳು ಮತ್ತಿತರ ಕೊಂಕಣಿ ಬರೆಹಗಳು ಜೇಸುಯಿಟ್‌ಗಳಿಂದ ಪ್ರಕಟಿಸಲ್ಪಡುತ್ತಿದ್ದ ಸ್ಥಿತಿ ಮುಂದುವರಿದಿದ್ದರೂ, 1761ರಲ್ಲಿ ಕೆಲವು ರಾಜಕೀಯ ಕಾರಣಗಳಿಗಾಗಿ ನಿಷೇಧಾತ್ಮಕ ಆಜ್ಞೆಗಳು ತೆಗೆದು ಹಾಕಲ್ಪಡುವವರೆಗೆ ಅವುಗಳ ಉಲ್ಲಂಘನೆಯೋ ಎಂಬಂತೆ ಕೊಂಕಣಿಯು ಧಾರ್ಮಿಕ ಮತ್ತು ಲೌಕಿಕ ಗೀತೆಗಳಲ್ಲಿ ಆಶ್ರಯ ಪಡೆಯಿತು. ಹೊಸತಾಗಿ ಉದ್ಭವಿಸಿದ ಚರ್ಚುಗಳಲ್ಲಿ ಹಾಡಬೇಕಾಗಿದ್ದ 'ಒರೆಟೋರಿಯೋ'ಗಳು ಮತ್ತು

ಇತರ ಧಾರ್ಮಿಕ ಗೀತೆಗಳು ಜನರ ಭಾಷೆಯಲ್ಲೇ ರಚಿಸಲ್ಪಡಬೇಕಾಗಿದ್ದುದರಿಂದ, ಗೋವಾದ ಪ್ಯಾರಿಷ್ ಶಾಲೆಗಳಲ್ಲಿ ಆಗ ಬೋಧಿಸಲ್ಪಡುತ್ತಿದ್ದ ಇಟಲಿಯ ಬಹುಧ್ವನಿ ಸಂಗೀತವು ಯೋಗ್ಯವಾದುದಾಗಿತ್ತು ಮತ್ತು ಸುಮಾರು ಆರು ಶತಮಾನಗಳ ಹಿಂದಿನಿಂದಲೇ ವಿಕಾಸಗೊಳ್ಳುತ್ತಿದ್ದ ಕೊಂಕಣಿ ಜನಪದ ಸಂಗೀತದ ಭಾರತೀಯ ಕಾಂಡಕ್ಕೆ ಕೊಂಕಣಿಯಲ್ಲಿ ಹೊಸ ಸ್ತೋತ್ರಗೀತೆಗಳನ್ನು ರಚಿಸಲಿಕ್ಕಾಗಿ ಕೌಶಲದಿಂದ ಕಸಿ ಕಟ್ಟಲ್ಪಟ್ಟಿತು. ಹತ್ತೊಂಬತ್ತನೇ ಶತಮಾನದ ಆರಂಭಕಾಲದಲ್ಲಿ, ಮೊತ್ತ ಮೊದಲ ಬಾರಿಗೆ ಅಂತಹ ಅಸಂಖ್ಯಾತ ಸ್ತೋತ್ರಗೀತಗಳು ಗೋವಾದ ಗೀತರಚನಕಾರರಿಂದ ರಚಿಸಲ್ಪಟ್ಟವು. ವಿಕೃತ ಉದ್ವೇಗ ಮತ್ತು ಸ್ವರ್ಗೀಯ ಕಾಯಗಳ ಜೊತೆಗಿನ ಅದ್ಭುತ ಮೋಹಕ ಹಾಗೂ ಸಂತರ ಕುರಿತಾದ ಭಕ್ತಿಭಾವಗಳೇ ಅವುಗಳ ಉಜ್ವಲ ವಿಶೇಷಗುಣಗಳಾಗಿದ್ದವು. ಪ್ರಮುಖರಾದ ಸ್ತೋತ್ರಗೀತ ರಚನಕಾರರೆಂದರೆ: ಗೆತ್ಸ್‌ಮೇನ್‌ನಲ್ಲಿ ಏಸುವಿನ ಸಂಕಟವನ್ನು ಕುರಿತಾಗಿರುವ, ಅತ್ಯಂತ ಕಾರುಣ್ಯಗರ್ಭಿತವಾದ 'ರಿಗ್ಲೋ ಜೇಸು ಮೋಳಿಯಾಂತು' ಎನ್ನುವುದನ್ನು ಬರೆದ ಫಾದರ್ ಜೊಆಕ್ವಿಮ್ ದೆ ಮಿರಾಂಡಾ ಎನ್ನುವವರು ಮಂಗಳೂರಿನಲ್ಲಿ ಮಿಷನರಿಯಾಗಿದ್ದಾಗ ಬಹುಸಂಖ್ಯೆಯಲ್ಲಿ ಕೊಂಕಣಿ ಸ್ತೋತ್ರಗೀತೆಗಳನ್ನು ರಚಿಸಿದರು; ಅನುಭವಿಗಳ ಪ್ರಕಾರ ಕೊಂಕಣಿ ಸ್ತೋತ್ರಗೀತೆಗಳಲ್ಲೇ ನಾಯಕಕೃತಿಯೆಂದು ಪರಿಗಣಿತವಾದ 'ಪಾಪಿಯಾಂಚಿ ಕ್ಸೆರಾತಿನ್ನಿ' (ಪಾಪಿಗಳ ಆಶ್ರಯಸ್ಥಾನ) ಎನ್ನುವುದನ್ನು ಬರೆದ ಮಡಗಾಂವ್‌ನ ದೋನಾ ಬರ್ರೆತೊ; 'ಸಾನ್ ಫ್ರಾನ್ಸಿಸ್ಕೊ ಕ್ಸೇವಿಯೇರಾ' ಎನ್ನುವ, ಗೋವಾದ ಅತ್ಯಂತ ಜನಪ್ರಿಯ ಸ್ತೋತ್ರಗೀತೆಗಳಲ್ಲೊಂದನ್ನು ಬರೆದ ಕಾರ್ಮೊನಾದ ಫಾದರ್ ಪಾಸ್ಕೋಲ್ ದಯಾಸ್; ಮತ್ತು 'ಸಾನ್ ಜೋಸ್ ಬೊಗ್ತಾ ಬಗಿವೊಂತಾ' ಎನ್ನುವುದರ ಕರ್ತೃ ದಾವೊರ್ಲಿಮ್‌ನ ಮಾಂಡೊ ಬರೆಹಗಾರ ಕಾರ್ಲೊಸ್ ತ್ರಿಂದಾದೆ ದಯಾಸ್ ಮೊದಲಾದವರು. ಇವೆಲ್ಲ ಶಷ್ಟಿ ಪ್ರಭೇದದಲ್ಲಿದ್ದು ಮೃದುವಾದ ಹಾಗೂ ಇನಿದನಿಯ ಮಾಧ್ಯಮದ ಕೊಂಕಣಿ ಹಾಡುಗಳು ಮತ್ತು ದೈವಿಕ ಸಾಮ್ರಾಜ್ಯದಲ್ಲಿ ಕವಿತ್ವದ ಭಾವನೆಯನ್ನುಳ್ಳ ಮಹೋನ್ನತಿಯನ್ನು ಸಾಧಿಸಿದವು.

1840ನೇ ದಶಕದಲ್ಲಿ ಸ್ತೋತ್ರಗೀತಗಳ ರಚನೆಯ ಯುಗ ತನ್ನ ಶಿಖರಾವಸ್ಥೆಯನ್ನು ದಾಟುತ್ತಿದ್ದಂತೆ, ಪೋರ್ಚುಗೀಸರಿಂದ ಗೋವಾದಲ್ಲಿ ಪರಿಚಯಿಸಲ್ಪಟ್ಟ ಸಮುದಾಯ ನೃತ್ಯದ ಹೊಸ ಖಯಾಲಿಯನ್ನು ಗೋವಾದ ಜನರು ಉತ್ಸಾಹದಿಂದ ಸ್ವೀಕರಿಸತೊಡಗಿದರು.

ಪಾಶ್ಚಿಮಾತ್ಯ ಸಂಗೀತದ ಈ ಹೊಸ ಬಗೆಯ ಪಾದಚಲನೆಯ ಲಯವು ಅವರ ಮೂಲಸಂಗೀತದಲ್ಲಿ, ಸ್ತೋತ್ರಸಂಗೀತದಲ್ಲಿ ಸಹ, ಒಂದು ಬದಲಾವಣೆಯನ್ನು ತಂದಿತು. ಭೌತಿಕವಾಗಿ ಮುಖ್ಯವಾದ ಈ ಬದಲಾವಣೆಗೆ ಮೊದಲು, ಗೋವಾದ ಲೌಕಿಕಗೀತೆಗಳ ಮತ್ತು ಧಾರ್ಮಿಕ ಸ್ತೋತ್ರಗೀತಗಳ ರಚನೆಯಲ್ಲಿ ಬಹಳ ಕಾಲದಿಂದಲೂ ಸಾಮಾನ್ಯವಾಗಿ ಮೂರೂವರೆ ಚರಣಗಳ ಪದ್ಯವು

ಬಳಕೆಯಲ್ಲಿತ್ತು. ಗೋವಾದಲ್ಲಿ 1822ರ ಅನಂತರದ ಚುನಾವಣೆಗಳ ಯುಗವು ಜನರನ್ನು ರಾಜಕೀಯವಾಗಿ ಪ್ರಜ್ಞಾವಂತರನ್ನಾಗಿ ಮಾಡಿತು ಮತ್ತು ನರ್ತಿಸಲಿಕ್ಕಾಗಿ ತಮ್ಮದೇ ಆದ ಹಾಡುಗಳು ಬೇಕೆನ್ನುವ ಉತ್ಕಟೇಚ್ಛೆಯ ಸಹಜವಾದ ತುಡಿತ ವನ್ನು ಶ್ರದ್ಧೆಯಿಂದ ಪೋಷಿಸಿ ಅವರಲ್ಲಿದ್ದ ಕೆಲವು ರಚನಾತ್ಮಕ ಪ್ರತಿಭೆಯವರು 'ಮಾಂಡೊ' ಎನ್ನುವ ಒಂದು ನೃತ್ಯಪ್ರಕಾರದೊಂದಿಗೆ ಮುಂದೆ ಬರುವಂತೆ ಮಾಡಿತು. ಆಗ ಚಾಲ್ತಿಯಲ್ಲಿದ್ದ ಪರಿಸ್ಥಿತಿಯಿಂದ ನಿರೀಕ್ಷಿಸಬಹುದಾಗಿದ್ದಂತೆ, ಮೊದಲಿಗೆ ಬಂದ 'ಮಾಂಡೊ'ಗಳಲ್ಲಿ ಪ್ರಸಿದ್ಧವಾದ 'ಲ್ಯುಸಿನ್ಹ' (1854) ಎನ್ನುವುದು ಒಂದು ರಾಜಕೀಯ ಬಣ್ಣವುಳ್ಳದ್ದಾಗಿದ್ದು ಚುನಾವಣೆಯ ಸಂದರ್ಭದ ಒಂದು ದುರ್ಘಟನೆಯನ್ನು ನೆನಪಿಸುವ ಕರುಣಾರಸದಿಂದ ತುಂಬಿ ಹರಿದಿದೆ.

ಮೊದಮೊದಲ 'ಮಾಂಡೊ'ಗಳ ರಚನಕಾರರು ಕುರ್ತೊರಿಮ್‌ನ ಲಿಗಾರಿಯೊ ದ ಕೊಸ್ತಾ ಮತ್ತು ಕಾರ್ಮೊನಾದ ಕಾರ್ಲೊಸ್ ತ್ರಿಂದಾದೆ ದಯಾಸ್ ಎಂಬವರೆಂದು ತಿಳಿಯಲಾಗಿದೆ. ಅವರ ತರುಣ ಪೀಳಿಗೆಯ ಸಮ ಕಾಲೀನರೆಂದರೆ, ಪ್ರಮಾಣಭೂತವಾದ ಮಾಂಡೊ ರಚನಕಾರರಲ್ಲಿ ಶ್ರೇಷ್ಠತ್ರಯ ರೆಂದು ಪರಿಗಣಿತರಾದ ಅರ್ನಾಲ್ಡೊ ದೆ ಮೆನೆಝಸ್ (1863-1917), ಗಿಝುಲಿನೊ ರೆಬೆಲ್ಲೊ (1875-1931) ಮತ್ತು ತೊರ್ಕ್ವಾತೊ ದೆ ಫಿಗ್ವಿರೆದೊ (1876-1948). ಉಳಿದವರಿಗಿಂತ ಅರ್ನಾಲ್ಡೊ ವ್ಯಾಪಕವಾದ ದರ್ಶನ ಮತ್ತು ಅಭಿವ್ಯಕ್ತಿ ಸಾಮರ್ಥ್ಯದಿಂದ ಕೂಡಿದ ಬಹುಮುಖ ಪ್ರತಿಭೆಯವನಾಗಿದ್ದನು; ಗಿಝುಲಿನೊ, ವಾಕ್ಪ್ರವಾಹದಲ್ಲಿ ಗಹನತೆ ಮತ್ತು ಸಂವೇದನಶೀಲತೆಯನ್ನು ಹೊಂದಿದ್ದನು; ಮತ್ತು ತೊರ್ಕ್ವಾತೊ ಹೆಚ್ಚಿನ ಸಂದರ್ಭಗಳಲ್ಲಿ ಇವರಿಗಿಂತ ಹೆಚ್ಚು ಉದಾತ್ತನಾಗಿದ್ದನು. ರೈಯಾ, ಮಡಗಾಂವ್, ಕುರ್ತೊರಿಮ್, ಒರ್ಲಿಮ್ ಮತ್ತು ಕಾರ್ಮೊನಾಗಳಲ್ಲಿ ಇನ್ನೂ ಕೆಲವರು ಪ್ರಮುಖ ರಚನಕಾರರಿದ್ದರು.

ಶಿಷ್ಟ ಪ್ರಭೇದದಲ್ಲಿ ಗದ್ಯವು ಶಕ್ತಿಭರಿತವಾದುದಾಗಿರಲಿಲ್ಲ. ಆದರೂ ಈ ಮೊದಲೇ ಉಲ್ಲೇಖಿಸಿದ, ಫಾದರ್ ಪ್ಯಾಸ್ಕೋಲ್ ದಯಾಸ್ ಎನ್ನುವವನು ಬರೆದದ್ದೊಂದು ಭಕ್ತಿಸ್ವಭಾವವನ್ನು ಹೊಂದಿದ ದುರ್ಬಲವೆನ್ನಬಹುದಾದ ಕೃತಿ. ಆದರೆ ಇದರದ್ದೊಂದು ಕೊರತೆಯೇನೆಂದರೆ, ಇದು ಪೋರ್ಚುಗೀಸ್ ವಾಕ್ಯ ರಚನೆಯ ಮಾದರಿಯದ್ದು. ಇದು ಕೊಂಕಣಿಯ ಮೂಲ ಸೌಂದರ್ಯವನ್ನು ಅಂದಗೆಡಿಸಿ ಅದನ್ನು, ಆ ಭಾಷೆಯೊಳಗೆ ನುಸುಳಿದ ಕ್ರಿಶ್ಚಿಯನ್ ಶೈಲಿಯ ಬರೆವಣಿಗೆಯ ವಿಕೃತರೂಪದತ್ತ ಕೊಂಡೊಯ್ದಿತು. ಇದರ ಪರಿಹಾರಾರ್ಥವಾಗಿ 1960ರ ಅನಂತರ ಪರಿಣಾಮಕಾರಿಯಾದ ಕ್ರಮಗಳನ್ನು ಕೈಕೊಳ್ಳಲಾಯಿತು. ಆದರೆ ಈ ವೈಕಲ್ಯದ ಹೊರತಾಗಿ ಅವನ ಕೃತಿಯು ಅದರೊಳಗೆ ಪ್ರವಹಿಸುತ್ತಿದ್ದ ಆಳವಾದ ಭಾವನೆಯನ್ನು ಮತ್ತು ಕಾಲ್ಪನಿಕ ಶಕ್ತಿಯನ್ನು ಹೊರಗೆಡಹುತ್ತದೆ. ಶಿಷ್ಟ ಪ್ರಭೇದದಲ್ಲಿ ನಡೆದ ವ್ಯಾಕರಣಕ್ಕೆ ಸಂಬಂಧಪಟ್ಟ ಕೆಲಸ ತಕ್ಕಮಟ್ಟಿಗೆ

ಗಮನಾರ್ಹವಾದುದು. ಮಿಗ್ವೆಲ್ ಫಿಲಿಪ್ ದೆ ಕ್ವಾಡ್ರೋಸ್, ಫ್ರಾನ್ಸಿಸ್ಕೊ ಲೂಯಿ ಗೋಮ್ಸ್, ಬಿ. ಎಸ್. ಪಾಚೆಕೊ, ಜೆ. ಎಮ್. ದಯಾಸ್ ಮತ್ತು ಎಫ್. ಎಕ್ಸ್. ಅರಾಜೊ ಮೊದಲಾದವರಿಂದ ಪ್ರಮುಖವಾದ ಕೊಡುಗೆಗಳಾಗಿವೆ. ಆದರೆ ಶಷ್ಟಿ ಪ್ರಭೇದದ ಗದ್ಯಪ್ರಕಾರದ ಈ ಕೊರತೆ ಬಾರ್ಹದೇಶಿ ಉಪಭಾಷೆಯು ಪ್ರಬಲವಾಗುವುದಕ್ಕೆ ಅನುವಾಯಿತು. ಇದು ಪತ್ರಿಕಾಕ್ಷೇತ್ರದಲ್ಲಿ, ಕಾದಂಬರಿಯಲ್ಲಿ ಮತ್ತು ಅನಂತರ ರಂಗಭೂಮಿಯಲ್ಲಿ ಗೋವಾದ ಕ್ರಿಶ್ಚಿಯನರಿಗೆ ಸಾಹಿತ್ಯ ಅಭಿವ್ಯಕ್ತಿಯ ಸಾಮಾನ್ಯ ಮಾಧ್ಯಮವಾಯಿತು.

**ಕೇರಳಿ ಉಪಭಾಷೆ :**

ಪೋರ್ಚುಗೀಸರಿಂದ ಭ್ರಮನಿರಸನಗೊಂಡು ಮಾಳ ಪೈ ಮತ್ತು ಅವನ ಅನುಚರರು ಗೋವಾದಿಂದ ಹೊರಡುವುದರೊಂದಿಗೆ ಸುಮಾರು 1560ರ ವೇಳೆಗೆ, ಅಲ್ಲಿಂದ ಕೇರಳಕ್ಕೆ ಮುಖ್ಯವಾಗಿ ಕೊಚ್ಚಿ ಮತ್ತದರ ಸುತ್ತಮುತ್ತಣ ಪ್ರದೇಶಕ್ಕೆ ಪ್ರಥಮ ವಲಸೆ ಆಯಿತು. ಅನಂತರ, 1560ರಲ್ಲಿ ಗೋವಾದ ವಿಚಾರಣಾಲಯದ ಸ್ಥಾಪನೆ ಮತ್ತು ಪೀಡನೆಯಿಂದಾಗಿ ಅಲ್ಲಿಂದ ನಿರ್ಗಮಿಸಿದ ಗೋವಾ ಹಿಂದುಗಳ ತಂಡ 1563ರಲ್ಲಿ ಈ ಪಟ್ಟಣವನ್ನು ತಲಪಿತು. ಹದಿನೇಳನೇ ಶತಮಾನದ ವೇಳೆಗೆ ಕೊಂಕಣಿಗರು ಕೇರಳದಲ್ಲಿ ಭದ್ರವಾಗಿ ನೆಲೆಗೊಂಡರು ಮತ್ತು ತಮ್ಮ ಕೊಂಕಣಿ ಬರೆಹಗಳಿಗೆ ಮಲಯಾಳಂ ಲಿಪಿಯನ್ನೇ ಸ್ವೀಕರಿಸಿದರು.

ನಮ್ಮ ಗಮನಕ್ಕೆ ಬಂದಿರುವಂತೆ, ಈ ಜನವರ್ಗದಿಂದ ಬಂದ ಮೊದಲ ದಾಖಲೆಯೆಂದರೆ, ಎಪ್ರಿಲ್ 20, 1675ಕ್ಕೆ ಸೇರಿದ ಬಹಳ ಪಕ್ವವಾದ ಕೊಂಕಣಿ ನೋಟರಿ ಗದ್ಯ. ಹೆನ್ರಿಕ್ ವಾನ್ ರ್‍ಹೀದ್ ಎನ್ನುವ ಡಚ್ ಒಬ್ಬನು ಭಾರತೀಯ ಔಷಧೀಯ ಸಸ್ಯಗಳ ಬಗ್ಗೆ 'ಹೋರ್ಟಸ್ ಇಂಡಿಕಸ್ ಮಲಬಾರಿಕಸ್' ಎನ್ನುವ ಬಹಳ ಪ್ರಮುಖವಾದ ಗ್ರಂಥವನ್ನು ತಯಾರಿಸಿದ್ದನು. ಅದರ ಸಂಕಲನದ ಅಂಗೀಕಾರಾರ್ಹತೆಯನ್ನು ಶ್ರುತಪಡಿಸಲಿಕ್ಕಾಗಿ ಅವನಿಗೆ ಸಕ್ರಿಯವಾಗಿ ಸಹಕರಿಸಿದ ರಂಗ ಭಟ್ಟ, ಅಪು ಭಟ್ಟ ಮತ್ತು ವಿನಾಯಕ ಪಂಡಿತ ಎಂಬ ಕೊಚ್ಚಿಯ ಮೂವರು ಕೊಂಕಣಿ ವೈದ್ಯರ ಸಹಿಗಳು ಇದರಲ್ಲಿವೆ. ಈ ಪ್ರಮಾಣಪತ್ರವು ಕೊಂಕಣಿಯಲ್ಲಿದ್ದು ದೇವನಾಗರಿಲಿಪಿಯಲ್ಲಿ ಬರೆಯಲ್ಪಟ್ಟಿದೆ ಮತ್ತು ಕೆಳಗೆ ಅದರ ಲ್ಯಾಟಿನ್ ಅನುವಾದವೂ ಇದೆ. ಅವರ ಇತರ ಕೃತಿಗಳ ದಾಖಲೆಗಳು ಏನಾದರೂ ಇದ್ದರೂ ಇದುವರೆಗೆ ಸಿಕ್ಕಿಲ್ಲ.

ಹಾಗಿದ್ದರೂ, ಜೋನ್ ಲೆಯ್ಡನ್ ಎನ್ನುವ ವಿದ್ವಾಂಸ ತನ್ನ ಸಂಶೋಧನೆಯ ಪಥದಲ್ಲಿ ಕೆಲವು ಕೊಂಕಣಿ ಗದ್ಯಗಳನ್ನು ಒದಗಿಸಿದ್ದಾನೆ. ಅವುಗಳಲ್ಲಿ 'ಭಾಗವತ', 'ಲಿಂಗಪುರಾಣ', 'ರಾಮಾಯಣ', 'ಮಹಾಭಾರತ'

ಮತ್ತು ಸಂಸ್ಕೃತದ ಇತರ ಅನೇಕ ಕೃತಿಗಳ ಭಾಷಾಂತರಗಳೂ 'ವೀರಭದ್ರ ಚರಿತ್ರ', 'ಪರಶುರಾಮಚರಿತ್ರ' ಗಳಂತಹ ಅವನ ಸ್ವತಂತ್ರ ಕೃತಿಗಳೂ ಸೇರಿವೆ. ಅಲ್ಲದೆ, ಸ್ಥಳೀಯ ಇತಿಹಾಸಗಳು ಮತ್ತು ದೇವಸ್ಥಾನಗಳ 'ಸ್ಥಳಪುರಾಣಗಳು', ಇತರ ಕುತೂಹಲಕರ ಗದ್ಯಕೃತಿಗಳು ಮತ್ತು ಕೇರಳದ ದೇವಸ್ಥಾನಗಳ ವಶದಲ್ಲಿರ 'ಬಹುದಾದ ಇನ್ನಿತರ ಬರೆಹಗಳನ್ನೂ ರಚಿಸಿದ್ದಾನೆ. ಅಸಂಖ್ಯಾತ ಹಳೆಯ ಹಾಡುಗಳು – ಅವುಗಳಲ್ಲಿ ಕೆಲವು ಗಮನಾರ್ಹವಾದ ಕಲ್ಪನಾ ಸಾಮರ್ಥ್ಯದ್ದಾಗಿವೆ – ಅದೇ ರೂಪದಲ್ಲಿ ಇನ್ನೂ ಕೊಂಕಣಿಯಲ್ಲಿ ಹಾಡಲ್ಪಡುತ್ತದೆ. ಅವುಗಳು ಕೊಂಕಣಿ ಸಂತ (ಭಕ್ತಿ) ಕಾವ್ಯಕ್ಕೆ ಸೇರಿದವಾಗಿದ್ದು ಬಹುಶಃ ಕರ್ಣಾಟಕದಲ್ಲಿ ನೆಲಸಿದ ಹಿಂದುಗಳ ನಡುವೆ ಸೊಂಪಾಗಿ ಬೆಳೆದಿವೆ.

ಕೇರಳದಲ್ಲಿ, ಕೊಂಕಣಿಯಲ್ಲಿ ರಚಿತವಾದ ಅನಂತರಕಾಲದ ಸಾಹಿತ್ಯವೆಂದರೆ ಅಲ್ಲಲ್ಲಿ ಚದುರಿಹೋದ ಕೊಂಕಣಿಭಕ್ತರಿಂದ ಬರೆಯಲ್ಪಟ್ಟದ್ದು. ಅಂತಹವರಲ್ಲಿ, ಕಣ್ಣಾನೂರಿನ ವಿ. ಗಣೇಶ ಪ್ರಭು, ಆಲೆಪ್ಪಿಯ ಜಿ. ಕಮಲಮ್ಮಾಳ್, ಎರ್ಣಾಕುಲದ ಎನ್. ಎನ್. ಪೈ, ಪಳ್ಳಿಪೋರ್ಟ್‌ನ ಆರ್. ಸಿ. ಶರ್ಮಾ, ಕವಯಿತ್ರಿ ಅಮುಲಾ ಶೆಣೈ ಮೊದಲಾದವರು. ಈ ಪ್ರಭೇದದಲ್ಲಿ ಬರೆದ ಇತರ ಕೆಲವರೆಂದರೆ ಕೊಚ್ಚಿಯ ಸಿ. ಎನ್. ಮಲ್ಯ, ಆಲೆಪ್ಪಿಯ ವೇದಾವತಿ ಶೆಣೈ ಮೊದಲಾದವರು. ಇವರೆಲ್ಲ ಸಾಹಿತ್ಯದ ಹಲವು ಪ್ರಕಾರಗಳಲ್ಲಿ ಬರೆದರು. ಪಿ. ಮಲ್ಯ ಎನ್ನುವವರು ಪ್ರಮುಖ ನಾಟಕಕಾರರಲ್ಲಿ ಒಬ್ಬರು.

**ಕೊಡಿಯಾಳಿ ಮತ್ತು ಕಾರ್ವಾರಿ ಪ್ರಭೇದಗಳು :**

ಗೋವಾದಲ್ಲಿ ಕ್ರಿಶ್ಚಿಯನ್ ಮತ ಸಂಬಂಧೀ ಸಾಹಿತ್ಯವು ಕೊಂಕಣಿಯಲ್ಲಿ ಸುಮಾರು 45ಕ್ಕೆ ಕಡಮೆ ಇಲ್ಲದಂತೆ ಉತ್ಕೃಷ್ಟ ಕೃತಿಗಳನ್ನು ಉತ್ಪಾದಿಸಿದ ಸಮಯದಲ್ಲಿ, ಗೋವಾದ ಕುಠಲ್ ಮತ್ತು ಸುತ್ತಮುತ್ತಲಿನ ಗ್ರಾಮಗಳಿಂದ ಬಂದ, ಕರ್ಣಾಟಕದಲ್ಲಿ ನೆಲಸಿದ ವಲಸಿಗರು ಒಂದು ಗಮನಾರ್ಹ ಪ್ರಮಾಣದಲ್ಲಿ 'ಸಂತ ಸಾಹಿತ್ಯ'ವೆನ್ನುವ ಹಿಂದೂ ಕೊಂಕಣಿ ಸಾಹಿತ್ಯವನ್ನು ಸೃಷ್ಟಿಸಿದರು. ಅವರ ಹೊಸ ನೆಲಸುನಾಡು ಮಂಗಳೂರು ಮತ್ತದರ ಸುತ್ತಮುತ್ತಲಿನ ಪ್ರದೇಶ. ಇದನ್ನು ಕೊಡಿಯಾಲ ಎಂದೂ ಕರೆಯುತ್ತಿದ್ದುದರಿಂದ ಅವರು ಬರೆದ ಕೊಂಕಣಿ ಪ್ರಭೇದಕ್ಕೆ ಆ ಹೆಸರು ಬಂತು. ಅವರು, ಇಕ್ಕೇರಿ ಅರಸರ ಆಶ್ರಯದಲ್ಲಿ, ಅದರಲ್ಲೂ 1696-1714ರ ನಡುವೆ ಆಳಿದ ಒಂದನೇ ಬಸಪ್ಪ ನಾಯಕನ ಆಡಳಿತಾವಧಿಯಲ್ಲಿ ಪ್ರವರ್ಧಮಾನಕ್ಕೆ ಬಂದರು.

ಇದು ಚೆನ್ನಾಗಿ ವಿಕಸಿತವಾದುದು 17ನೇ ಶತಮಾನದ ಇಬ್ಬರು ಸಂತ ಕವಯಿತ್ರಿಗಳ ಭಕ್ತಿಕಾವ್ಯಗಳಲ್ಲಿ. ಅವರಿಬ್ಬರಲ್ಲಿ ಒಬ್ಬಾಕೆ, ಸಂತ ಅವಡಿ ಬಾಯಿ ಯಾನೆ ಲಕ್ಷ್ಮೀಬಾಯಿ ನಾಡಕರ್ಣಿ (ಇವರ ಗಂಡ ಅನಂತರ ಬಿದನೂರು ಪ್ರಾಂತದ

ದಿವಾನರಾದರು) ಮತ್ತು ಇನ್ನೊಬ್ಬಳು ಹೆಮ್ಮಾಡಿಯ ಸಂತ ಜೋಗವ್ವ ಅಥವಾ ಜೋಗ್ನಾನಿ. ಇದೇ ಶತಮಾನದ ಬೈಲೂರಿನ ಸಂತ ಸಮರ್ಥ ಅಪ್ಪಯ್ಯ ನಾಡಗಾರ್‌ನ ಭಕ್ತಿ, ಜ್ಞಾನ ಮತ್ತು ವೈರಾಗ್ಯಗಳಿಂದ ಕೂಡಿದ ಮಹೋನ್ನತ ಗೀತಗಳು ಬಹಳ ಜನಪ್ರಿಯವಾಗಿದ್ದವು.

19ನೇ ಶತಮಾನದ ಆರಂಭಕಾಲದಲ್ಲಿ ಅಂತರವಳ್ಳಿಯ ಸಂತ ನಾಯಕ ಸ್ವಾಮಿಯು ಶಿವಗೀತೆಯನ್ನು ಬರೆದಿದ್ದಾನೆ ಮತ್ತು ಗೋವಾದಲ್ಲಿ ಮಂಗೇಶಿ ಪಲ್ಲಕಿಯ ಸಂದರ್ಭದಲ್ಲಿ ಸ್ತುತಿಸುವ 'ಝುಲವೆ' ಎನ್ನುವ ಸ್ತೋತ್ರಗೀತಗಳನ್ನು ರಚಿಸಿದ್ದಾನೆ. ಈ ಗುಂಪಿನ ಇನ್ನೊಬ್ಬ ಪ್ರಮುಖ ಭಕ್ತಕವಿ ರಾಘವೇಂದ್ರ ದಾಸ. ಇದನ್ನನುಸರಿಸಿ 19 ಮತ್ತು 20ನೇ ಶತಮಾನಗಳಲ್ಲಿ ಕರ್ಣಾಟಕದಲ್ಲಿ ಕೊಂಕಣಿ ಹಿಂದುಗಳಿಂದ ವಿಪುಲವಾಗಿ ಕೊಂಕಣಿ ಕಾವ್ಯಕುಸುಮಗಳು ಬಂದವು. ವೇದಾಂತ ಗೀತಗಳಲ್ಲಿ ಶಿವರಾಮಾಶ್ರಮ ಸ್ವಾಮಿಗಳು, ಶ್ರೀಕೃಷ್ಣನನ್ನು ಕುರಿತಾದ ಮನೋಹರ ಗೀತಗಳಲ್ಲಿ ಸಂತ ಸಹಜಾನಂದರು ಸಂಭ್ರಮಿಸಿದರು; ಪಂಡಿತ ಮಂಗೇಶ ಆರ್. ತೆಲಂಗ (1859-1949) ಭಗವದ್ಗೀತೆಯನ್ನು ಪದ್ಯರೂಪಕ್ಕೆ ತಂದರು. ಬಿ. ಎನ್. ಕಮ್ತಿ (1872-1918), ಬಿ. ಕೆ. ಪ್ರಭು ಮತ್ತು ವಿಪುಲ ಕೊಂಕಣಿ ಕಾವ್ಯಗಳನ್ನು ಪ್ರಕಟಿಸುವ 'ಪಂಚ್ಕಾದಾಯ್'ಯ ಸಂಪಾದಕರಾದ ಬಿ. ವಿ. ಬಾಳಿಗ 'ಸಮಶ್ಲೋಕಿ'ಯಲ್ಲಿ ಭಗವದ್ಗೀತೆಯನ್ನು ಕೊಂಕಣಿ ಕಾವ್ಯರೂಪಕ್ಕಿಳಿಸಿದರು. ಬಿ. ಕೆ. ಪ್ರಭು ಹಲವು ಕೊಂಕಣಿ ಭಕ್ತಿಗೀತೆಗಳನ್ನು ಸಹ ಬರೆದಿದ್ದಾರೆ.

ಸೂರ್ಕುಂಡ ಅಣ್ಣಾಜಿ ರಾವ್ ಎನ್ನುವವರು ಕೊಂಕಣಿಯನ್ನು ಗೀತನಾಟಕಗಳಲ್ಲಿ ಉಪಯೋಗಿಸಿದರು ಮತ್ತು ಯಕ್ಷಗಾನದಲ್ಲಿ ಕೊಂಕಣಿಯನ್ನು ಬಳಸಿದವರಲ್ಲಿ ಬಹುಶಃ ಇವರೇ ಮೊದಲಿಗರು. ಶ್ರೀನಿವಾಸ ಪ್ರಭು ರಚಿಸಿದ 'ಶೋಭಾನೆ' ಎನ್ನುವ ಕೆಲವು ಮದುವೆ ಹಾಡುಗಳು ಈಗಲೂ ಜನಪ್ರಿಯವಾಗಿವೆ. ಕನ್ನಡದ ಕವಿಪುಂಗವರಾದ ಎಮ್. ಗೊವಿಂದ ಪೈಯವರು ತಮ್ಮ ಮಾತೃಭಾಷೆ ಕೊಂಕಣಿಯಲ್ಲೂ ಆಗಾಗ ಬರೆಯುತ್ತಿದ್ದರು ಮತ್ತು ಅವು ಕೊಂಕಣಿಸಮಾಜದ ಮುಖವಾಣಿಯಾದ 'ಸಾರಸ್ವತ'ದಲ್ಲಿ ಪ್ರಕಟವಾಗುತ್ತಿದ್ದವು. ಅವರು ಠಾಗೋರರ 'ಗೀತಾಂಜಲಿ'ಯ ಒಂದು ಭಾಗವನ್ನು ಕೊಂಕಣಿಗೆ ಭಾಷಾಂತರಿಸಿದ್ದರು. ಹಾಸ್ಯ ಹಾಗೂ ಕಲ್ಪನಾವಿಲಾಸದ ದಿನಕರ ದೇಸಾಯಿಯವರು ಆಗಾಗ ಕೊಂಕಣಿ ನಿಯತಕಾಲಿಕಗಳಲ್ಲಿ ಪ್ರಕಟಿಸುತ್ತಿದ್ದರಲ್ಲದೆ, ಅವರ 'ದಿನ್ಕರಲಿಂ ಕೋವ್ಣಮ್' ಮೊದಲಿಗೆ 1981ರಲ್ಲಿ ಪ್ರಕಟವಾಗಿದ್ದರೂ ಮೋಹಕವಾದ ಹಾಡುಗಳಿಂದ ಕೂಡಿ ದೇವನಾಗರೀಲಿಪಿಯಲ್ಲಿ ಇತ್ತೀಚೆಗೆ ಹೊರಬಂತು. ಉಮಾನಾಥ ಡೊಂಗರಕೇರಿ, ಮುರಳೀಧರ ಹಟ್ಟಿಯಂಗಡಿ ಇವರುಗಳು ಮುಂಬಯಿಯಲ್ಲಿ ಮುನ್ನಡೆಯಲ್ಲಿರುವ ಕೊಂಕಣಿ ನಾಟಕಕಾರರು.

ಗದ್ಯದಲ್ಲಿ, ಹದಿನೇಳು ಹದಿನೆಂಟನೇ ಶತಮಾನಗಳಲ್ಲಿ ಕಾರವಾರದಲ್ಲಿ ಇತರರೊಡನೆ ಮುಂದಕ್ಕೆ ಬಂದ ನಾರಾಯಣತೀರ್ಥರು ಪ್ರಸಿದ್ಧವಾದ 'ಮನ-ಇಂದ್ರಿಯಾಲೆಂ ಚರಿತ್ರ'ವನ್ನು ಬರೆದರು. ಇತ್ತೀಚೆಯದ್ದೆಂದರೆ, ಹರಿಶಂಕರ ಗುಲ್ವಾಡಿಯವರ 'ಹರಿಕೀರ್ತನ್ ಸಾಮರ್ಥ್ಯಾಚೆಂ ಸಾಮರ್ಥ್ಯ' ಮತ್ತು 'ವಿವೇಕ ರತ್ನಾಕರ'; ಹಾಗೂ ಪಡುಕೋಣೆ ಮತ್ತು ವೆಂಕಟರಾವ್ ನರಹರಿ ಕವಿಯ ಕವಿತಾಸಂಕಲನಮಾಲೆ. ಚಿತ್ರಾಪುರದ ಸ್ವಾಮಿಗಳು ತಮ್ಮ ಬರೆವಣಿಗೆಗಳ ಮೂಲಕ ಕೊಂಕಣಿಯ ಬೆಳವಣಿಗೆಗೆ ಯಥಾಶಕ್ತಿಯಾಗಿ ತಮ್ಮ ಕೊಡುಗೆಗಳನ್ನಿತ್ತಿದ್ದಾರೆ. ಅವರು ದೀಪಾವಳಿಯ ಸಂದರ್ಭಗಳಲ್ಲಿ ನೆರೆದವರನ್ನು ಉದ್ದೇಶಿಸಿ ಸೊಗಸಾದ ಕೊಂಕಣಿಯಲ್ಲಿ ಮಾಡಿದ ಭಾಷಣಗಳ ಸಂಗ್ರಹವು 1959ರಲ್ಲಿ ಪುಸ್ತಕರೂಪದಲ್ಲಿ ಹೊರಬಂತು. ಇದು ಕೊಂಕಣಿಯಲ್ಲಿ ಬಂದ ಸ್ಫೂರ್ತಿದಾಯಕ ಆಧ್ಯಾತ್ಮಿಕಗದ್ಯದ ಒಂದು ಪ್ರಾತಿನಿಧಿಕ ನಿದರ್ಶನ.

**ಮಂಗ್ಳೂರಿ ಪ್ರಭೇದ :**

ಕ್ಷಾಮ, ಸಾಂಕ್ರಾಮಿಕ ರೋಗ ಮತ್ತು ಗೋವಾಕ್ಕೆ ಮರಾಠರ ದಾಳಿ ಮೊದಲಾದ ಪ್ರಮುಖ ಕಾರಣಗಳಿಂದ 17 ಮತ್ತು 18ನೇ ಶತಮಾನಗಳಲ್ಲಿ ಗೋವಾವನ್ನು ತೊರೆದ ಕ್ರಿಶ್ಚಿಯನ್ ವಲಸೆಗಾರರು ಕರ್ನಾಟಕದ ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಬಂದು ನೆಲಸಿದರು. ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರಿನಲ್ಲಿ ಬಂದು ನೆಲಸಿದವರು ಮೊದಲು ಅನೇಕ ತೊಂದರೆಗಳನ್ನೆದುರಿಸ ಬೇಕಾಯಿತು ಮತ್ತು ಅನಂತರ ಅವರು ಕ್ರಿಶ್ಚಿಯನರೆಂಬುದರಿಂದ ಬ್ರಿಟಿಷರ ಪರ ಇರಬಹುದೆಂದು ಭಾವಿಸಿ ದುರ್ಜಯನೂ ಅಷ್ಟೇ ಕ್ರೂರಿಯೂ ಆದ ಟಿಪ್ಪು ಸುಲ್ತಾನನು ಅವರನ್ನು ಬಂಧಿಸಿ ಶ್ರೀರಂಗಪಟ್ಟಣದ ಸೆರೆಮನೆಗಳಿಗೆ ತಳ್ಳಿದನು. ಅವರಲ್ಲಿ ಹೆಚ್ಚಿನವರು ಮಾರಾಣಾಂತಿಕ ಹಿಂಸೆಗೀಡಾಗಿ ಸಾವನ್ನಪ್ಪಿದರೂ ಆ ಭಯಾನಕ ಕೃತ್ಯಕ್ಕೊಳಗಾಗಿ ಬದುಕಿ ಉಳಿದವರು ತಮ್ಮ ಅಳಲನ್ನು ಬರೆವಣಿಗೆಗಳ ಮೂಲಕ ಹೊರಗೆಡಹಲು ಹುರುಪು ಮತ್ತು ಅತ್ಯಾತುರ ತೋರಿದ್ದರು. ಆ ಬರೆಹಗಳು ಹೃದಯವಿದ್ರಾವಕವಾಗಿವೆ. ಕಾಕತಾಳೀಯವೆಂಬಂತೆ, ಫಾದರ್ ಜೊಆಕ್ವಿನ್ ಮಿರಾಂಡನ 'ರಿಗ್ಲೋ ಜೇಸು ಮೊಳಿಆಂತು' ಎನ್ನುವುದು ಅವನ ಸಮುದಾಯದ ಮೇಲೆರಗಲಿದ್ದ ಈ ವಿಪತ್ತನ್ನು ಅಹಿತಕರ ಪೂರ್ವಸೂಚನೆಯಿಂದ ಎಚ್ಚರಿಸಿತ್ತು.

ಇತಾಲಿಯನ್ ಸಮುದಾಯದ ಮಿಶನರಿಗೆ ಸೇರಿದ ಫ್ರೈ ಫ್ರಾನ್ಸಿಸ್ಕೊ ದೆ ಸಾಂತ ಅನಾ ಎನ್ನುವ ಸ್ವೀಕೃತ ನಾಮದಿಂದಲೇ ಪ್ರಸಿದ್ಧನಾದ ಫಾದರ್ ರಫೆಲ್ ಪೆಸ್ಕೆತಿ (1771-1844) ಎಂಬಾತನ ವ್ಯಾಕರಣಗ್ರಂಥವು 1832ರಲ್ಲಿ ಪ್ರಕಟ ವಾಗುವುದರೊಂದಿಗೆ ಈ ಕೊಂಕಣಿಗರಲ್ಲಿ ಗಂಭೀರವಾದ ಸಾಹಿತ್ಯಕೃತಿಗಳ ಸೃಷ್ಟಿ

ಕಾರ್ಯ ಶ್ರದ್ಧಾಪೂರ್ವಕವಾಗಿ ಆರಂಭವಾಯಿತು. ಇವನನ್ನನುಸರಿಸಿ ಇನ್ನೊಬ್ಬ ಇತಾಲಿಯನ್ ಮಿಶಿನರಿಯಾಗಿದ್ದ, ಹೆಸರಿನಿಂದ ಜೇಸುಯಿಟ್ ಆಗಿದ್ದ ಫಾದರ್ ಅಂಜೆಲೊ ಮಫ್ಫೆಯ್ ತಾನು ಉಪಯೋಗಿಸುತ್ತಿದ್ದ ಕೊಂಕಣಿಯ ಸೌಂದರ್ಯದ ಬಗ್ಗೆ ಅಬ್ಬರದಿಂದ ಬರೆದು ಮಂಗಳೂರಿನಲ್ಲಿ ಕೊಂಕಣಿ ಸಾಹಿತ್ಯದ ಸೃಷ್ಟಿಗೆ ಒಂದು ಬಲವಾದ ಚಾಲನೆ ಒದಗಿಸಿದ. ಆದರೆ ಮಫ್ಫೆಯ್ ಮಂಗಳೂರಿಗೆ ಬರುವುದಕ್ಕೆ ಮೊದಲೇ ಸೆರಂಪುರ, ಬಂಗಾಳಗಳಲ್ಲಿ ಬಾಪ್ಟಿಸ್ಟ್ ಮಿಶನರಿಯಾಗಿದ್ದ ವಿಲಿಯಂ ಕ್ಯಾರೆ ದಕ್ಷಿಣೋತ್ತರ ಕನ್ನಡ ಜಿಲ್ಲೆಗಳ ಇಬ್ಬರು ಪಂಡಿತರುಗಳ ಸಹಾಯದಿಂದ ಈ ದಾಕ್ಷಿಣಾತ್ಯ ವಲಸೆಗಾರರ ಆಡುನುಡಿಯಲ್ಲಿ ಒಂದು ಪ್ರಮುಖವಾದ ಗದ್ಯಕೃತಿಗೆ ತಾನು ಅಂತಿಮರೂಪವನ್ನು ಕೊಡುತ್ತಿದ್ದ. ಇದು ಹಳೆ ಒಡಂಬಡಿಕೆಯ ಮೊದಲ ಐದು ಪ್ರಕರಣಗಳನ್ನು (ಪೆಂಟಟ್ಯೂಕ್) ಹಾಗೂ ಹೊಸ ಒಡಂಬಡಿಕೆಯನ್ನು ಒಳಗೊಂಡಿತ್ತು. ಮತ್ತು ಮಹತ್ವಪೂರ್ಣವಾಗಿ 'ಧರ್ಮಲಿಂ ಪುಸ್ತಕ್' ಅಥವಾ 'ದೇವ–ಗೆಲಿಂ ಸಗ್ಲಿಂ ಉತ್ರಂ' ಎಂದು ನಾಮಕರಣಗೊಂಡಿತ್ತು.

ಮಂಗಳೂರಿನಲ್ಲಿ ಸೈಂಟ್ ಎಲೋಶಿಯಸ್ ಕಾಲೇಜನ ಸ್ಥಾಪನೆ ಮತ್ತು ಕೊಡಿಯಾಲಬೈಲಿನಲ್ಲಿ ಜೇಸುಯಿಟ್‌ಗಳಿಂದ ಒಂದು ಮುದ್ರಣಾಲಯದ ಸ್ಥಾಪನೆಯಾಗುವುದರೊಂದಿಗೆ ಗಂಭೀರವಾದ ರಚನಾತ್ಮಕ ಸಾಹಿತ್ಯ ಮಾಧ್ಯಮವಾಗಿ ಮಂಗಳೂರಿನಲ್ಲಿ ಕೊಂಕಣಿಯ ಪುನಶ್ಚೇತನಕ್ಕೆ ಮೊದಲಾಯಿತು. ಕೊಂಕಣಿಗೆ ಪ್ರಾಮಾಣಿಕವೂ ಸಕಾಲಿಕವೂ ಆದ ಸೇವೆಯನ್ನು ಮಾಡಿದ ಈ ಮಿಶನರಿಗಳು ಕೊಂಕಣಿಯನ್ನು ಸಾಹಿತ್ಯಕೃತಿಗಳಲ್ಲಿ ಇನ್ನಷ್ಟು ಹೆಚ್ಚು ಉಪಯೋಗಿಸುವಂತೆ ಅವರ ವಿದ್ಯಾರ್ಥಿಗಳನ್ನು ಪ್ರಚೋದಿಸಿದರು. ಅವರ ವಿದ್ಯಾರ್ಥಿಗಳ ಪ್ರತಿಭಾವಂತ ಸಮೂಹದಲ್ಲಿ ಮೊದಲ ಸ್ಥಾನದಲ್ಲಿದ್ದವನು ನಾಟಕಕಾರನೂ ಆಧ್ಯಾತ್ಮಿಕ ಲೇಖಕನೂ ಆಗಿದ್ದ ಬಿ. ಕೆ. ಪ್ರಭು. ಆತ, ಅನ್ಯ ವಿಚಾರಗಳ ನಡುವೆ, 'ಚಂದ್ರಹಾಸ ನಾಟಕ' (1912), 'ಪ್ರಹ್ಲಾದ ಚರಿತ್ರ ನಾಟಕ'ಗಳನ್ನಲ್ಲದೆ ಈ ಮೊದಲೇ ತಿಳಿಸಿದಂತೆ ಹಲವು ಭಕ್ತಿ ಕಾವ್ಯಗಳನ್ನು ಬರೆದಿದ್ದಾನೆ. ಆತನ ಸಮ ಕಾಲೀನರೆಂದರೆ 'ಸಾವಿತ್ರಿ ನಾಟಕ'ವನ್ನು(1912) ಬರೆದ ಕುಂಬ್ಳೆ ಎನ್. ನಾಯಕ್, 'ವಜ್ರಕುಟ್ಕಂ' ನಾಟಕವನ್ನು(1914) ಬರೆದ ಡೊಂಗರಕೇರಿ ಉಮಾನಾಥ ರಾವ್ (1898-1967). 'ವಜ್ರಕುಟ್ಕಂ' ನಾಟಕ ಸಾಮಾಜಿಕ ವಸ್ತುವನ್ನು ಹೊಂದಿದ್ದು, ಮುಂಬಯಿಯಲ್ಲಿ ಪ್ರದರ್ಶಿತವಾದ, ಮಿತಿಮೀರಿದ ಪ್ರತಿಕ್ರಿಯೆಗಳನ್ನು ಗಳಿಸಿದ ಆ ಕಾಲದ ಅತ್ಯುತ್ತಮ ನಾಟಕಗಳಲ್ಲೊಂದು.

ಮಾರ್ಗಪ್ರವರ್ತಕನಾದ ದೇವರಾಯು ಬೈಂದೂರು, ಹೆಚ್ಚು ಮುಂದವರಿದ ಸಾಹಿತ್ಯಗಳ ಕೆಲವು ಮೂಲ ಅಂಶಗಳನ್ನು ಮತ್ತು ವಸ್ತುಗಳನ್ನು ತೆಗೆದುಕೊಂಡು ತನ್ನದೇ ಆದ ಪಾತ್ರವರ್ಗವನ್ನೂ ಸಂಭಾಷಣೆಯನ್ನೂ ಸೃಷ್ಟಿಮಾಡಿ ಆಧುನಿಕ ಕೊಂಕಣಿ ನಾಟಕಗಳಲ್ಲಿ ಸತ್ತ್ವಪೂರ್ಣವಾದ ಕೆಲಸ ಮಾಡಿದನು. ಕೊಡಿಯಾಳಿ

ವಿಭಾಗಕ್ಕೆ ಸೂರ್ಕುಂಡ ಅಣ್ಣಾಜಿಯ ಕೊಡುಗೆಯನ್ನು ಈಗಾಗಲೇ ಪ್ರಸ್ತಾವಿಸಲಾಗಿದೆ. ಕೊಂಕಣಿಯಲ್ಲಿ ನಾಟಕಗಳನ್ನು ಬರೆದ ಮಂಗಳೂರ ಹಿಂದುಗಳಲ್ಲಿ ಪ್ರಮುಖರಾದ ಇತರರೆಂದರೆ ಕಲ್ಯಾಣಪುರ ಎನ್. ಭಟ್ಟ, ಪಿ. ಮುಡೂರು, ಮಿತ್ರಾಬಾಯಿ ಕಬಡ್, ವೆಂಕಟರಾವ್ ತಲಗೇರಿ, ವಿ.ಬಿ. ಶಾನುಭೋಗ ಮತ್ತು ಆರ್. ಡಿ. ಕಾಮತ್.

1912ರಲ್ಲಿ ಸರ್ದಾರ್ ಕಣ್ಣಪ್ಪ ಮತ್ತು ಪ್ರಸಿದ್ಧ ಕವಿ ಲೂಯಿ ಮಸ್ಕರೇನ್ಹಸ್ ಅವರಿಂದ 'ಕೊಂಕಣಿ ದಿರ್ವೆಮ್' (ನಿಧಿ) ಸ್ಥಾಪನೆಯಾದುದು ಕರ್ಣಾಟಕದಲ್ಲಿ ಕೊಂಕಣಿ ಸಾಹಿತ್ಯದ ಪುನರುತ್ಥಾನಕ್ಕೆ ಅತ್ಯಂತ ಹೆಚ್ಚಿನ ಪ್ರಚೋದನೆಯನ್ನೊದಗಿಸಿತು; ಅವುಗಳಲ್ಲಿ ಗಮನಾರ್ಹವಾದ ಒಂದು ಭಾಗ ಬಹಳ ಮೇಲ್ಮಟ್ಟದ್ದು. ಆತನೊಂದಿಗೆ ಅಸಂಖ್ಯಾತ ಮಂದಿ ಬರೆಹಗಾರರು, ಕವಿಗಳು, ಸಣ್ಣಕತೆಗಾರರು ಮತ್ತು ಕಾದಂಬರಿಕಾರರು ಏಳ್ಗೆವಡೆದರು. ಮುಖ್ಯವಾಗಿ ಫಾದರ್ ಲೂಯಿ ಬೊತೆಲ್ಲೊ, ಕವಿಗುರು ಮತ್ತು ಕುಶಲಕಲೆಗಾರ ಫಾದರ್ ಎ.ಜೆ. ಡಿ'ಸೋಜಾ, ಸಿ. ಎಫ್. ಡಿ'ಕೊಸ್ಟಾ ಮತ್ತು ಜೆ. ಬಿ. ಮೊರೆಸ್ ಮೊದಲಾದವರು ಮೊದಲ ಗುಂಪಿನಲ್ಲಿ ಬಂದರೆ, ಅಲೆಕ್ಸ್ ಪಾಯಿಸ್, ಪೆದ್ರು ಜ್ವಾನ್ವ ಸೋಜಾ, ಮಾರ್ಗರೆಟ್ ಕುವೆಲ್ ಮುಂತಾದವರು ಎರಡನೆಯ ಗುಂಪಿನಲ್ಲಿ ಸೇರುತ್ತಾರೆ. ಧರ್ಮಸಾಮ್ರಾಜ್ಯದಲ್ಲಿ ವಿಪುಲಸಂಖ್ಯೆಯ ಕೃತಿಗಳನ್ನು ಕೊಟ್ಟವರೆಂದರೆ ಮೊನ್ಸಿನರ್ ರೇಮಂಡ್ ಮಸ್ಕರೇನ್ಹಸ್ ಮತ್ತು ಸಿಲ್ವೆಸ್ಟರ್ ಮೆನೆಝಸ್.

ಮೊನ್ಸೀನರ್ ಮೆನೆಝಸ್‌ನ 'ಪೇಶಾವಂಚೆಂ ಗೀತ್'(ಯಾತನೆಯ ಗೀತೆ) ಯು ದುರಂತ ಮತ್ತು ಶ್ರೇಷ್ಠ ಕೊಂಕಣಿ ಕವಿತೆಗಳ ಒಂದು ಅಪೂರ್ವ ಮಾದರಿ ಎಂದು ಪರಿಗಣಿತವಾಗಿದೆ. ಅಲ್ಲದೆ ಅವನಿಂದ ಸುಮಾರು ಎಂಬತ್ತಕ್ಕಿಂತಲೂ ಹೆಚ್ಚು ಗದ್ಯ ಮತ್ತು ಪದ್ಯಗಳ ಪುಸ್ತಕಗಳು ಬಂದಿವೆ. ಮೆನೆಝಸ್ 1938ರಲ್ಲಿ 'ದಿರ್ವೆಂ' ಅವಸಾನಹೊಂದಿದಾಗ 'ರಾಕ್ಣೊ' ಎನ್ನುವ ವಾರಪತ್ರಿಕೆಯೊಂದನ್ನು ಆರಂಭಿಸಿದನು. ಇದು ಅನೇಕ ಬರೆಹಗಾರರನ್ನು ಪೋಷಿಸುತ್ತಿದೆಯಲ್ಲದೆ ಅಸಂಖ್ಯಾತ ಉತ್ತಮ ಪುಸ್ತಕಗಳನ್ನು ಪ್ರಕಟಿಸುತ್ತಿದೆ. ಅದು ಈಗಲೂ ಕರ್ಣಾಟಕದಲ್ಲಿ ಹೆಚ್ಚು ಮುಂದುವರಿದ ಕೊಂಕಣಿ ವಾರಪತ್ರಿಕೆ. ಸಾಹಿತ್ಯಕ್ಷೇತ್ರದಲ್ಲಿ ಪ್ರಶಂಸಾರ್ಹ ಕಾರ್ಯ ಮಾಡಿದ ಮತ್ತು ಈಗಲೂ ಮಾಡುತ್ತಿರುವ ಇತರ ಪ್ರಮುಖ ಪತ್ರಿಕೆಗಳೆಂದರೆ, ಕನ್ನಡ ಲಿಪಿಯಲ್ಲಿರುವ, 'ಮಿತ್ರ್', 'ಝೆಲೊ', 'ಪೊಯ್ಣಾರಿ', 'ಮೆಂಯ್ ಗಾಂವ್', 'ಕೊಂಕಣಿ ದೇರ್ಝ್'. ಇವುಗಳಲ್ಲಿ ಕೆಲವು ಮುಂಬಯಿಯಲ್ಲಿ ಪ್ರಕಟವಾಗುತ್ತಿದೆ ಮತ್ತು ಅಲ್ಲಿ ಮಂಗಳೂರ ವಲಸೆಗಾರರ ಜನಸಂಖ್ಯೆ ಸಾಕಷ್ಟಿದೆ.

ಶ್ರೇಷ್ಠ ಪುರಾಣಗಳ ಆಲಂಕಾರಿಕ ಶೈಲಿಯಲ್ಲಿ ಬರೆದ 'ಅಬ್ರಾಮಂಚೆಂ ಯಜ್ಞದಾನ್' (ಅಬ್ರಹಾಮನ ತ್ಯಾಗ) ಎನ್ನುವುದು ಕವಿ ಲೂಯಿ ಮಸ್ಕರೇನ್ಹಸ್‌ನ ಒಂದು ಅಮರಕೃತಿ. ಅವನಿಂದ ಪ್ರೇರಿತರಾದ ಯುವ ಕವಿಗಳ ಬಗ್ಗೆ ಈಗಾಗಲೇ

ಉಲ್ಲೇಖಿಸಲಾಗಿದೆ. ಅವನ ಗುಂಪಿನ ಇನ್ನೊಬ್ಬ ಪ್ರಮುಖ ಕವಿ ಲಿಯೊ ಡಿ'ಸೋಜಾ. ಸಿ.ಎಫ್. ಡಿ'ಕೊಸ್ತಾ ಕೂಡ ನಾಟಕ ಬರೆಹಗಾರನಾಗಿ ಸತ್ತ್ವಯುತ ಕಾರ್ಯವೆಸಗಿದ್ದಾನೆ. ಕನ್ನಡಿಗರಿಂದ ಕೊಂಕಣಿಯಲ್ಲಿ ತುಂಬ ದೊಡ್ಡ ಕೆಲಸ ನಡೆದುದು ಕಥಾ ಕ್ಷೇತ್ರದಲ್ಲಿ. ಮಂಗಳೂರು, ಮುಂಬಯಿಗಳಲ್ಲಿ ಸಾವಿರಗಟ್ಟಲೆ ಜನರಿಂದ ಗ್ರಹಿಸಲ್ಪಡುತ್ತಿದ್ದಂತಹ ಕಾದಂಬರಿಯ ಹೊಳೆಯನ್ನೇ ಹರಿಸಿದ ಪ್ರಮುಖ ಕಾದಂಬರಿಕಾರರಲ್ಲಿ ಯುಲಾಲಿಯಾ ಆಳ್ವರಸ್, ಜೆ. ಎಸ್. ಆಳ್ವರಸ್, ವಿ.ಜೆ.ಪಿ. ಸಲ್ದಾನಾ (ಇವರು ಸಫಲ ನಾಟಕಕಾರರಾಗಿಯೂ ಪ್ರಸಿದ್ಧರು), ಎ.ಟಿ. ಲೋಬೊ, ಐರಿನ್ ಪಿಂಟೊ ಮೊದಲಾದವರು ಸೇರುತ್ತಾರೆ. ಮತ್ತು ತರುಣರ ಗುಂಪಿನ ಫ್ರಾನ್ಸಿಸ್ ಸಲ್ದಾನಾ, ಡಾಲ್ಫಿನ್ ಕಾಸಿಯಾ, ಸ್ವಾಮಿ ಸುಪ್ರಿಯಾ ಅಲಿಯಾಸ್ ಫಾದರ್ ಅಲ್ಬುಕರ್ಕ್ ಪೈ, ಎಸ್. ಜೆ. ಮುಂತಾದವರು ಕರ್ನಾಟಕದ ಕೊಂಕಣಿ ಜನರಲ್ಲಿ ಚಾಲ್ತಿಯಲ್ಲಿರುವ ಹೇಳಿಕೆ, ಒಗಟುಗಳ ಸಂಗ್ರಹ ಮೊದಲಾದ ಮಾನವಶಾಸ್ತ್ರೀಯ ಮೌಲ್ಯವುಳ್ಳ ಆಯ್ದ ಕೃತಿಗಳನ್ನು ಉತ್ಸಾಹದಿಂದ ಹೊರತರುತ್ತಿದ್ದಾರೆ.

**ಬಾರ್ಹದೇಶಿ ಪ್ರಭೇದ :**

ಕರ್ನಾಟಕದಲ್ಲಿ ನೆಲಸಿದ ಗೋವಾ ವಲಸಿಗರು ತಮ್ಮ ಬರೆವಣಿಗೆಗೆ ಕನ್ನಡ ಲಿಪಿಯನ್ನು ಸ್ವೀಕರಿಸಿದರೆ, ಗೋವಾ ಕ್ರಿಶ್ಚಿಯನರು, 1556ರಲ್ಲಿ ಗೋವಾದಲ್ಲಿ ಮುದ್ರಣಯಂತ್ರ ಸ್ಥಾಪನೆಯಾದಂದಿನಿಂದಲೂ ರೋಮನ್ ಲಿಪಿಯಲ್ಲೇ ಬರೆಯುತ್ತಿದ್ದರು. ಈ ಹಿಂದೆಯೇ ಪ್ರಸ್ತಾವಿಸಿದಂತೆ, ಶಾಸನ ಹಾಗೂ ಆದೇಶಗಳ ದೆಸೆಯಿಂದಾಗಿ ತಾಯ್ನುಡಿಯಿಂದ ದೂರ ಸರಿದು, ಎಷ್ಟೇ ಕ್ಷೀಣವಾಗಿಯಾದರೂ, ಸಾಹಿತ್ಯಿಕ ಅಭಿವ್ಯಕ್ತಿಗೆ ಪೋರ್ಚುಗೀಸನ್ನೇ ಆಯ್ದುಕೊಂಡರೂ ಕೊಂಕಣಿಯಲ್ಲಿ ಬರೆಯುವುದು ದಿಟ್ಟತನದ ಕೆಲಸವೆಂದು ಸ್ವೀಕರಿಸಿದ ಧೀರರು ಕೆಲವರು ಅಲ್ಲಲ್ಲಿದ್ದರು. ಇಂತಹವರಲ್ಲಿ ಮುಖ್ಯವಾಗಿ ಮುಂಬಯಿ ಮತ್ತು ಪುಣೆಗೆ ಹೋಗಿ ನೆಲಸಿದ ಗೋವಾ ವಲಸಿಗರು ಪ್ರಮುಖರು. ಅವರು ಆ ಭಾಷೆ ಹಾಗೂ ಸಾಹಿತ್ಯವನ್ನು ಬೆಳೆಸಲು ಮತ್ತು ಅದನ್ನು ಪುನಶ್ಚೇತನಗೊಳಿಸಲು ಪಣತೊಟ್ಟರು ಮತ್ತು, ಅವರೇ ಹೇಳಿದಂತೆ, 'ಸೊಗಸಾದ' ಕೊಂಕಣಿಯಲ್ಲಿ ಬರೆಯಲು ನಿರ್ಧರಿಸಿದರು.

೧೯೮೯. 'ಮೊಗರ್' - ಮಣಿಪಾಲದಲ್ಲಿ ನಡೆದ ೧೭ನೆಯ ಅಖಿಲ ಭಾರತ ಕೊಂಕಣಿ ಸಮ್ಮೇಳನದ ಸ್ಮರಣ ಸಂಚಿಕೆ, ಸಂ: ಸಂತೋಷಕುಮಾರ ಗುಲ್ವಾಡಿ.

# ಕೊಂಕಣಿ ಭಾಷೆಯ ಉಗಮ, ಬೆಳವಣಿಗೆ

– ಕೃಷ್ಣಾನಂದ ಕಾಮತ್

ಅನೇಕಾನೇಕ ಐತಿಹಾಸಿಕ ಘಟನೆಗಳಿಂದಾಗಿ ಕೊಂಕಣಿ ಜನಾಂಗ, ದೇಶದ ಪಶ್ಚಿಮ ಕರಾವಳಿಯಲ್ಲಿ ಹಂಚಿ ಹೋಗಬೇಕಾಯಿತು. ಇದರಿಂದಾಗಿ, ಅವರ ಮಾತೃಭಾಷೆಯಾದ ಕೊಂಕಣಿಯು, ನೂಕುನುಗ್ಗಲುಗಳಿಗೆ ಒಳಪಡಬೇಕಾಗಿ ಬಂದಿತು. ಅದೊಂದು ಮರಾಠಿಯ ಉಪಭಾಷೆಯೆಂದು ಮರಾಠಿ ಅಭಿಮಾನಿಗಳು ಕೊಂಕಣಿಗೆ ಸಿಗಬೇಕಾದ ಗೌರವದ ಸ್ಥಾನಮಾನಗಳನ್ನು ಕೊಡದೇ ಹೋದರು. ಪ್ರಚೋದನೆ, ಪುರಸ್ಕಾರಗಳಿಲ್ಲದೇ ಸಾಹಿತ್ಯಿಕ ಬರವಣಿಗೆ ಕುಂಠಿತವಾಯಿತು. ಈ ಅಸಹಾಯ ಸ್ಥಿತಿಗೆ, ಬಹುಮಟ್ಟಿಗೆ ಕೊಂಕಣಿಗರೇ ಜವಾಬ್ದಾರರು. ಕನ್ನಡ, ಮರಾಠಿ, ಇಂಗ್ಲಿಷ್ ಸಾಹಿತ್ಯಗಳನ್ನು ಶ್ರೀಮಂತ ಮಾಡಿದ ಕೊಂಕಣಿ ಬರಹಗಾರರು ತಮ್ಮ ಮಾತೃಭಾಷೆಯಲ್ಲಿ ಅದೆಷ್ಟು ಕೃತಿಗಳನ್ನು ರಚಿಸಿದ್ದೇವೆಂದು ಚಿಂತಿಸಬೇಕು. ಸುದೈವದಿಂದ ಇತ್ತೀಚಿನ ವರ್ಷಗಳಲ್ಲಿ ಜರಗಿದ ಎರಡು ಘಟನೆಗಳು ಅತ್ಯಂತ ಆಶಾದಾಯಕವಾಗಿವೆ. ಮೊದಲನೆಯದಾಗಿ ಕೇಂದ್ರ ಸಾಹಿತ್ಯ ಅಕಾಡೆಮಿಯು, ಕೊಂಕಣಿ, ಒಂದು ಸ್ವತಂತ್ರ ಭಾಷೆ ಎಂದು ಸಾರಿ, ಅದರಲ್ಲಿ ರಚಿತವಾದ ಸಾಹಿತ್ಯಿಕ ಕೃತಿಗಳಿಗೆ ಗೌರವ, ಪುರಸ್ಕಾರಗಳು ಸಿಗುವಂತೆ ಮಾಡಿದೆ. ಎರಡನೆಯ ದಾಗಿ, ಗೋವೆಯನ್ನು ಒಂದು ರಾಜ್ಯವನ್ನಾಗಿ ಗುರುತಿಸಿ, ಕೊಂಕಣಿಯನ್ನು ಅದರ ಭಾಷೆಯನ್ನಾಗಿ ಅಂಗೀಕರಿಸಲಾಗಿದೆ. ಕರ್ನಾಟಕ ಸರಕಾರವೂ ಕೊಂಕಣಿ ಅಕಾಡೆಮಿ ಸ್ಥಾಪಿಸಿ ಅದರಲ್ಲಿ ರಚಿತವಾದ ಸಾಹಿತ್ಯಿಕ ಕೃತಿಗಳಿಗೆ ಗೌರವಿಸಲಾರಂಭಿಸಿದೆ. ಇನ್ನಾದರೂ ಕೊಂಕಣಿಗರು ತಮ್ಮ ಮಾತೃಭಾಷೆಯ ಬಗ್ಗೆ ಕಳಕಳಿ, ಪ್ರೀತಿಗಳನ್ನು ಸೂರೆ ಮಾಡುವರೇ?

ಐತಿಹಾಸಿಕ ಮತ್ತು ಭೌಗೋಲಿಕ ಹಿನ್ನೆಲೆಯಲ್ಲಿ ಕೊಂಕಣಿಯ ಉಗಮ ಮತ್ತು ಬೆಳವಣಿಗೆ ಅತ್ಯಂತ ಕುತೂಹಲಕಾರಿ. ಪರದೇಶದಿಂದ ವಲಸೆ ಬಂದ ಆರ್ಯರು, ಉತ್ತರ ಭಾರತವನ್ನು ಕರ್ಮಭೂಮಿಯನ್ನಾಗಿ ಮಾಡಿಕೊಂಡು, ಸ್ಥಾನೀಯ ಭಾಷೆಯ ವರ್ಚಸ್ಸಿಗೆ ಒಳಪಟ್ಟು, ಮಿಶ್ರಭಾಷೆಯನ್ನು ತಮ್ಮದನ್ನಾಗಿ ಮಾಡಿಕೊಂಡರು. ಸಂಪರ್ಕ ಸಾಧನಗಳ ಅತಿ ಕೊರತೆ ಇರುವ ಅಂದಿನ ದಿನಗಳಲ್ಲಿ, ಭೌಗೋಲಿಕವಾಗಿ ಪಿಂಗಡಿಸಲ್ಪಟ್ಟವರಲ್ಲಿ ಭಾಷಾ ವೈವಿಧ್ಯ

ಕಾಣಿಸಿಕೊಳ್ಳಲಾರಂಭಿಸಿತು. ಈ ಉಪಭಾಷೆಗಳನ್ನು ಎರಡು ಪ್ರಮುಖ ಗುಂಪುಗಳನ್ನಾಗಿ ಗುರುತಿಸಬಹುದು. ಪಂಜಾಬಿ, ರಾಜಸ್ಥಾನಿ, ಗುಜರಾಥಿ, ಹಿಂದಿಗಳು ಮಾಗಧಿ ಪ್ರಾಕೃತದ ಪಾಲಿಯಿಂದ ಬೆಳೆದು ಬಂದರೆ, ಸಿಂಧಿ, ಮೈಥಿಲಿ, ಅಸಾಮಿ, ಬಂಗಾಲಿಗಳು ಶೌರಸೇನಿ ಪ್ರಾಕೃತದಿಂದ ಹುಟ್ಟಿ ಬಂದವು. ಕೊಂಕಣಿ ದ್ವಿತೀಯ ಗುಂಪಿನಿಂದ ವಿಕಾಸಗೊಂಡಿದ್ದರಿಂದ ಬಂಗಾಲಿ, ಅಸ್ಸಾಮಿಗಳು ಅದರ ತಾಯಿ ಎಂದು ಕೆಲವರಾದರೂ ಪರಿಗಣಿಸುತ್ತಾರೆ. ನಿಜ ಸಂಗತಿ ಎಂದರೆ ಈ ಮೂರು ಭಾಷೆಗಳು ಒಂದೇ ತಾಯಿಯ ಮಕ್ಕಳು. ಕೊಂಕಣಿ ಭಾಷೆಯ ಉಗಮ ಮತ್ತು ಬೆಳವಣಿಗೆಯ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯ ಇದ್ದೇ ಇದೆ. ಉತ್ತರ ಭಾರತದಿಂದ ಕೊಂಕಣಕ್ಕೆ ಬಂದ ಆರ್ಯರ ಭಾಷೆ ಇದಾಗಿದ್ದರಿಂದ ಕೊಂಕಣಿ ಎಂಬ ಅನ್ವರ್ಥಕನಾಮ ಬಂದಿರಬೇಕು ಎಂದು ವಾದಿಸುವವರೂ ಇದ್ದಾರೆ. ಎಲ್ಲಿಂದಲೇ ಬರಲಿ, ಅವರು ಮೊಟ್ಟ ಮೊದಲಿಗೆ ಕೊಂಕಣವನ್ನು (ಗೋವಾ ಸೇರಿ) ತಮ್ಮದನ್ನಾಗಿ ಮಾಡಿ ಕೊಂಡಿದ್ದು ಐತಿಹಾಸಿಕವಾದ ಅತ್ಯಂತ ಮಹತ್ವದ ಘಟನೆ. ವಲಸೆ ಬಂದ ಹೊಸದರಲ್ಲಿ ಅವರು ಬ್ರಾಹ್ಮೀಲಿಪಿ ಬಳಸಿದರೂ ಕಾಲಕ್ರಮೇಣ ಸ್ಥಾನೀಯರು ಬಳಸುತ್ತಿದ್ದ ದೇವ ನಾಗರಿ ಲಿಪಿ ಉಪಯೋಗಿಸಿ ತಮ್ಮ ಭಾಷೆ ಇನ್ನಿತರರಿಗೂ ಅರ್ಥವಾಗುವಂತೆ ನೋಡಿ ಕೊಂಡರು.

ಕೊಂಕಣಿ ಭಾಷೆಯ ಮೇಲೆ ಮರಾಠಿಗರಿಗೆ ದಾಯಾದಿ ಮತ್ಸರ ಸದಾ ಕಾಲ ಇದ್ದೇ ಇದೆ. ಅದೊಂದು ಮರಾಠಿಯ ಉಪಭಾಷೆ; ಅದಕ್ಕೊಂದು ಲಿಪಿ, ಸಾಹಿತ್ಯವಿಲ್ಲದ್ದರಿಂದ ಹೆಚ್ಚೆಂದರೆ ಆಡು ಭಾಷೆ ಎಂದು ಕರೆಯಬಹುದು, ಎಂದು ವಾದಿಸುವವರೂ ಇಲ್ಲದಿಲ್ಲ. ಆದರೆ, ಕೊಂಕಣಿ ಭಾಷೆ ಪ್ರೌಢಾವಸ್ಥೆ ತಲಪಿ ದಾಗಲೂ ಮರಾಠಿ ಹುಟ್ಟಿ ಬಂದಿರಲಿಲ್ಲವೆಂದು ಇತಿಹಾಸ ಸಾರಿ ಹೇಳುತ್ತದೆ. ಕ್ರಿ.ಶ. ೧೧೮೭ರ ಉತ್ತರ ಕೊಂಕಣದ ಶಾಸನ ಕೊಂಕಣಿಯಲ್ಲಿ ಬರೆಯಲಾಗಿದೆ. ಹದಿನಾಲ್ಕನೆಯ ಶತಕಕ್ಕಿಂತ ಹಿಂದಿನ ಸಂಸ್ಕೃತ ಹಸ್ತ ಪ್ರತಿಗಳು ಈ ಭಾಗದಲ್ಲಿ ಸಿಗುವುದು ದುರ್ಲಭ. ಮರಾಠೀ ಹಸ್ತ ಪ್ರತಿಗಳು ಹದಿನಾರನೆಯ ಶತಕಗಳಿಗಿಂತ ಹಿಂದಿನವು ಇಲ್ಲವೇ ಇಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಅಂತೆಯೇ ಸಂತ ಜ್ಞಾನೇಶ್ವರನು ಕ್ರಿ.ಶ. ೧೨೯೦ರಲ್ಲಿ 'ಜ್ಞಾನೇಶ್ವರಿ' ಗ್ರಂಥ ರಚಿಸಲು, ಅಂದು ಅತ್ಯಧಿಕವಾಗಿ ಪ್ರಚಲಿತವಿದ್ದ ಕೊಂಕಣಿಗೇ ಶರಣುಹೋಗಬೇಕಾಯಿತು. ಆದರೆ, ಹದಿನಾರನೇ ಶತಕದ ಅನಂತರ ಈ ಎರಡೂ ಭಾಷೆಗಳೂ ಸ್ವತಂತ್ರವಾಗಿ ಬೆಳೆ ಯಲಾರಂಭಿಸಿದ್ದರಿಂದಲೂ, ಕೊಂಕಣಿ, ಇನ್ನಿತರ ಪ್ರಾದೇಶಿಕ ಭಾಷೆಗಳ ವರ್ಚಸ್ಸಿಗೆ ಒಳಗಾಗಿದ್ದರಿಂದಲೂ, ಇಂದು ಅವು ಭಿನ್ನ ಅನಿಸುವುದು ತೀರ ಸಹಜ.

ಗೋವಾದಲ್ಲಿ ಸ್ಥಾಯಿಯಾಗಿ ಬೇರುಬಿಟ್ಟ ಕೊಂಕಣಿಗರು ಸಾಹಿತ್ಯಿಕ ಕೃತಿಗಳ ರಚನೆಯಲ್ಲಿ ತೊಡಗಿದರಲ್ಲದೇ ಲೇಖನ ಮತ್ತು ವಾಚನದಲ್ಲಿ ಏಕರೂಪತೆಯನ್ನು ತರುವುದಕ್ಕಾಗಿ ವ್ಯಾಕರಣವನ್ನೂ ಸೃಷ್ಟಿಸಿದರು. ಆದರೆ ಅದಾಗಲೇ ಪೋರ್ಚುಗೀಸರು ರಾಜ್ಯದಾಹದಿಂದ ಪಶ್ಚಿಮ ಕರಾವಳಿಯನ್ನು ವಶಪಡಿಸಿಕೊಳ್ಳ

ಲಾರಂಭಿಸಿದ್ದರು. ಅವರು ಪರಶುರಾಮ ಭೂಮಿಯನ್ನು ತಮ್ಮದನ್ನಾಗಿ ಮಾಡಿಕೊಂಡು ಕೊಂಕಣಿಗರಿಗೆ ಪೀಡಿಸಲಾರಂಭಿಸಿದರು. ಈ ಮತಾಂಧರು ಸಕಲ ಭೂಮಂಡಲವನ್ನು ಕ್ರಿಸ್ತನ ಅನುಯಾಯಿಗಳಿಂದ ತುಂಬಿ ತುಳುಕುವಂತೆ ಮಾಡುವ ಕನಸು ಕಟ್ಟಿ, ಅದನ್ನು ಕಾರ್ಯಗತ ಮಾಡಲು, ಗೋವೆಯ ನಿವಾಸಿಗಳಿಗೆಲ್ಲ ಕಡ್ಡಾಯವಾಗಿ ತಮ್ಮ ಭಾಷೆಯನ್ನೇ ಕಲಿಯಬೇಕು, ಮಾತನಾಡಬೇಕೆಂದು ಸುಗ್ರೀವಾಜ್ಞೆ ಹೊರಡಿಸಿದರು. ಇಷ್ಟರಿಂದಲೇ ಸಂತುಷ್ಟರಾಗದೇ ಲಭ್ಯವಿದ್ದ ಸಕಲ ಕೊಂಕಣಿ ಸಾಹಿತ್ಯವನ್ನು ಕ್ರಿ.ಶ. ೧೫೪೮ರಲ್ಲಿ ಸುಟ್ಟು ಬೂದಿ ಮಾಡಿದರು. ಇದರಿಂದ ತಮ್ಮ ಸಂಸ್ಕೃತಿಯನ್ನು ಪ್ರತಿನಿಧಿಸುವ ಸಕಲ ಸಾಹಿತ್ಯವನ್ನೂ ಕಳೆದುಕೊಂಡ ಕೊಂಕಣಿಗರು ಬೇರು ಇಲ್ಲದ ಮರದಂತೆ ಅನಾಥರಾದರು. ಇದಿಷ್ಟರಿಂದಲೇ ತೃಪ್ತಿ ಪಡೆಯದ ಆಗಂತುಕರು, ಪೂರ್ವಜರ ಆಚಾರ, ವಿಚಾರಗಳನ್ನು ಬಿಡಲೊಪ್ಪದವರನ್ನು ಜೀವಂತವಾಗಿ ಸುಟ್ಟರು. ಜನ ಸಾಮಾನ್ಯರನ್ನು ಬಲಾತ್ಕಾರದಿಂದ ಮತಾಂತರಗೊಳಿಸಿ ಹೊಸ ಕ್ರೈಸ್ತ ಹೆಸರುಗಳನ್ನು ಕೊಡಮಾಡಿದ್ದರಿಂದ ಕೊಂಕಣಿಗರ ಅಸ್ತಿತ್ವಕ್ಕೇ ಸವಾಲು ಒಡ್ಡಿದಂತಾಯಿತು. ಅವರು ತಮ್ಮ ಸಂಸ್ಕೃತಿ ಉಳಿಸಿಕೊಳ್ಳುವುದಕ್ಕಾಗಿ ವಲಸೆ ಹೋಗಲೇಬೇಕಾಗಿ ಬಂದಿತು. ಈ ಒಂದು ಘಟನೆಯಿಂದಾಗಿ ಕೊಂಕಣಿ, ಅನೇಕಾನೇಕ ಪ್ರಾದೇಶಿಕ ಭಾಷೆಗಳ ವರ್ಚಸ್ಸಿಗೆ ಮಣಿಯಲೇಬೇಕಾಯಿತು. ವೆಂಗುರ್ಲಾ, ಸಾವಂತವಾಡಿ, ರತ್ನಾಗಿರಿ, ಮಾಲವಣ (ಮಹಾರಾಷ್ಟ್ರ)ಗಳಲ್ಲಿ ಮರಾಠಿಯನ್ನು ತನ್ನದನ್ನಾಗಿ ಅಂಗೀಕರಿಸಿ 'ಮಾಲವಣಿ'ಯಾಗಿ ರೂಪಗೊಂಡಿತು. ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಅದು ಕನ್ನಡದ ಪ್ರಭಾವಕ್ಕೆ ಒಳಗಾ ಯಿತು. ಕೇರಳದಲ್ಲಿ ಮಲಯಾಳಿ ಶಬ್ದಗಳನ್ನು ಸ್ವಾಗತಿಸಿತು.

ಇಷ್ಟೊಂದು ಅಗ್ನಿಪರೀಕ್ಷೆಗಳಿಗೆ ಗುರಿಪಡಿಸಿದರೂ ಕೊಂಕಣಿಗರು ತಮ್ಮತನ ವನ್ನು ಬಿಟ್ಟುಕೊಡಲು ಸುತರಾಂ ಸಿದ್ಧವಾಗದ್ದರಿಂದ ಪೋರ್ಚುಗೀಸ್ ಮಿಶನರಿ ಗಳು, ಕೊಂಕಣಿಗಳನ್ನು ಮತಾಂತರ ಮಾಡಲು ಕೊಂಕಣಿಯನ್ನು ತಮ್ಮದನ್ನಾಗಿ ಮಾಡಿಕೊಳ್ಳುವುದೇ ಸೂಕ್ತ ಮಾರ್ಗ ಎಂಬ ನಿರ್ಧಾರಕ್ಕೆ ಬಂದರು. ಈ ಭಾಷೆಗೆ ಅವರು, ಬ್ರಾಹ್ಮಣರ ಭಾಷೆ, ಕೆನರಿಸ್ ಭಾಷೆ, ಗೋವಾ ಬ್ರಾಹ್ಮಣರ ಭಾಷೆ ಎಂದೆಲ್ಲ ಕರೆದರು. ಬಿಶಪ್, ಪಾದ್ರಿ, ನನ್‌ಗಳು (ಸನ್ಯಾಸಿನಿಯರು) ಮತಾಂತರ ಮಾಡಿದವರ ನೆರವಿನಿಂದ ಪೋರ್ಚುಗೀಸ್ ಭಾಷೆಯಲ್ಲಿದ್ದ ಧಾರ್ಮಿಕ ಗ್ರಂಥ ಗಳನ್ನು ಭಾಷಾಂತರ ಮಾಡಲಾರಂಭಿಸಿದ್ದರಿಂದ ಹೊಚ್ಚ ಹೊಸ ಕ್ರಿಶ್ಚಿಯನ್ ಕೊಂಕಣಿ ಸಾಹಿತ್ಯದ ರಚನೆಗೆ ಆರಂಭವಾಯಿತು. ಈ ಸಾಹಿತ್ಯಕ್ಕಾಗಿ ರೋಮನ್ ಲಿಪಿಯನ್ನು ಬಳಸುತ್ತಿದ್ದರು. ಧರ್ಮಿಷ್ಟರು ಶಬ್ದಶಃ ಅನುವಾದಿಸಿದ್ದರಿಂದ, ಅದರಲ್ಲಿ ಮಾಧುರ್ಯವಾಗಲಿ ಸ್ವಾದವಾಗಲಿ ಇರಲೇ ಇಲ್ಲ. ವ್ಯಾಕರಣ, ವಾಕ್ಯರಚನೆ ಕೂಡ ತೀರ ಭಿನ್ನವಾಗಿ, ಇದೂ ಒಂದು ಕೊಂಕಣಿಯ ಪ್ರಕಾರವೇ? ಎಂದು ವಿಸ್ಮಯ ಪಡುವಷ್ಟು ಭಿನ್ನವಾಗಿ ಬೆಳೆಯಿತು. ಹದಿನಾರನೆಯ ಶತಕದಲ್ಲಿ ಈ ಕೊಂಕಣಿಯ

ವ್ಯಾಕರಣ ಪ್ರಕಟಗೊಂಡಿತು. ಸ್ಥಳೀಯ ಹಿಂದು ಪುರಾಣದ ಜನಪ್ರಿಯತೆ ಅರಿತು ಮತಾಂತರ ಮಾಡಿದವರ ಸಲುವಾಗಿಯೇ ಹದಿನೇಳನೇ ಶತಕದಲ್ಲಿ 'ಕ್ರಿಸ್ತ ಪುರಾಣ' ಪ್ರಕಟಿಸಲಾಯಿತು. ಪ್ರಾರ್ಥನಾ ಗೀತಗಳು, ಬೋಧನಾ ಪಾಠಗಳು, ಪಾದ್ರಿಗಳ ಆತ್ಮವೃತ್ತಾಂತಗಳು, ಶಬ್ದಕೋಶಗಳೂ ಪ್ರಕಟಗೊಂಡವು. ಕ್ರಿ.ಶ. ೧೮೦೮ರಲ್ಲಿ ಕೊಂಕಣಿ ಬೈಬಲ್ ಪ್ರಕಟಿಸಲಾಯಿತು. ಇಂದಿಗೂ ಸುಮಾರು ಐದುನೂರು ಇಂಥ ಕೃತಿಗಳು ಲಭ್ಯವಿವೆ. ಪೋರ್ಚುಗೀಸ್ ಸರಕಾರ ಕ್ರಿ.ಶ. ೧೯೩೨ರಲ್ಲಿ ಕೊಂಕಣಿ ಶಾಲೆಯೊಂದನ್ನು ಪ್ರಾರಂಭಿಸಿತು.

ಗೋವಾದ ಹಿಂದುಗಳಿಗೆ ಕೊಂಕಣಿ ಸಾಹಿತ್ಯದ ಸರ್ವನಾಶ ಮಾಡಿದ್ದರಿಂದ ಉಂಟಾದ ಆಘಾತದಿಂದ ಚೇತರಿಸಿಕೊಳ್ಳುವುದು ಸುಲಭ ಸಾಧ್ಯವಾಗಲಿಲ್ಲ. ಕಡ್ಡಾಯವಾಗಿ ಹೇರಿದ ಕ್ರೈಸ್ತ ಕೊಂಕಣಿಗಿಂತ, ಮಣ್ಣಿನ ವಾಸನೆಯಿಂದ ಜಿನುಗುವ, ನೆರೆ ರಾಜ್ಯದ ಮರಾಠಿ ಪ್ರಿಯವೆನಿಸತೊಡಗಿತು. ಕೊಂಕಣಿ ಸಾಹಿತಿಗಳು ತಮ್ಮ ಕೃತಿಗಳನ್ನು ಮರಾಠಿಯಲ್ಲಿ ರಚಿಸಲಾರಂಭಿಸಿದರು. ಮಹಾರಾಷ್ಟ್ರಕ್ಕೆ ವಲಸೆ ಹೋದವರಿಗೆ ಮರಾಠಿಯಲ್ಲಿ ವ್ಯವಹರಿಸಲು ಏನೇನೂ ಕಷ್ಟವಾಗಲೇ ಇಲ್ಲ. ಕವಳೆ ಮತ್ತು ಗೋಕರ್ಣ ಪರ್ತಗಾಳಿ ಮಠಾಧೀಶರು ಕೂಡ ತಮ್ಮ ರಾಯಸ ಗಳನ್ನು ಮರಾಠಿಯಲ್ಲಿ ಬರೆಯಲಾರಂಭಿಸಿದರು. ಇದರಿಂದ ತಾಯ್ನಾಡಿನಲ್ಲಿಯೇ ಕೊಂಕಣಿ ಹೇಳಹೆಸರಿಲ್ಲದೇ ಹೋಗಬಹುದೆಂಬ ದಿಗಿಲು ಎಂದಿಗಿಂತ ಹೆಚ್ಚಾಯಿತು. ಆದರೆ ಸುದೈವದಿಂದ ದಕ್ಷಿಣಕ್ಕೆ ಬಂದವರು ತಮ್ಮ ಮಾತೃಭಾಷೆಯನ್ನು ತಮ್ಮ ದಾಗಿಯೇ ಉಳಿಸಿಕೊಂಡರು. ಈ ಅಪೂರ್ವ ಕೊಡುಗೆಗಾಗಿ ಸಕಲ ಕೊಂಕಣಿ ಬಾಂಧವರು ಕರ್ನಾಟಕಕ್ಕೆ ಚಿರಋಣಿಯಾಗಿರಲೇಬೇಕು.

ಇಂದಿನ ಬಹುರೂಪಿ ಕೊಂಕಣಿಯ ದರ್ಶನ ಪಡೆಯಲು ಪಶ್ಚಿಮ ಕರಾ ವಳಿಯ ಪರ್ಯಟಣೆ ಕೈಕೊಳ್ಳಬೇಕು. ಮುಂಬಯಿಯಲ್ಲಿ ಅದನ್ನು ಮರಾಠಿ ಧಾಟಿ ಯಲ್ಲಿ ಮಾತನಾಡಿದರೆ ಕೊಂಕಣದಲ್ಲಿ ಬೇರಾರಿಗೂ ಅರಿವಾಗದಂತೆ ರಾಗವೆಳೆದು ಶಬ್ದಗಳನ್ನು ಉಚ್ಚರಿಸುವರು. ಗೋವಾ ಹಿಂದುಗಳು ಪೋರ್ಚುಗೀಸ್ ಶಬ್ದಗಳನ್ನು ಯಥೇಷ್ಟವಾಗಿ ಬಳಸಿದರೆ ಕ್ರಿಶ್ಚಿಯನರು ಅದೊಂದು ಪೋರ್ಚುಗೀಸ್ ಉಪಭಾಷೆ ಎಂಬಂತೆ ಬಳಸುವರು. ಉತ್ತರ ಕನ್ನಡ ಜಿಲ್ಲೆಯ ಕಾರವಾರ, ಅಂಕೋಲಾಗಳಲ್ಲಿ ಶಬ್ದಗಳನ್ನು ಎಳೆದೆಳೆದು ಮಾತನಾಡಿದರೆ, ಕುಮಟಾ, ಹೊನ್ನಾವರಗಳಲ್ಲಿ ಒತ್ತಕ್ಷರಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಸೇರಿಸುವರು. ಭಟ್ಕಳದ ನವಾಯಿತರು ಮಾತನಾಡುವ ಪರ್ಶಿಯನ್ ಮಿಶ್ರಿತ ಕೊಂಕಣಿ ಕೇಳಲು ಇಂಪಾಗಿರುತ್ತದೆ. ದಕ್ಷಿಣ ಕನ್ನಡದವರು ಕೊಂಕಣಿ, ಕನ್ನಡ ಶಬ್ದಗಳೆಂಬ ಭೇದಭಾವ ಕಲ್ಪಿಸದೇ ದಿನಂಪ್ರತಿ ವ್ಯವಹಾರಕ್ಕೆ ಅನುಕೂಲವಾಗುವ ಭಾಷೆ ತಮ್ಮದನ್ನಾಗಿ ಮಾಡಿಕೊಂಡಿದ್ದಾರೆ. ಅದರಲ್ಲಿ ತುಳು ಭಾಷೆಯ ಶಬ್ದಗಳು ಇಲ್ಲದಿಲ್ಲ. ಕೇರಳದ ಕೊಂಕಣಿ ಮಲಯಾಳಿ ಮಯವಾಗಿದೆ. ಉತ್ತರ ಕರ್ನಾಟಕದ ಕೊಂಕಣಿಗರು ಕನ್ನಡ ಶಬ್ದಗಳಿಗೆ ಕೊಂಕಣಿ

ಕ್ರಿಯಾಪದಗಳನ್ನು ಜೋಡಿಸಿ ಮಾತನಾಡಿದರೆ ದಕ್ಷಿಣದವರು ಇಂಗ್ಲಿಷ್ ಧಾರಾಳವಾಗಿ ಸೇರಿಸುವರು. ಕೊಂಕಣಿಭಾಷೆಯ ಬರವಣಿಗೆಗಾಗಿ ಕನ್ನಡ, ದೇವನಾಗರಿ, ರೋಮನ್, ಅರಾಬಿಕ್, ಮಲಯಾಳಿ ಲಿಪಿಗಳನ್ನು ಬಳಸುವ ಕೊಂಕಣಿಗರು ತಾವು ವಿಶ್ವಕುಟುಂಬಿಗಳೆಂದು ಸಿದ್ಧಮಾಡಿದ್ದಾರೆ. ಸಂಸ್ಕೃತ ಬಿಟ್ಟರೆ ಜಗತ್ತಿನ ಬೇರಾವ ಭಾಷೆಯನ್ನೂ ಇಷ್ಟೊಂದು ಲಿಪಿಗಳಲ್ಲಿ ಬರೆಯಲಾಗುತ್ತಿಲ್ಲವೆಂದು ಆತ್ಮವಿಶ್ವಾಸದಿಂದ ಹೇಳಬಹುದು.

ಬಹುರೂಪಿಯಾದ ಕೊಂಕಣಿಯನ್ನು ವಿವಿಧ ಹೆಸರುಗಳಿಂದ ಗುರುತಿಸಲಾಗುತ್ತದೆ. ಮೂಲತಃ ರತ್ನಾಗಿರಿ ಜಿಲ್ಲೆಯವರಾಗಿ ಅನಂತರ ಬೇರೆಡೆಗೆ ಸ್ಥಾಯಿಯಾದ ಚಿತ್ಪಾವನ ಮತ್ತು ಕೊಂಕಣಸ್ಥ ಬ್ರಾಹ್ಮಣರು ಮರಾಠಿ ಮಿಶ್ರಿತ 'ಚಿತ್ಪಾವನಿ' ಕೊಂಕಣಿ ಮಾತನಾಡುವರು. ಕೊಂಕಣದವರು 'ಮಾಲವಣೀ'ಯನ್ನೂ ಗೋವೆಯವರು 'ಗೋಮಂತಕಿ'ಯನ್ನು ಆಡುಭಾಷೆಯನ್ನಾಗಿ ಬಳಸುತ್ತಾರೆ. ಕರಾವಳಿಯ ಕ್ರಿಶ್ಚಿಯನ್ನರನ್ನು ಟಿಪ್ಪುಸುಲ್ತಾನನು ಮೈಸೂರಿಗೆ ಕೈದಿಗಳನ್ನಾಗಿ ಸಾಗಿಸಿ, ಬಲಾತ್ಕಾರದಿಂದ ಮಹಮ್ಮದೀಯರನ್ನಾಗಿ ಮಾಡಿದನು. ಶ್ರೀರಂಗಪಟ್ಟಣ, ಮೈಸೂರು, ಕೊಡಗುಗಳಲ್ಲಿ ವಾಸಮಾಡುವ ಅವರ ವಂಶಜರು ಉರ್ದು ಮಿಶ್ರಿತ ಕೊಂಕಣಿ ಮಾತನಾಡುತ್ತಾರೆ. ಕೊಂಕಣಿಗರು ಬಹುಭಾಷಾವಿಶಾರದರು. ಅಂತೆಯೇ ಹೋದಲ್ಲೆಲ್ಲ ತಮ್ಮ ಭಾಷೆಯನ್ನು ಇನ್ನಿತರರ ಮೇಲೆ ಹೇರದೇ ಅವರದನ್ನೂ ಬಹು ಬೇಗ ತಮ್ಮದನ್ನಾಗಿ ಮಾಡಿಕೊಂಡುಬಿಡುತ್ತಾರೆ. ಗೋವಾದಿಂದ ವಲಸೆ ಬರುವ ದಿನಗಳಲ್ಲಿ ಅದೊಂದು ವರದಾನವಾಗಿ ಕರ್ನಾಟಕ, ಕೇರಳ, ಮಹಾರಾಷ್ಟ್ರಗಳಲ್ಲಿ ನೆಲಸಿ, ಉದರ ಪೋಷಣೆ ಮಾಡಿಕೊಳ್ಳಲು ಅನುಕೂಲವಾಯಿತು. ಮರಾಠರ ಆಳಿಕೆಯಲ್ಲಿ ಮಧ್ಯಪ್ರದೇಶದ ಇಂದೋರ್, ಗ್ವಾಲ್ಹೇರಗಳಲ್ಲಿ ಹೋಗಿ ಸ್ಥಾಯಿಯಾದ ಕೊಂಕಣಿ ಕುಟುಂಬಗಳು ಹಿಂದಿಗೆ ಮಾರುಹೋಗಿದ್ದಾರೆ. ಈ ವರದಾನವೇ, ಇಂದು ಶಾಪವಾದೀತೇ ಎಂದು ಎನಿಸತೊಡಗಿದೆ. ಗೋವಾದ ಹಿಂದುಗಳು ದೇವನಾಗರಿಯಲ್ಲಿ ಬರೆದದ್ದನ್ನು ಮಾತ್ರ ಕೊಂಕಣಿ ಎಂದು ಗುರುತಿಸಬೇಕೆಂದು ವಾದಿಸಿದರೆ, ಕ್ರೈಸ್ತರು ರೋಮನ್ ಲಿಪಿಯಲ್ಲಿ ಬರೆದದ್ದಕ್ಕೂ ಮಾನ್ಯತೆ ಸಿಗಬೇಕೆಂದು ಮೊಂಡಾಗಿ ಮಾತನಾಡುತ್ತಾರೆ. ಕನ್ನಡ ಲಿಪಿಯಲ್ಲಿ ಬರೆದರೂ ತಮ್ಮದೇ ಶ್ರೇಷ್ಠ ಸಾಹಿತ್ಯವೆಂದು ಕರ್ನಾಟಕದವರು ಬಂಡೆಬ್ಬಿಸಿದ್ದಾರೆ. ಕೇರಳದವರು ತಾವು ಅಲ್ಪಸಂಖ್ಯಾತರಾದ್ದರಿಂದ ತಮ್ಮನ್ನು ಕಡೆಗಣಿಸುವಂತಿಲ್ಲವೆಂದು ವಾದ ಹೂಡಿದ್ದಾರೆ. ಮಾಲವಣಿ, ಚಿತ್ಪಾವನಿ, ಪರ್ಶಿಯನ್, ಅರೆಬಿಕ್, ಉರ್ದು ಮಿಶ್ರಿತ ಕೊಂಕಣಿ ಮಾತನಾಡುವವರು ಈ ಒಳ ಜಗಳದಲ್ಲಿ ತಮ್ಮ ಸ್ಥಾನಮಾನವೇನು? ಎಂದು ಅರಿಯದೇ ಕಂಗೆಟ್ಟಿದ್ದಾರೆ.

ಮೂಲತಃ ಸಾರಸ್ವತ ಬ್ರಾಹ್ಮಣರ ಭಾಷೆ ಇದಾಗಿದ್ದರೂ, ಕರಾವಳಿಯಲ್ಲಿ ಬೀಡು ಬಿಟ್ಟ ಅಸಂಖ್ಯಾತರು ಇದನ್ನು ತಮ್ಮದನ್ನಾಗಿ ಮಾಡಿಕೊಂಡಿದ್ದಾರೆ.

ಸೊನ್ನಾರ (ಸುವರ್ಣಕಾರ), ಸೇರುಗಾರ, ಮೇಸ್ತ್ರಿ, ಸುತಾರ (ಬಡಿಗ), ವಾಣಿ, ದೇವಳಿ, ಸಿದ್ದಿ, ಗಾಬೀತ, ಖಾರ್ವಿ, ದಾರ್ಜಿ, ಸಮಗಾರ, ನವಾಯತರೆಲ್ಲ ಇದನ್ನೇ ಮಾತೃ ಭಾಷೆಯನ್ನಾಗಿ ಬಳಸುತ್ತಾರೆ. ಅಂತೆಯೇ ಸರ್ವರೂ ಒಂದೇ ಲಿಪಿಯನ್ನು ಬಳಸಿ ಕೊಂಕಣಿಗೆ ಏಕರೂಪತೆಯನ್ನು ಕೊಡಲೇಬೇಕಾಗಿದೆ. ಸಂಸ್ಕೃತದಿಂದ ಬಂದ ಈ ಭಾಷೆಗೆ ದೇವನಾಗರಿಯಲ್ಲಿ ಬರೆಯುವಷ್ಟು ಸುಲಭವಾಗಿ ಬೇರೆ ಲಿಪಿಗಳಲ್ಲಿ ಬರೆಯಲಾಗುವುದಿಲ್ಲವೆಂದು ತಮ್ಮ ಆತ್ಮವಿಶ್ವಾಸದಿಂದ ಹೇಳಬಹುದು. ಸುಶಿಕ್ಷಿತ ರಿಗೆಲ್ಲ ದೇವನಾಗರಿಲಿಪಿಯ ಪರಿಚಯ ಇದ್ದೇ ಇರುವುದರಿಂದ ಕೊಂಕಣಿಗರೆಲ್ಲ ಈ ಲಿಪಿಯನ್ನೇ ಬಳಸಲು ಪ್ರಾರಂಭಿಸಬೇಕು. ಇತರ ಲಿಪಿಯಲ್ಲಿ ಲಭ್ಯವಿದ್ದ ಸಾಹಿತ್ಯವನ್ನೂ ದೇವನಾಗರಿ ಲಿಪಿಯಲ್ಲಿ ತಿರುಗಿ ಬರೆಯುವ ಏರ್ಪಾಡು ಮಾಡಬೇಕು. ಆಗ ಮಾತ್ರ ಕೊಂಕಣಿಗೆ ಸರ್ವರಿಂದಲೂ ಮಾನ್ಯತೆ ಸಿಕ್ಕೀತು.

# ಕೊಂಕಣಿ – ಅಸ್ತಿತ್ವಕ್ಕಾಗಿ ಹೋರಾಟ

– ನಾ. ಡಿಸೋಜ

ಕೊಂಕಣಿ ಮಾತನಾಡುವವರ ಬಹುದಿನಗಳ ಕನಸು–ಬಹುದಿನಗಳ ಬೇಡಿಕೆ –ಈಗ ನನಸಾಗಿದೆ. ಇತ್ತೀಚೆಗೆ ಕೊಂಕಣಿ ಭಾಷೆ ಭಾರತದ ಸಂವಿಧಾನದ ಎಂಟನೇ ಪರಿಚ್ಛೇದದಲ್ಲಿ ಸೇರ್ಪಡೆಯಾಗಿದೆ. ಕೊಂಕಣಿ ಭಾಷೆಯನ್ನು ಸ್ವತಂತ್ರ ಸಾಹಿತ್ಯ ಭಾಷೆ ಎಂದು ಕೇಂದ್ರ ಸಾಹಿತ್ಯ ಅಕಾಡೆಮಿ ೧೯೭೫ರಲ್ಲಿ ಮಾನ್ಯತೆ ನೀಡಿದರೆ, ೧೯೭೭ರಲ್ಲಿ ಕೊಂಕಣಿಯ ಶ್ರೇಷ್ಠ ಸಾಹಿತ್ಯ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಥಮ ಪುರಸ್ಕಾರ ನೀಡಿತು. ಡಾ॥ ರ. ವಿ. ಪಂಡಿತರು ಕೊಂಕಣಿ ಸಾಹಿತಿಯಾಗಿ ಪ್ರಥಮ ಪದ್ಮಶ್ರೀ ಪ್ರಶಸ್ತಿ ಪಡೆದರು. ಇವೆಲ್ಲ ಈ ಭಾಷೆ ಕಾಲ ಕಾಲಕ್ಕೆ ಪಡೆಯುತ್ತ ಬಂದಿರುವ ಮೌನ ಸನ್ಮಾನಗಳೇ ಆಗಿವೆ. ಆದರೆ ಕೊಂಕಣಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ತನಗೆ ಸಿಗಬೇಕಾದ ಸ್ಥಾನಮಾನಗಳನ್ನು ದೊರಕಿಸಿಕೊಳ್ಳಲು ದೀರ್ಘಕಾಲದ ಹೋರಾಟವನ್ನು ಮಾಡುತ್ತ ಬಂದಿದೆ. ೧೯೩೯ಲ್ಲಿ ಅಖಿಲ ಭಾರತ ಕೊಂಕಣಿ ಸಾಹಿತ್ಯ ಪರಿಷತ್ತಿನ ಜನನವಾದರೆ, ೧೯೪೨ರಲ್ಲಿ ಮುಂಬಯಿಯಲ್ಲಿ ಕೊಂಕಣಿ ಭಾಷಾ ಮಂಡಳದ ಸ್ಥಾಪನೆಯಾಯಿತು. ೧೯೬೬ರಲ್ಲಿ ಕೊಚ್ಚಿಯಲ್ಲಿ ಕೊಂಕಣಿ ಭಾಷಾ ಪ್ರಚಾರ ಸಭೆ ಆರಂಭಗೊಂಡಿತು. ಕೇರಳ, ಮಹಾರಾಷ್ಟ್ರ, ಗೋವೆಗಳಲ್ಲಿ ಕೊಂಕಣಿ ಸಾಹಿತ್ಯ, ಭಾಷೆಯ ಅಭಿವೃದ್ಧಿಯನ್ನು ಗಮನದಲ್ಲಿರಿಸಿಕೊಂಡು ಹಲವಾರು ಸಂಘ–ಸಂಸ್ಥೆಗಳು ಕಾರ್ಯ ನಿರ್ವಹಿಸುತ್ತಿವೆ. ಈ ನಿಟ್ಟಿನಲ್ಲಿ ಕರ್ನಾಟಕದ ಪಾತ್ರ ಮಹತ್ವದ್ದು.

## ಐವತ್ತು ಲಕ್ಷ ಕೊಂಕಣಿಗರು

ಒಂದು ಲೆಕ್ಕಾಚಾರ ಪ್ರಕಾರ ಭಾರತದಲ್ಲಿ ೫೦ ಲಕ್ಷ ಕೊಂಕಣಿ ಮಾತನಾಡುವವರಿದ್ದಾರೆ. ಇವರಲ್ಲಿ ಗೋವೆಯಲ್ಲಿ ೯ ಲಕ್ಷ, ಮಹಾರಾಷ್ಟ್ರದಲ್ಲಿ ೮ ಲಕ್ಷ, ಕೇರಳದಲ್ಲಿ ೪ ಲಕ್ಷ, ಉಳಿದೆಡೆಗಳಲ್ಲಿ ೪ ಲಕ್ಷ ಇದ್ದರೆ ಕರ್ನಾಟಕದಲ್ಲಿಯೇ ೨೫ ಲಕ್ಷಜನ ಕೊಂಕಣಿಯನ್ನು ಮಾತನಾಡುತ್ತಾರೆ. ದೇವನಾಗರಿ, ಕನ್ನಡ, ಮಲೆಯಾಳಿ, ರೋಮನ್ ಮೊದಲಾದ ಲಿಪಿಯಲ್ಲಿ ಬರೆಯಲಾದ ಕೊಂಕಣಿ ಆ ಆ ರಾಜ್ಯ ಭಾಷೆಯ ಶಬ್ದಗಳನ್ನು ಧಾರಾಳವಾಗಿ ತನ್ನಲ್ಲಿ ಮೈಗೂಡಿಸಿಕೊಂಡು ಉಳಿದು ಬೆಳೆದು ಬಂದಿದೆ. ಪ್ರಾದೇಶಿಕ ಭಿನ್ನತೆ, ಬೇರೆ ಭಾಷೆಯ ಒತ್ತಡಗಳು. ಕೆಲವೊಂದು

ಜನಾಂಗಗಳ ಮೇಲೆ ಆಗಿರುವ ಹೊರಗಿನ ಪ್ರಭಾವಗಳಿಂದಲೂ ಕೊಂಕಣಿ ಭಾಷೆ ತಪ್ಪಿಸಿಕೊಂಡಿಲ್ಲ. ಕೊಂಕಣಿ ಕ್ರಿಸ್ತುವರು ಮಾತನಾಡುವ ಶಬ್ದಗಳಲ್ಲಿ, ಅವರು ಇಗರ್ಜಿ ಗಳಲ್ಲಿ ಬಳಸುವ ಶಬ್ದಗಳಲ್ಲಿ ಬಹುತೇಕ ಎಲ್ಲವೂ ಪೋರ್ಚುಗೀಸ್ ಶಬ್ದಗಳು ಎಂದರೂ ತಪ್ಪಾಗದು. ಈ ಎಲ್ಲ ಕಾರಣಗಳಿಂದಾಗಿ ಕೊಂಕಣಿ ಭಾಷೆಯಲ್ಲಿ ಸುಮಾರು ಹದಿನೈದು ಉಪಭಾಷೆಗಳೆಂದು ಕರೆಯಬಹುದಾದ ಡಯಲೆಕ್ಟ್‌ಗಳನ್ನು ಗುರುತಿಸಲಾಗಿದೆ. ಇವು ಒಂದರಿಂದ ಇನ್ನೊಂದು ಕೆಲವೊಂದು ಭಿನ್ನತೆ ವೈಶಿಷ್ಟ್ಯಗಳನ್ನು ಪಡೆದಿವೆ. ಭಟ್ಕಳಿ, ಚೆಟ್ಟಿ, ಡಾಲ್ದಿ, ಫಿರಂಗಿ, ಗೋವಾನಿ, ಗೌಡ ಪ್ರಾಕೃತ, ಗೌಡ ಸಾರಸ್ವತ, ಕಾಂಗೋಣಿ, ಕಾರ್ವಾರಿ, ಖೋಕಿಲಿ, ಕೊಂಕಿಣಿ, ಕೊರ್ಯಾಣಿ, ಕುಡ್ಮಿ, ಮೋಪಣ್, ನವಾಯ್ತಿ ಈ ಹದಿನೈದೂ ಉಪಭಾಷೆಗಳನ್ನು ಧ್ವನಿಶೈಲಿಯ ಮೂಲಕ ಗುರುತಿಸಬಹುದಾಗಿದೆ.

## ಪೋರ್ಚುಗೀಸರ ಕಾಲದಲ್ಲಿ

ಪ್ರಾಕೃತದಿಂದ ತುಂಬ ಪ್ರಭಾವಕ್ಕೆ ಒಳಗಾದ ಕೊಂಕಣಿ ಮೈಥಿಲಿ, ಬಂಗಾಳಿ, ಗುಜರಾತಿ ಮುಂತಾದ ಭಾಷೆಗಳ ಹಾಗೆಯೇ ಸ್ವತಂತ್ರವಾದದ್ದು ಹಾಗೂ ಅತ್ಯಂತ ಪ್ರಾಚೀನವಾದದ್ದು. ಗೋವಾದ ಅರವಲೆ೦ ಎಂಬಲ್ಲಿ ದೊರೆತಿರುವ ಗುಪ್ತರ ಕಾಲದ ಒಂದು ಶಾಸನವೇ ಕೊಂಕಣಿಯ ಅತಿ ಪ್ರಾಚೀನ ಶಾಸನ ಎಂದು ಹೇಳಲಾಗಿದೆ. ಶ್ರವಣಬೆಳಗೊಳದ ಗೊಮ್ಮಟನ ಪಾದತಲ ದಲ್ಲಿರುವ 'ಶ್ರೀ ಚಾವುಂಡರಾಯ ಕರವಿಯಲೆ' ಎಂಬ ಬರಹದ 'ಕರವಿಯಲೆ' (ಮಾಡಿಸಿದ) ಎಂಬ ಶಬ್ದ ಕೊಂಕಣಿಯದ್ದೆ. ೧೧೬೭ರ ಶಿಲಾಹಾರ ರಾಜ ಅಪರಾ ದಿತ್ಯನ ಶಾಸನದಲ್ಲಿ ಸಂತ ನಾಮದೇವನ ಕಾವ್ಯದಲ್ಲಿ ಶ್ರೀ ಚಕ್ರಧರ ಸ್ವಾಮಿಯ 'ಲೀಲಾ ಚರಿತ'ದಲ್ಲಿ ಜ್ಞಾನದೇವನ ಜ್ಞಾನೇಶ್ವರಿಯಲ್ಲಿ ವಿಪುಲವಾದ ಕೊಂಕಣಿ ಶಬ್ದಗಳು ನಮಗೆ ದೊರೆಯುತ್ತವೆ.

ಪೋರ್ಚುಗೀಸರು ಗೋವೆಗೆ ಬರುವ ಮುನ್ನ ಗೋವಾದಲ್ಲಿ ಕೊಂಕಣಿ ಮತ್ತು ಕನ್ನಡ ಭಾಷೆಗಳ ಬಳಕೆ ಯಥೇಚ್ಛವಾಗಿತ್ತು. ಡಾ। ಗ್ರಿಯರ್‌ಸನ್ ಎಂಬ ವಿದ್ವಾಂಸ ತನ್ನ 'Linguistic survey of India' ಎಂಬ ಗ್ರಂಥದಲ್ಲಿ ಈ ವಿಷಯವನ್ನು ಸ್ಪಷ್ಟಪಡಿಸುತ್ತಾರೆ.

ಕ್ರಿ.ಶ. ೧೫೧೦ರಲ್ಲಿ ಗೋವೆಗೆ ಬಂದ ಪೋರ್ಚುಗೀಸರು ಪ್ರಾರಂಭದಲ್ಲಿ ಕೊಂಕಣಿ ಭಾಷೆಯ ದ್ವೇಷಿಗಳಾಗಿರಲಿಲ್ಲ. ಪೋರ್ಚುಗೀಸ್ ಮಿಷನರಿಗಳು ಇಲ್ಲಿಯ ಕೆಲ ಕೊಂಕಣಿ ಮಹಾಕಾವ್ಯಗಳನ್ನು ರೊಮನ್ ಲಿಪಿಯಲ್ಲಿ ಬರೆದರೆಂದು ಹೇಳಲಾಗಿದೆ. ಕೃಷ್ಣದಾಸ ಶರ್ಮ ಅವರಿಂದ ರಚಿತವಾದ 'ರಘುವಂಶಾಚಿ ಕಥಾ' ಮತ್ತು 'ಕೃಷ್ಣ ಚರಿತ' ಕೃತಿಗಳು ಹೀಗೆ ರೋಮನ್ ಲಿಪಿಗೆ ಪರಿವರ್ತಿತವಾದವು.

ಈ ಕೃತಿಗಳ ಹಸ್ತ ಪ್ರತಿಗಳು ಇಂದಿಗೂ ಪೋರ್ಚುಗಲ್ಲಿನ ಬ್ರಾಗಾ ಎಂಬ ಸ್ಥಳದಲ್ಲಿ ಸಂರಕ್ಷಿಸಿ ಇಡಲಾಗಿದೆ ಎಂಬ ಹೇಳಿಕೆ ಇದೆ.

ಕ್ರಮೇಣ ಪೋರ್ಚುಗೀಸರ ಬಿಗಿಮುಷ್ಟಿಯಲ್ಲಿ ಗೋವೆ ಸಿಲುಕಿಕೊಂಡಂತೆ ಕ್ರೈಸ್ತ ಮಿಷನರಿಗಳ ಪ್ರಭಾವ ಹೆಚ್ಚುತ್ತಹೋಯಿತು. ಅವರು ಇಡೀ ಗೋವೆಯನ್ನು ಕ್ರೈಸ್ತ ಮತಾವಲಂಬಿಗಳ ನಾಡನ್ನಾಗಿ ಪರಿವರ್ತಿಸಲು ಯತ್ನಿಸಿದರು. ಹಳೆಯ ಆಚಾರವಿಚಾರ, ನಂಬಿಕೆಗಳನ್ನು ಬಿಡದ ಜನರಿಗಾಗಿ ೧೫೬೦ರ ಸುಮಾರಿಗೆ ಇಂಕ್ವಿಜಿಷನ್ (ಧಾರ್ಮಿಕ ವಿಚಾರಣೆ) ಎಂಬ ಕ್ರೂರ ವಿಚಾರಣೆಯನ್ನು ಆರಂಭಿಸಿದರು. ಇದು ೧೮೧೨ರ ವರೆಗೂ ಗೋವೆಯಲ್ಲಿ ನಡೆದುಕೊಂಡು ಬಂದುದಲ್ಲದೆ ಕ್ರೈಸ್ತಧರ್ಮಕ್ಕೆ ಮತಾಂತರಗೊಂಡೂ ಹಿಂದಿನ ನಂಬಿಕೆಗಳಿಗೆ ಜೋತು ಬಿದ್ದವರನ್ನು ವಿಚಾರಣೆಯ ನಾಟಕವಾಡಿ ವಿವಿಧ ರೀತಿಯಲ್ಲಿ ಶಿಕ್ಷಿಸಲಾಯಿತು. ಜೀವಸಹಿತ ಸುಡಲಾಯಿತು. ಈ ಇಂಕ್ವಿಜಿಷನ್‌ನಿಂದ ಎಷ್ಟು ಸಹಸ್ರ ಜನ ಸತ್ತರೆಂದು ತಿಳಿದುಬಂದಿಲ್ಲ.

ಜನರ ಧಾರ್ಮಿಕ ನಂಬಿಕೆ ಆಚಾರವಿಚಾರಗಳ ಮೇಲೆ ಪೋರ್ಚುಗೀಸರು ದಬ್ಬಾಳಿಕೆ ನಡೆಸಿದ ಹಾಗೆಯೇ ಅವರ ಭಾಷೆಯನ್ನೂ ನಾಶ ಮಾಡುವ ಯತ್ನವನ್ನು ಅವರು ಮುಂದುವರಿಸಿದರು. ಕೊಂಕಣಿ ಗ್ರಂಥಗಳನ್ನು ಹುಡುಕಿ ಅವುಗಳನ್ನು ನಾಶ ಮಾಡಲಾಯಿತು. ೧೬೮೪ರಲ್ಲಿ ಗೋವೆಯ ಎಲ್ಲ ಜನರೂ ಮೂರು ವರ್ಷಗಳಲ್ಲಿ ಪೋರ್ಚುಗೀಸ್ ಭಾಷೆಯನ್ನು ಕಲಿತು ಎಲ್ಲ ವ್ಯವಹಾರವನ್ನೂ ಆ ಭಾಷೆಯಲ್ಲೇ ಮಾಡಬೇಕೆಂಬ ಆಜ್ಞೆ ಹೊರಟಿತು. ೧೭೩೧ರಲ್ಲಿ ಗೋವೆಯ ಕ್ರೈಸ್ತರು ಕೊಂಕಣಿ ಭಾಷೆ ಮಾತನಾಡಬಾರದೆಂದು ಸರಕಾರ ಆಜ್ಞೆ ಹೊರಡಿಸಿತು. ೧೭೪೫ರಲ್ಲಿ ಓರ್ವ ಆರ್ಚ್ ಬಿಷಪ್ ಪೋರ್ಚುಗೀಸ್ ಭಾಷೆ ಅರಿಯದವರು ಪಾದರಿಗಳಾಗುವಂತಿಲ್ಲ ಎಂದು ಫರ್ಮಾನು ಹೊರಡಿಸಿದ. ೧೮೧೨ರಲ್ಲಿ ಕೊಂಕಣಿ ಮಕ್ಕಳು ಶಾಲೆಯಲ್ಲಿ ಕೊಂಕಣಿ ಮಾತನಾಡಬಾರದೆಂದು ಆಜ್ಞೆ ನೀಡಲಾಯಿತು.

ಜನ ಜೀವನದ ಮೇಲೆ ಜನರ ಧಾರ್ಮಿಕ ಸಾಂಸ್ಕೃತಿಕ ಬದುಕಿನ ಮೇಲೆ ನಡೆದ ಈ ದೌರ್ಜನ್ಯದಿಂದಾಗಿ ಗೋವೆಯ ಕ್ರಿಸ್ತುವರು ಅನ್ಯಮತೀಯರು ಗೋವೆಯನ್ನು ಬಿಟ್ಟು ಹೊರಬಂದ ಸಾಧ್ಯತೆಗಳಿವೆ. ಇಕ್ಕೇರಿ ಅರಸರು ಕ್ರಿಶ್ಚಿಯನರಿಗೆ ಮಾತ್ರವಲ್ಲ ಕೊಂಕಣಿ ಮಾತನಾಡುವ ವ್ಯಾಪಾರಿಗಳಿಗೆ, ಪಂಡಿತರಿಗೆ ಆಶ್ರಯದಾತರಾದರು. ಕೊಂಕಣಿ ಭಾಷೆಯನ್ನು ಹತ್ತಿಕ್ಕಲು ಪೋರ್ಚುಗೀಸರಿಗೆ ಕೊನೆಯ ತನಕ ಸಾಧ್ಯವಾಗಲಿಲ್ಲ ಎಂಬುದು ಕೂಡ ಇಲ್ಲಿ ಸ್ಮರಿಸಿಕೊಳ್ಳಲೇಬೇಕಾದ ವಿಷಯ. ಅವರು ಧರ್ಮಪ್ರಚಾರವನ್ನು ಕೊಂಕಣಿಯಲ್ಲೇ ಮಾಡಬೇಕಾಯಿತು. ಅವರು ಕೊಂಕಣಿ ಶಾಲೆಗಳನ್ನೂ ತೆರೆದರು. ಪೋರ್ಚುಗೀಸ್ ವಿದ್ವಾಂಸರು ಕೊಂಕಣಿ ಗ್ರಂಥಗಳನ್ನು ಬರೆದರು. ಕೊಂಕಣಿ ಗ್ರಂಥಗಳು ಗೋವೆಯಲ್ಲಿ ಮುದ್ರಣಗೊಂಡವು.

೧೯೮೭ರಲ್ಲಿ ಗೋವೆ ಸ್ವತಂತ್ರ ರಾಜ್ಯವಾಗಿ ಕೊಂಕಣಿ ಅದರ ಅಧಿಕೃತ ಭಾಷೆಯೂ ಆಯಿತು. ಈ ಭಾಷೆ ಏನೆಲ್ಲ ಅವಸ್ಥೆಗಳನ್ನು ಅನುಭವಿಸಿಯೂ ತನಗೊಂದು ಸ್ಥಾನವನ್ನು ದೊರಕಿಸಿಕೊಂಡಿತು ಎಂಬುದು ಒಂದು ಅಚ್ಚರಿಯ ವಿಷಯವೆ.

## ಜಾನಪದ ಸಂಪತ್ತು

ಪೋರ್ಚುಗೀಸರ ಆಕ್ರಮಣ ದಬ್ಬಾಳಿಕೆಯನ್ನು ಸಹಿಸಿಕೊಂಡೂ ಈ ಭಾಷೆ ಉಳಿಯಲು ಮುಖ್ಯ ಕಾರಣ 'ಕೊಂಕಣಿಯ ಜಾನಪದ ಸಾಹಿತ್ಯ ಶ್ರೀಮಂತಿಕೆ' ಎಂಬ ಅಂಶವನ್ನು ಪಂಡಿತರು ಒಪ್ಪಿಕೊಂಡಿದ್ದಾರೆ. ಕೇರಳ, ಗೋವಾ, ಕರ್ನಾಟಕದ ಕೊಂಕಣಿ ಮಾತನಾಡುವ ಎಲ್ಲ ಜನ, ಜಾತಿ ಪಂಗಡಗಳ ಭೇದವಿಲ್ಲದೆ ಕೊಂಕಣಿ ಜಾನಪದ ಸಂಪತ್ತನ್ನು ಉಳಿಸಿಕೊಂಡುಬಂದಿದ್ದಾರೆ. ಇಲ್ಲಿಯ ಜಾನಪದ ಗೀತೆ, ನೃತ್ಯಗಳಲ್ಲಿ ವಿದೇಶೀಯ ಮೆರುಗನ್ನು ಕೂಡ ಕಾಣಬಹುದಾಗಿದೆ. ಪೋರ್ಚುಗೀಸರ ಕೆಲ ನೃತ್ಯಗಳ ಭಾವಭಂಗಿಗಳು, ಹಾಡಿನ ರಾಗಧಾಟಿಗಳನ್ನು ಕೊಂಕಣಿ ಜಾನಪದ ತನ್ನಲ್ಲಿ ಮೈಗೂಡಿಸಿಕೊಂಡಿದೆ.

ಗೋಫ, ದೇಖಣಿ, ಪುಗಡಿ, ಮಾಂಡೋ – ಇವೆಲ್ಲ ಜನಪದ ನೃತ್ಯಗಳು. ಕುಣಬಿಗಳ ನೃತ್ಯ ಕೂಡ ಪ್ರಖ್ಯಾತವಾದದ್ದು. ತಿಯಾತ್ರ ಎಂಬುದು ಪೋರ್ಚುಗೀಸ ರಿಂದ ಬಂದಿರಬಹುದಾದ ಮತ್ತೊಂದು ಕಲಾಪ್ರಕಾರ, ಥಿಯೇಟರ್ ಅನ್ನುವುದರ ಮತ್ತೊಂದು ರೂಪವಾಗಿರಬಹುದಾದ ತಿಯಾತ್ರ ನೃತ್ಯ, ಹಾಸ್ಯ, ನಾಟಕಗಳ ಮಿಶ್ರ ಮನರಂಜನೆ.

ಜೊತೆಗೆ ಓವಿ ಅಥವಾ ವೆರ್ಸ ಎಂದು ಕರೆಯಲಾಗುವ ಒಂದು ಪದ್ಯ ಬಂಧ ಕೊಂಕಣಿಯಲ್ಲಿ ಜನಪ್ರಿಯ. ಮದುವೆಯ ಸಂಭ್ರಮದ ಎಲ್ಲ ಸಂದರ್ಭ ಗಳಲ್ಲೂ ಹೆಣ್ಣುಮಕ್ಕಳು ಈ ಓವಿ ಅಥವಾ ವೆರ್ಸಗಳನ್ನು ಹೇಳುತ್ತಾರೆ. ಕೊಂಕಣಿ ಕ್ರಿಸ್ತುವರು, ಸಾರಸ್ವತರು, ಖಾರ್ವಿ, ಭಂಡಾರಿಗಳು ಮದುವೆಯ ಸಮಯದಲ್ಲಿ ಹಾಡುಗಳ ಹೊನಲನ್ನೇ ಹರಿಸುತ್ತಾರೆ.

ಕುಣಬಿಗಳು ರಾಮಾಯಣದ ಕತೆಯನ್ನು ಕಾವ್ಯರೂಪದಲ್ಲಿ ಹೇಳಿಕೊಂಡು ನರ್ತಿಸುತ್ತಾರೆ.

> 'ಬಾಂದ್ಲೊ ಸೇತುವ್ಹೋ ಫತ್ರಾಚೋ
> ಹಾಡ್ಲಿ ರಾಣಿ ರಾಮಾಚಿ'

'ಕಲ್ಲಿನ ಸೇತುವೆ ಕಟ್ಟಿ; ರಾಮನ ರಾಣಿಯ ತಂದೆವು' ಎಂದು ರಾತ್ರಿಯೆಲ್ಲ ಈ ಕತೆ ಸಾಗುತ್ತದೆ.

ಜಾನಪದ ಕತೆಗಳು, ಕಥನಗೀತೆಗಳು, ದೀರ್ಘಕತೆಗಳು, ಒಗಟು, ಗಾದೆ ಗಳು ಮಕ್ಕಳ ಹಾಡು, ಲಾಲಿ ಪದಗಳು ಕೊಂಕಣಿಯಲ್ಲಿ ಹೇರಳ.

ಗುಮ್ಟೆ ಪದಗಳು ಕೊಂಕಣಿಯಲ್ಲಿ ಜನಪ್ರಿಯ. ದೈವಭಕ್ತಿಯ ಜೊತೆಗೆ ವ್ಯಂಗ್ಯ, ತೀಕ್ಷ್ಣ, ತಮಾಷೆ, ವಿನೋದದ ಪದಗಳೂ ಇವೆ.

## ಸಾಹಿತ್ಯ

ಎಲ್ಲ ಭಾಷೆಗಳ ಹಾಗೆಯೇ ಕೊಂಕಣಿಯಲ್ಲಿ ಮೊಟ್ಟಮೊದಲು ಕಾಣಿಸಿಕೊಂಡದ್ದು ಕಾವ್ಯ. ಮರಾಠಿಯ ಪ್ರಭಾವ ಕೊಂಕಣಿ ಕಾವ್ಯದ ಮೇಲೆ ಆದದ್ದು ನಿಜವಾದರೂ ಅನಂತರ ಅದು ಸ್ವತಂತ್ರವಾಗಿ ಬೆಳೆಯಿತೆಂಬುದು ಸುಳ್ಳಲ್ಲ. ಕೊಂಕಣಿ ಭಾಷೆಯ ಭಾಗವತ, ಲಿಂಗಪುರಾಣ, ರಾಮಾಯಣ, ವೀರಭದ್ರ ಚರಿತೆ – ಇವೆಲ್ಲ ಕೇರಳದಲ್ಲಿ ಜನಪ್ರಿಯವಾಗಿದ್ದ ಕೃತಿಗಳು. 'ಗೊಡ್ಡೆ ರಾಮಾಯಣ' ಎಂದೇ ಪ್ರಸಿದ್ಧವಾದ ಕೃತಿಯನ್ನು ಕೊಂಕಣಿ ಭಾಷಾ ಪ್ರಚಾರ ಸಭಾ ಹೊರತಂದಿದೆ.

'ರಿಗ್ಲೋ ಜೇಜು ಮೊಳ್ಯಾಂತುಂ' (ಏಸು ಶಿಲುಬೆಗೇರಿ ಅನಂತರ ಪುನರುತ್ಥಾನ ಹೊಂದಿದ ಕತೆ) ಈಗಲೂ ಕ್ರಿಸ್ತುವರಲ್ಲಿ ಮನೆ ಮಾತಾಗಿರುವ ಕೃತಿ. ಇದರ ರಚನಕಾರ ಫಾದರ್ ಜೋಕಿಮ್ ಜಿ. ಮಿರಾಂಡ.

ಫಾದರ್ ಥಾಮಸ್ ಸ್ಟೀವನ್ಸ್ ಬರೆದ ಕ್ರಿಸ್ತ ಪುರಾಣ ಮರಾಠಿಯೋ ಕೊಂಕಣಿಯೋ ಎಂಬ ವಾದ ಇದೆಯಾದರೂ, ಈ ಕ್ರಿಸ್ತ ಪುರಾಣವನ್ನು ಕೊಂಕಣಿ ಕ್ರೈಸ್ತರು ತಮ್ಮ ಮನೆಗಳಲ್ಲಿ ನಿತ್ಯ ಹೇಳುತ್ತಿದ್ದುದನ್ನು ಡಾ। ಬುಕಾನನ್ ತಮ್ಮ ಪ್ರವಾಸ ಕಥನದಲ್ಲಿ ಉದಾಹರಿಸುತ್ತಾರೆ. ಕೃತಿಯು 'ಕೊಂಕಣಿ ಪುರಾಣ' ಎಂಬ ಖ್ಯಾತಿಯನ್ನು ಪಡೆದಿದೆ ಎಂಬುದನ್ನು ಇಲ್ಲಿ ಹೇಳಲೇಬೇಕು.

ಆಧುನಿಕ ಯುಗಕ್ಕೆ ಬಂದರೆ ಕಾವ್ಯ ಕತೆ, ಕಾದಂಬರಿ, ನಾಟಕ, ಪತ್ರಿಕೋದ್ಯಮದಲ್ಲಿ ಗೋವೆಯ ಕೊಂಕಣಿಗರು ಅಗಾಧವಾದ ಕೆಲಸವನ್ನು ಮಾಡಿಕೊಂಡು ಬಂದಿದ್ದಾರೆ. ಆಧುನಿಕ ಕೊಂಕಣಿ ಸಾಹಿತ್ಯದ ಮೂಲ ಪುರುಷ ಶೆಣ್ಯೆ ಗೊಂಯ್‌ಬಾಬ್, ಬಾಕಿ ಬಾಬ್ ಬೋರ್ಕರ್, ಸರ್ದೇಸಾಯ್, ಗೋಮ್ಸ್ – ಇವರೆಲ್ಲ ಕವಿಗಳಾಗಿ ಅಗಸ್ಟಿನೋ ಫರ್ನಾಂಡಿಸ್, ರಾಮಚಂದ್ರ ನಾಯಕ್ ಮೊದಲಾದವರು ನಾಟಕಕಾರರಾಗಿ, ಪುಂಡಲೀಕ್ ನಾಯಕ್, ರಿಜಿನಾಲ್ಡ ಫರ್ನಾಂಡಿಸ್, ದಾಮೋದರ್ ಮೌಸ್ಸೊ, ವರ್ತಕ್ ಇವರೆಲ್ಲ ಕಾದಂಬರಿಕಾರ ಸಣ್ಣ ಕತೆಗಾರರಾಗಿ ಕೊಂಕಣಿಯ ಶ್ರೀಮಂತಿಕೆಯನ್ನು ಹೆಚ್ಚಿಸಿದ್ದಾರೆ. ಕೊಂಕಣಿ ಗೋವೆಯ ರಾಜ್ಯ ಭಾಷೆಯಾದ ಮೇಲೆ ಗೋವೆಯ ಲೇಖಕರಿಗೆ ಹೊಸ ಉತ್ಸಾಹ ಹುರುಪು ಬಂದಿದೆ. ಅಲ್ಲಿ ಕೊಂಕಣಿಯ ಅಭಿವೃದ್ಧಿ ಕುರಿತಂತೆ ಸಾಕಷ್ಟು ಕೆಲಸ ಕಾರ್ಯಗಳು ನಡೆದಿವೆ.

ಕೇರಳ, ಮಹಾರಾಷ್ಟ್ರದಲ್ಲಿರುವ ಕೊಂಕಣಿಗರ ಸಂಖ್ಯೆ ಅಲ್ಪವಾದದ್ದು. ಮಹಾರಾಷ್ಟ್ರದವರು ಕೊಂಕಣಿಯನ್ನು ದೇವನಾಗರಿಯಲ್ಲಿ ಬರೆಯುವುದರ ಮೂಲಕ ತಮ್ಮನ್ನು ಗೋವೆಯವರ ಜತೆ ಗುರುತಿಸಿಕೊಳ್ಳುತ್ತಾರೆ. ಕೇರಳದವರ ಪ್ರಯತ್ನ ಕೂಡ ಇದೇ ಆಗಿದೆ. ಆದರೆ ನಾವಿಲ್ಲಿ ಪ್ರಮುಖವಾಗಿ ಯೋಚಿಸ ಬೇಕಾದ್ದು ಕರ್ನಾಟಕದ ಕೊಂಕಣಿಗಳ ಬಗ್ಗೆ.

## ಕನ್ನಡ ಕೊಂಕಣಿ

ಬೇರೆ ರಾಜ್ಯಗಳ ಜತೆ ಹೋಲಿಸಿದಾಗ ಅತ್ಯಧಿಕ ಸಂಖ್ಯೆಯಲ್ಲಿ ಕೊಂಕಣಿಗರು ಇರುವುದು ಕರ್ನಾಟಕದಲ್ಲಿಯೇ. ಇವರೆಲ್ಲ ಕನ್ನಡ ಬಲ್ಲವರು. ಮೊದಲನೆಯದಾಗಿ ಇವರು ಕನ್ನಡಿಗರು ಕೂಡ. ಗೋವಿಂದ ಪೈಗಳ ಹಾಗೆ, ದಿನಕರ ದೇಸಾಯಿಯವರ ಹಾಗೆ, ಚಿತ್ತಾಲ, ಕಾಯ್ಕಿಣಿಯವರ ಹಾಗೆ ಇಲ್ಲಿ ಕೆಲವರು ಕನ್ನಡದ ಮೂಲಕವೇ ಮುಂದೆ ಬಂದವರು. ದಿನಕರ ದೇಸಾಯಿ ಯವರು ಕನ್ನಡದಲ್ಲೂ ಬರೆಯುತ್ತಿದ್ದರು. ಕೊಂಕಣಿಯಲ್ಲೂ ಬರೆಯುತ್ತಿದ್ದರು. ಆದರೂ ಕನ್ನಡದವರ ಪಾಲಿಗೆ ದೇಸಾಯಿ ಕನ್ನಡಿಗರೇ. ದಿನಕರರೇ ಒಂದು ಚುಟುಕದಲ್ಲಿ ಹೇಳಿದ್ದಾರೆ –

> **'ಕೊಂಕಣಿಯ ಜೊತೆಗೆ ಕನ್ನಡ ಮಾತನಾಡಿ**
> **ಒಂದುಗೂಡಿದವು ಎರಡು ಜೀವನಾಡಿ**
> **ಎರಡು ಪಕಳೆಯ ಹೂವು ಮಿಡಿಯಾಗಿ ಕಾಯಿ**
> **ಕಾಯಿ ಹಣ್ಣಾದೊಡನೆ ಜೀವನ ಮಿಠಾಯಿ'**

ಹೀಗೆ ಮಿಠಾಯಿ ಆದವರು ಕೆಲವರು. ಆದರೆ ಕೆಲವರು ಇಲ್ಲಿ ಕೊಂಕಣಿಗೆ ಅಂಟಿಕೊಂಡವರೇ 'ಇದ್ದಾರೆ.

ಕನ್ನಡ ಲಿಪಿಯ ಕೊಂಕಣಿ ಸಾಹಿತ್ಯ ಇಂದು ಬೃಹತ್ ಪ್ರಮಾಣದಲ್ಲಿ ಬೆಳೆದು ನಿಂತಿದೆ. ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಪಡೆದ ಕೊಂಕಣಿಯ ಖ್ಯಾತ ಕವಿ, ಚಾ. ಫ್ರಾ. ದಕೊಸ್ತರಿಂದ ಹಿಡಿದು ವಿ. ಜೆ. ಪಿ. ಸಾಲ್ಡಾನಾ, ಎ.ಬಿ. ಲೋಬೊ–ಮುಂತಾದ ಪ್ರಖ್ಯಾತ ಕಾದಂಬರಿಕಾರರು, ಕತೆಗಾರರು ಕೊಂಕಣಿಯಲ್ಲಿ ಇದ್ದಾರೆ. ಆದರೆ ಕನ್ನಡ ಲಿಪಿಯ ಕೊಂಕಣಿ ಸಾಹಿತ್ಯಕ್ಕೆ ಅತಿ ಪ್ರಾಚೀನ ವೆನ್ನಬಹುದಾದ ಇತಿಹಾಸವೇನಿಲ್ಲ.

ಏನೇನೋ ಕಾರಣಗಳಿಂದಾಗಿ ಗೋವೆಯನ್ನು ಬಿಟ್ಟುಬಂದ ಕೊಂಕಣಿಗರಿಗೆ ಇಕ್ಕೇರಿ ಅರಸರು ಸೋಂದೆಯ ದೊರೆಗಳು ಇಲ್ಲಿ ಆಶ್ರಯ ನೀಡಿದರು. ಕೊಂಕಣಿ ಜನ ಕ್ರಮೇಣ ಕನ್ನಡಿಗರೇ ಆದರು.

ಅವರು ಹೊತ್ತು ತಂದ ಕೊಂಕಣಿ ಸಾಹಿತ್ಯವೆಲ್ಲ 'ತೋಂಡಿ' ಸಾಹಿತ್ಯವಾಗಿ ಉಳಿಯಿತು. ಕ್ರಮೇಣ ಇದನ್ನೇ ಅವರು ಕನ್ನಡ ಲಿಪಿಯಲ್ಲಿ ಬರೆದಿದ್ದರೆಂದು ಹೇಳಲಾಗಿದೆ. ಕೊಂಕಣಿ ಕ್ರಿಸ್ತುವರಲ್ಲಿ ಕೆಲ ಭಕ್ತಿಗೀತೆಗಳು ಧಾರ್ಮಿಕ ಗಾಯನ ಗಳು ತುಂಬಾ ಜನಪ್ರಿಯವಾಗಿದ್ದವು. 'ಶೆಂಬೋರ್ ಕಂತಿಗೋ' ಎಂಬ ನೂರು ಗೀತೆಗಳ ಒಂದು ಸಂಗ್ರಹ ಅನಂತರ ಪ್ರಕಟವಾದ ಒಂದು ಅಪೂರ್ವ ಕೃತಿ. ೧೮೮೨ರ ಸುಮಾರಿಗೆ ಮಂಗಳೂರಿನಲ್ಲಿ ತೆರೆಯಲಾದ ಕೊಡಿಯಾಲ್‌ಬೈಲ್ ಛಾಪ ಖಾನೆ ಕನ್ನಡ ಲಿಪಿಯ ಕೊಂಕಣಿ ಸಾಹಿತ್ಯದ ಆರಂಭಕ್ಕೆ ಭದ್ರ ತಳಹದಿಯನ್ನು ಹಾಕಿಕೊಟ್ಟಿತು.

ಪ್ರಾರಂಭದಲ್ಲಿ ಕೊಂಕಣಿಯಲ್ಲಿ ಮುದ್ರಣಗೊಂಡ ಪುಸ್ತಕಗಳೆಂದರೆ ಕೇವಲ ಜಪ, ಪ್ರಾರ್ಥನೆ, ಭಕ್ತಿಗೀತೆಯ ಕೃತಿಗಳೆ. ಕ್ರೈಸ್ತ ಭಕ್ತಿ ಸಾಹಿತ್ಯದ ನಡುವೆಯೂ ಪಾದರಿ ಲೂವಿಸ್ ಸೋಜ ಅನ್ನುವವರು ಕೊಂಕಣಿ ಗಾದೆ, ಒಗಟು, ಮದುವೆ ಹಾಡು, ಲಾಲಿ ಪದ, ಹಾಡುಗಳ ಒಂದು ಸಂಗ್ರಹವನ್ನು ಹೊರತರುವುದರ ಮೂಲಕ ಕನ್ನಡ ಲಿಪಿಯ ಕೊಂಕಣಿ ಸಾಹಿತ್ಯಕ್ಕೆ ಒಂದು ಹೊಸ ತಿರುವನ್ನು ತಂದುಕೊಟ್ಟರು.

೧೯೧೨ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಬೆಂದೂರಿನ ಇಬ್ಬರು ಯುವಕರು ಮತ್ತೊಂದು ದಿಟ್ಟ ಹೆಜ್ಜೆಯನ್ನಿಟ್ಟರು. 'ಕೊಂಕ್ಣಿ ದಿರ್ವೆಂ' ಎಂಬ ಪತ್ರಿಕೆಯನ್ನು ಲುವಿಸ್ ಮಸ್ಕರೇನಸ್ ಮತ್ತ ಲುವಿಸ್ ಕಣ್ಣಪ್ಪ ಎಂಬವರು ಪ್ರಕಟಿಸುವುದರ ಮೂಲಕ ಕೊಂಕಣಿ ಸಾಹಿತ್ಯ ಕ್ಷೇತ್ರದಲ್ಲಿ ನವೋದಯ ಉಂಟಾಯಿತು.

ಲುವಿಸ್ ಮಸ್ಕರೇನಸ್ ಕೊಂಕಣಿ ಅಭಿಮಾನಿ ಮಾತ್ರವಲ್ಲ ಪ್ರತಿಭಾವಂತ ಲೇಖಕರಾಗಿದ್ದರು. ಇವರು ಬರೆದ 'ಅಬ್ರಹಾಮನ ಯಜ್ಞದಾನ' ಎಂಬ ಕೊಂಕಣಿ ನಾಟಕ ಇಂದಿಗೂ ಆ ಭಾಷೆಯ ಅಪೂರ್ವ ನಾಟಕವಾಗಿ ಉಳಿದಿದೆ. ಮಸ್ಕರೇನಸ್ ಉತ್ತಮ ಕವಿ ಕೂಡ. 'ದಿರ್ವೆಂ' ಪತ್ರಿಕೆ ಕೊಂಕಣಿ ಕತೆ ಕಾದಂಬರಿ ನಾಟಕಗಳು ಹೊರಬರಲು ಕಾರಣವಾಯಿತು. ಶೇಕ್ಸ್‌ಪಿಯರನ ನಾಟಕಗಳು ಕೊಂಕಣಿಯಲ್ಲಿ ಬಂದವು. ಜುಜೆ, ಪೆದ್ರು ಜುವಾಂವ್, ಅಲೆಕ್ಸ್ ಎ. ಪಾಯ್ಸ್, ಕೈತಾನ್ ಲೋಬೊ, ವಿಲಯಮ್ ಸಿಕ್ವೇರ, ಗ್ರೆಗೊರ್ ಮಿನೇಜ್ ಇನ್ನೂ ಅಸಂಖ್ಯಾತ ಲೇಖಕರು ಕೊಂಕಣಿಯಲ್ಲಿ ಕಾಣಿಸಿಕೊಂಡರು. ಕ್ರಿಸ್ತುವರಲ್ಲದ ಕೊಂಕಣಿ ಭಾಷಿಗರು ಕೂಡ ಕನ್ನಡ ಲಿಪಿಯ ಕೊಂಕಣಿ ಸಾಹಿತ್ಯ ಕೃಷಿಗೆ ಮುಂದಾದರು.

ಕೊಂಕಣಿ ಪತ್ರಿಕೆಗಳ ಪ್ರಕಟಣೆ ಪ್ರಾರಂಭವಾಯಿತು.

ಕೊಂಕಣಿ ನಾಟಕಗಳು ಜನಪ್ರಿಯವಾದವು.

ಕೊಂಕಣಿ ಭಾಷೆಗೆ ಒಂದು ಮಾನ ಗೌರವ ಬಂದುದರಿಂದ ವಿಶೇಷವಾಗಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕೊಂಕಣಿಯ ವಾತಾವರಣ ಮೂಡಿತು.

ಇಂದು ಕೊಂಕಣಿ ಆರ್ಕೆಸ್ಟ್ರಾಗಳು, ಕೊಂಕಣಿ ನಾಟಕ ಸ್ಪರ್ಧೆಗಳು ನಡೆಯುತ್ತಿವೆ. ರಾಕ್ಣೊ, ಸೇವಕ, ಉಮಾಳೊ, ಉದೇವ್, ಝುಲೊ, ಮಿತ್ರ್, ಕಾಣಿಕ್, ಪಂಚ್ಕಾದಾಯಿ – ಮೊದಲಾದ ಕೊಂಕಣಿ ಪತ್ರಿಕೆಗಳು ಇಂದು ಪ್ರಕಟವಾಗುತ್ತಿವೆ. ಕೊಂಕಣಿ ಚಲನಚಿತ್ರಗಳು ಬಂದಿವೆ. ವಿಶ್ವವಿದ್ಯಾಲಯಗಳಲ್ಲಿ ಕೊಂಕಣಿ ಪೀಠ ಸ್ಥಾಪನೆಯಾಗಿದೆ. ಕೊಂಕಣಿ ಅಕಾಡೆಮಿಯ ರಚನೆಯಾಗಿದೆ.

ಇಷ್ಟಾದರೂ ಕೊಂಕಣಿಯ ಅಭಿವೃದ್ಧಿ ಮತ್ತೂ ಆಗಬೇಕಾಗಿದೆ. ಕೊಂಕಣಿ ಮಾತನಾಡುವ ಎಲ್ಲ ಜನರಲ್ಲಿ ಏಕತೆಯ ಮನೋಭಾವ ಮೂಡಬೇಕಿದೆ. ಕರ್ನಾಟಕದ ಕ್ರಿಸ್ತುವರ ಹಾಗೆಯೇ ಉಳಿದ ಕೊಂಕಣಿ ಜನ ಈ ಭಾಷೆಯನ್ನು ಪ್ರೀತಿಸಿ ಗೌರವಿಸಬೇಕಾಗಿದೆ. ನಿಂತು ಹೋಗಿರುವ ಕೊಂಕಣಿ ಲೆಕ್ಸಿಕನ್ ಕೆಲಸ ಆರಂಭವಾಗಬೇಕಿದೆ.

---

೧೯೯೨ – ಡಿಸೆಂಬರ್ ೨೦, 'ಸುಧಾ' ಬೆಂಗಳೂರು.

# ಕೊಂಕಣಿ ಭಾಷೆಯ ಎರಡು ಸಮಸ್ಯೆಗಳು

– ಗೌರೀಶ ಕಾಯ್ಕಿಣಿ

---

ಕೊಂಕಣಿ ಭಾಷೆಯವರು – ದೊಡ್ಡ ಸಮುದಾಯದ ಅಲ್ಪಸಂಖ್ಯಾತರು. ನಮ್ಮಲ್ಲಿ ಈಚೆಗೆ ನಮ್ಮ ಭಾಷೆಯ ಬಗೆಗೆ ಪ್ರಜ್ಞೆ, ಅಭಿಮಾನಗಳು, ಆಸಕ್ತಿ, ಪ್ರಯತ್ನಗಳು ತುಂಬ ತೀವ್ರವಾಗಿ ಜಾಗೃತವಾಗಿವೆ, ಊರ್ಜಿತವಾಗಿವೆ. ಇದೀಗ ನಮ್ಮ ಅನನ್ಯತೆ–ಅಸ್ಮಿತೆ (Identity)ಯ ಸಲುವಾಗಿದೆ.

ಆದರೆ ಇಲ್ಲಿ ಒಂದು ದೊಡ್ಡ ಕಾಲ್ತೊಡಕು ಅಡ್ಡೈಸುತ್ತಿದೆ. ನಮ್ಮ ಕೊಂಕಣಿಗೆ ಅಧಿಕೃತ ಸರ್ವಮಾನ್ಯ ಭಾಷೆ ಯಾವುದು? ಅನುರೂಪವಾದ ಲಿಪಿ ಯಾವುದು? ಶತಮಾನಗಳಿಂದಲೂ ಕೊಂಕಣಿ ಒಂದು ಖಾಸಗೀ ಕೋಮಲ ಬಾಯ್ನುಡಿಯಾಗಿಯೇ, ಆಡುಮಾತಾಗಿಯೇ ನಾಲಿಗೆಯಲ್ಲಿ ನಲಿದಾಡುತ್ತ ಬಂದಿದೆ. ಕೊಂಕಣಿಯ ಭಗಿನಿಯಾದ ಮಹಾರಾಷ್ಟ್ರೀ ಪ್ರಾಕೃತವು ಈ ಅವಧಿಯಲ್ಲಿ ಹಲವಾರು ಐತಿಹಾಸಿಕ ಕಾರಣಗಳಿಂದ ಪರಿಷ್ಕಾರಹೊಂದಿ ಇಂದಿನ ಮರಾಠೀ ಭಾಷೆಯಾಯಿತು. ಆದರೆ ನಮ್ಮ ಅಸ್ಮಿತೆಗೆ ಅನುರೂಪವಾಗಿ ಕೊಂಕಣಿಯು ಈಚೆಗೆ–ಬಹುಶಃ ಗೋವೆಯು ನಮ್ಮ ಗಣರಾಜ್ಯಗಳಲ್ಲಿ ಒಂದಾದ ಮೇಲೆ? – ಅಧಿಕೃತ ಭಾಷೆಯಾಗಿ ಕಾಯಕಲ್ಪ ಹೊಂದುತ್ತಲಿದೆ. ರಾಷ್ಟ್ರದ ಅಧಿಕೃತ ಭಾಷೆಗಳಲ್ಲಿ ಒಂದಾಗಿ ಮನ್ನಣೆ ಹೊಂದಿದೆ. ಅಂದಿನಿಂದ ಕೊಂಕಣಿಯ ಬಗೆಗೆ ನಮ್ಮ ಅಪೇಕ್ಷೆ–ಅಭೀಪ್ಸೆಗಳು ಖಚಿತವಾಗಿ, ಸಂದರ್ಭಕ್ಕೆ ಸಮಯೋಚಿತವಾಗಿ ರೂಪಗೊಳ್ಳಬೇಕಾಗಿದೆ. ರೂಢಿಗೊಳ್ಳಬೇಕಾಗಿದೆ.

ಕೊಂಕಣಿ ಭಾಷಿಕರು – ಅವರು ಯಾವ ಸಮಾಜದವರೇ ಆಗಿರಲಿ– ಗೋಮಾಂತಕದಲ್ಲಿ ಪ್ರಾದೇಶಿಕ ಬಹುಸಂಖ್ಯೆಯಲ್ಲಿ ನೆಲಸಿದ್ದರೂ ಹೊರಗೆ ವಿಶೇಷತಃ ಕರಾವಳಿಯಗುಂಟ ಕೇರಳ–ಕೊಚ್ಚಿಯ ವರೆಗೆ ಹಬ್ಬಿದ್ದು ಅದರಾಚೆಗೆ ಭಾರತದಲ್ಲಿ ವ್ಯಾಪಿಸಿದ್ದಾರೆ. ಅಲ್ಲದೆ ಇವರು ಕೇವಲ ಬ್ರಾಹ್ಮಣ–ಸಾರಸ್ವತ, ಗೌಡ ಸಾರಸ್ವತರೇ ಅಲ್ಲ. ಅನೇಕ ಇತರ ಸಮಾಜಗಳಲ್ಲಿ ಗಮನೀಯ ಸಂಖ್ಯೆಯಲ್ಲಿ ಕಂಡು ಬರುತ್ತಾರೆ. ವೈಶ್ಯರಲ್ಲಿ ಕೊಂಕಣಿ ಜನ ಇದ್ದಾರೆ. ಹಾಗೆಯೇ ಬೇರೆ ಬೇರೆ ಕೈಗಾರಿಕೆ ಕಸಬುಗಾರಿಕೆಗಳಲ್ಲಿ, ಮಾಟಗೌಡ, ಕಮ್ಮಾರ, ಬಡಿಗ, ಉಪ್ಪಾರ (ಗಾವಡಿ), ಕುಂಬಾರ, ಚಮಗಾರ ಇತ್ಯಾದಿಯಾಗಿ ಅಲ್ಲದೆ ಕ್ರೈಸ್ತ, ಮುಸ್ಲಿಮರೂ ವ್ಯಾಪಕ ಪ್ರಮಾಣದಲ್ಲಿ ಇದ್ದಾರೆ. ಖಾರ್ವೀ, ಗಾಬುತರು, ಹಿಂದುಗಳು,

ಅಂತೆಯೇ ದಾಲ್ಜಿಗಳು ಇಸ್ಲಾಮಿ –ಇವೆಲ್ಲ ಹಿರಿಕಿರಿ ಸಮಾಜಗಳು ಕೊಂಕಣಿಯ ಒಂದೇ ತಾಟಿನಿಂದ ತುತ್ತು ಉಣ್ಣುತ್ತಾರೆ. ಕೊಂಕಣಿ ಮೊಲೆಹಾಲನ್ನೇ ಹೀರಿ ಬೆಳೆದಿದ್ದಾರೆ. ಇವರ ಕೊಂಕಣಿಯು ಸ್ವರಾಘಾತ, ಉಚ್ಚಾರ, ವಾಗ್ಧೋರಣೆ, ವಾಕ್‌ಪ್ರಯೋಗ ಮುಂತಾದವುಗಳಲ್ಲಿ ಪ್ರಾಯೋಗಿಕ (ಪ್ರಾದೇಶಿಕವೂ ಸೇರಿ) ವಿಶೇಷತೆಗಳನ್ನು ರೂಢಿಸಿಕೊಂಡಿವೆ.

ಕನ್ನಡದಲ್ಲಿಯೂ ಬೈಲಸೀಮೆಯ, ಕರಾವಳಿಯ, ಹಳೆಮೈಸೂರಿನ, ನಿಜಾಂ ಹೈದಾರಾಬಾದಿನ ರೂಪಗಳಲ್ಲಿ ಭೇದವಿದೆ. ಹಾಗೆಯೇ ಹೈಗರ ಕನ್ನಡ, ಹಾಲಕ್ಕಿಗಳ ಕನ್ನಡ, ನಾಡವರ ಕನ್ನಡ ಒಂದೇ ರೂಪದ್ದಲ್ಲ. ಬ್ರಿಟನ್ನಿನಲ್ಲಿಯೂ ಇಂಗ್ಲಂಡ್, ವೇಲ್ಸ್, ಸ್ಕಾಟ್ಲಂಡ್, ಐರ್ಲಂಡ್‌ಗಳ ಇಂಗ್ಲಿಷ್ ವೈಖರಿ ಬೇರೆ ಬೇರೆ. ಆದರೂ ಅಧಿಕೃತ ಸ್ವರೂಪದಲ್ಲಿ ಈ ಭೇದಗಳು ಗೌಣ. ಸಂಖ್ಯಾಬಲ, ರಾಜಕೀಯ ಪ್ರಭಾವ, ಸಂಸ್ಕೃತಿಯ ಪ್ರಭಾವ ಇತ್ಯಾದಿಗಳಿಂದಾಗಿ ಈ ಅಧಿಕೃತ ರೂಪವು ಆಕಾರಗೊಳ್ಳುತ್ತದೆ. ನಮ್ಮ ಕೊಂಕಣಿಯಲ್ಲಿ ಈ ಸಮನ್ವಯ ಆಗುವುದೆಂದು? In the long run ಎನ್ನುತ್ತಾರೆ. ಆದರೆ How long should we run?

ಈ ದೃಷ್ಟಿಯಿಂದ ಗೋಮಾಂತಕೀಯ ಕೊಂಕಣಿಯೇ ಒಟ್ಟಿನಲ್ಲಿ ವರ್ಧಿಷ್ಣುವೂ ವರ್ಚಸ್ವಿಯೂ ಆಗಲಿದೆ, ಆಗುತ್ತಿದೆ.

ನಮ್ಮ ಭಾಷೆಗೊಂದು ಪ್ರಮಾಣಭೂತ (Standardised) ಸ್ವರೂಪದ ಅಭಾವವಿದೆ. ದೇವನೊಬ್ಬ ನಾಮ ಹಲವು ಎಂಬಂತೆ ಒಂದೊಂದು ಸಮಾಜದ ಕೊಂಕಣಿ ಒಂದೊಂದು ತರಹ. ಶಬ್ದಗಳ ಆಯ್ಕೆ, ಬಳಕೆ, ವಾಕ್‌ಪ್ರಯೋಗ (Idioms)ಗಳ ರೀತಿ, ವಾಗ್ಧೋರಣೆ, ವಾಕ್ಯರಚನೆ ಎಲ್ಲವೂ ಒಂದರಿಂದ ಒಂದು ಬೇರೆ.

ಕಳೆದ ವರ್ಷ ಒಂದು ಕನ್ನಡ ದೈನಿಕವು ನಮ್ಮ ಸುವಿಖ್ಯಾತ ಕಥೆಗಾರ ಶ್ರೀ ಯಶವಂತ ಚಿತ್ತಾಲರ ಕಥೆಗಳ ಕೊಂಕಣಿ ಅನುವಾದಗಳ ಒಂದು ಸಂಕಲನವನ್ನು ನನಗೆ ವಿಮರ್ಶೆಗಾಗಿ ಕಳುಹಿಸಿತ್ತು. ವಿಮರ್ಶೆ ಆ ಪತ್ರಿಕೆಯಲ್ಲಿ ಪ್ರಕಟವೂ ಆಯಿತು. ಆದರೆ ನನಗೇ ಅದರಿಂದ ತೃಪ್ತಿಯಾಗಲಿಲ್ಲ. ಏಕೆ? ಅಲ್ಲಿಯ ಕೊಂಕಣಿಯು ಗೋಮಾಂತಕೀಯ ಭಾಷೆಯಾಗಿತ್ತು. (ಲೇಖಕರು ಕ್ರೈಸ್ತರು). ಅಲ್ಲಿಯ ಅನೇಕ ಶೈಲಿ ಶಬ್ದ ಪ್ರಯೋಗಗಳ ಸೂಕ್ಷ್ಮವು ನನಗೇ ಸರಿಯಾಗಿ ಅರ್ಥವಾಗಲಿಲ್ಲ (ಪುಣ್ಯಕ್ಕೆ ನಾನು ಮೂಲ ಕಥೆಗಳನ್ನು ಕನ್ನಡದಲ್ಲಿಯೇ ಓದಿದ್ದೆ.) ಆ ಭಾಷೆಯ ವಿಶಿಷ್ಟ ಒನಪು ನನಗೆ ಓದಲಿಕ್ಕೆ ತುಂಬ ಕ್ಲಿಷ್ಟವಾಯಿತು. – ಆದರೂ ಕನ್ನಡ ಲಿಪಿಯಲ್ಲಿ, ಕರಾವಳಿಯ ನಮ್ಮ ಭಾಗದವರ ಕೊಂಕಣಿ ಪದಪ್ರಯೋಗದಲ್ಲಿ ಸಾಕಷ್ಟು ವ್ಯತ್ಯಾಸವಿರುತ್ತದೆ. ಆದರೂ ನಮ್ಮ ಕೊಂಕಣಿಯಿಂದ ಈ ಗೋಮಾಂತಕೀಯ ಕೊಂಕಣಿಯ ದನಿ–ಬನಿ ಗಾವುದ ದೂರ.

ದಿ। ಶೆಣೈ ಗೊಯ್‌ಬಾಬ್, ದಿ। ಬಾಕೀಬೋರಕರ, ಡಾ। ಮನೋಹರ ಸರ್‌ದೇಸಾಯಿ, ಡಾ। ಆರ್. ವಿ. ಪಂಡಿತರ ಕೃತಿಗಳನ್ನು ನಾನು ಆಸ್ಥೆಯಿಂದ ಓದಿದ್ದೇನೆ. ಈ ಗದ್ಯ, ಪದ್ಯ ಕೃತಿಗಳ ಭಾಷೆ-ಶೈಲಿ ನಮಗೆ ಗೋವೆಯ ಹೊರಗಿನ ಕೊಂಕಣಿಗರಿಗೆ ಕೆಲಮಟ್ಟಿಗೆ ಕಬ್ಬಿಣದ ಕಡಲೆಯೇ. (ಹಲ್ಲಿಲ್ಲದವರಿಗೋ ಕಡಲೆಯೇ ಕಬ್ಬಿಣ?)

ಇದಕ್ಕೆಲ್ಲ ಮುಖ್ಯ ವಾಹಕ ಮಾಧ್ಯಮ ಲಿಪಿ-ದೃಢೀಕರಣದ ಏಕಮೇವ ಸಾಧನ. ನಮ್ಮ ಭಾಷೆಗೆ ಒಂದು ಲಿಪಿ ಇಲ್ಲ (ತುಳು ಭಾಷೆಗೂ ಅವರದೇ ಆದ ಲಿಪಿ ಇಲ್ಲ. ಆದರೆ ಕನ್ನಡ ಲಿಪಿಯನ್ನು ಅದು ತನ್ನದಾಗಿಸಿ ಮುಂದೆ ಸಾಗಿದೆ.) ಈಗಾಗಲೇ ಕೊಂಕಣಿಯನ್ನು ದೇವನಾಗರಿಯಲ್ಲಿಯೂ ಕನ್ನಡ ಲಿಪಿಯಲ್ಲಿಯೂ ಬರೆಯಲಾಗುತ್ತದೆ. ಹಿಂದೀ, ಮರಾಠಿಗಳೂ ದೇವನಾಗರಿಯನ್ನು ತಮ್ಮ ಲಿಪಿಯನ್ನಾಗಿ ಎಂದೋ ಬಳಸುತ್ತ ಬಂದಿವೆ. ಇಲ್ಲಿ ಒಂದು ಸಣ್ಣ ತೊಡಕು-ಶಬ್ದ ಶುದ್ಧಿಯ ಮಟ್ಟಿಗೆ ದೇವನಾಗರಿಯಲ್ಲಿ ಹ್ರಸ್ವ ಸ್ವರಗಳಿಗೆ ಅಕ್ಷರಗಳಿಲ್ಲ. ಕೊಂಕಣಿಯಲ್ಲಿ ಅವು ಇವೆ. ಎ, ಒ – ಇವು. ಹಾಗೆಯೇ ಇದೇ ಸ್ವರಗಳ ವಿವೃತ ಉಚ್ಚಾರಗಳೂ ಇಲ್ಲ. ಉದಾಃ 'ಬ್ಯಾಟ'. (ಭೇಟಿ ಅಲ್ಲ). ಇದು ಇಂಗ್ಲಿಷ್ batದಲ್ಲಿಯ 'a' ಸ್ವರದಂತೆ. 'ಟ್ಯಾಲ'. (ಟೇಲ ಅಲ್ಲ). ಈ ಸ್ವರೋಚ್ಚಾರಗಳು ಕೊಂಕಣಿಯಲ್ಲಿವೆ. ಇವನ್ನು ದೇವನಾಗರಿಯಲ್ಲಿ ಊಹಿಸಿ ರೂಢಿಸಿಕೊಳ್ಳಬೇಕಾಗುತ್ತದೆ. ಕನ್ನಡ ಲಿಪಿ ಇದಕ್ಕೆ ಸುಲಭ. ಆದರೆ ಇಲ್ಲಿಯೂ ವಿವೃತ ಉಚ್ಚಾರ ಊಹೆಗೇ ಬಿಡಬೇಕು. ಈ ಮಟ್ಟಿಗೆ ಕೊಂಕಣಿಗೆ ಕನ್ನಡ ಲಿಪಿ ಹೆಚ್ಚು ಅನುಕೂಲ.

ಇದಕ್ಕೂ ದೊಡ್ಡ ತೊಡಕು ಒಂದಿದೆ. ಅದು ಸಾಮಾಜಿಕ ದೃಷ್ಟಿಯಿಂದ. ಇಂದು ಗೋಮಾಂತಕೀಯ ಕೊಂಕಣಿ ದೇವನಾಗರಿಲಿಪಿ ಆಯ್ದುಗೊಂಡಿದೆ. (ಇನ್ನು, ಅಲ್ಲಿ ಕೆಲವೆಡೆಗೆ ರೋಮನ್ ಲಿಪಿಯಲ್ಲಿಯೂ ಕೊಂಕಣಿಯನ್ನು ಬರೆಯಲಾಗುತ್ತದೆ – ಪೋರ್ಚುಗೀಸಿನ ಪ್ರಭಾವದಿಂದ.) ಇದರಿಂದ ಮರಾಠಿಯ ಮೂಲ ರೂಪದೊಂದಿಗೆ ಸಾಮ್ಯವಿರುವ ಅದರ ಸೋದರಿಯಾದ ಈ ಕೊಂಕಣಿಯು ಕ್ರಮೇಣ ಅಥವಾ ಭರದಿಂದ ಮರಾಠೀಕರಣ ಹೊಂದಲು ಈ ಲಿಪಿಸಮಾನತೆ ಅನುಕೂಲವಾಗುವ ಭಯವಿದೆ. ಇದರಿಂದ ಕೊಂಕಣಿಯ ನೈಜ ಸ್ವರೂಪಕ್ಕೆ ಗಂಡಾಂತರ. ಈ ಕುತ್ತಿನಿಂದ ಕೊಂಕಣಿಯನ್ನು ಕಾಪಾಡುವ ಬಗೆ ಹೇಗೆ? ದೇವನಾಗರಿಯನ್ನು ಬಿಟ್ಟು ಕನ್ನಡ ಲಿಪಿಯನ್ನು ಅಂಗೀಕರಿಸುವುದೇ? ಇದನ್ನು ಗೋಮಾಂತಕೀಯರು ಒಪ್ಪುವರೇ? ಹಿಂದೆ ಫಾದರ್ ಸ್ಟೀಫನ್ 'ಕ್ರಿಸ್ತ ಚರಿತೆ'ಯನ್ನು ಕೊಂಕಣಿಯಲ್ಲಿ ರಚಿಸಿದಾಗ ಆ ಕೊಂಕಣಿಯನ್ನು Lingua Kanari ಎಂದು ಕರೆದಿದ್ದನು (ಇಲ್ಲಿ 'ಕ್ಯಾನರಿ' ಎಂಬುದು 'ಕನ್ನಡ'ವೆಂದೋ? 'ಕಿನಾರಾ'-

ಕರಾವಳಿ ಎಂದೊ?) ಇದು ಕನ್ನಡದೊಂದಿಗೆ ಕೊಂಕಣಿ ಸಾಮರಸ್ಯವನ್ನೇ ತೋರಿಸುವಂತಿದೆ.

ಇನ್ನು ಎರಡೂ ಲಿಪಿಗಳನ್ನು ಬಳಸಬಹುದೆಂದರೆ ಎರಡು ದೋಣಿಗಳಲ್ಲಿ ಕಾಲಿಟ್ಟಂತೆ. ರಾಷ್ಟ್ರಭಾಷೆಯೆಂದು ಹಿಂದೆ ಬಾಪೂಜೀ 'ಹಿಂದೀ ಯಾನೆ ಹಿಂದೂಸ್ಥಾನಿ' ಪ್ರತಿಪಾದಿಸಿ ಅದನ್ನು ದೇವನಾಗರಿ ಮತ್ತು ಉರ್ದೂ ಎರಡೂ ಲಿಪಿಗಳಲ್ಲಿ ಬರೆಯಬಹುದೆಂದರು. ಆದರೆ ಆ ಪ್ರಯೋಗ ಸೋಲನ್ನೆ ಕಂಡಿತು.

ಕೊಂಕಣಿ ತನ್ನ ತಾಯಿ, ಕನ್ನಡ ಸಾಕುತಾಯಿ. ತಾಯಿಯ ಮೊಲೆಯಲ್ಲಿ ಹಾಲಿಲ್ಲವೆಂದು ಕನ್ನಡ ಪಯಸ್ವಿನಿಯಿಂದ ನಾನು ಪೋಷಣೆಯನ್ನು ಪಡೆದೆ -ಎಂದಿದ್ದರು ದಿ। ರಾಷ್ಟ್ರಕವಿ ಗೋವಿಂದ ಪೈ, ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷಪೀಠದಿಂದ. ಇಂದು ಕನ್ನಡದಂತೆ ಕೊಂಕಣಿಯು 'ಪಯಸ್ವಿನಿ'ಯಾಗುತ್ತಲಿದೆ. ಆದರೆ ದುರ್ದೈವದ ಸಂಗತಿಯೆಂದರೆ ಈ ನವನಿಧಿಗೆ ಒಂದೇ ಬಗೆಯ ನಾಣ್ಯ ಚಲಾವಣೆಯಲ್ಲಿ ಇಲ್ಲ. ನಾಣ್ಯದ ವಿನಿಮಯ ಮೌಲ್ಯವೂ ಒಂದೇ ಬಗೆಯಾಗಿಲ್ಲ. ಗೋಮಾಂತಕದ ಕೊಂಕಣಿ ಸಾಹಿತಿಗಳೂ ಕವಿಗಳೂ ದೇವನಾಗರಿ ನಾಣ್ಯದಲ್ಲಿ ತಮ್ಮ ನಿಧಿಯ ಬೆಲೆಯನ್ನು ಸಂಪತ್ತನ್ನು ಸಾಕಷ್ಟು ಅಭಿವೃದ್ಧಿಗೊಳಿಸಿದ್ದಾರೆ - ಗೊಳಿಸುತ್ತಿದ್ದಾರೆ. ಆದರೆ ಕನ್ನಡ ಕರಾವಳಿಯಿಂದ ಕೇರಳದ ವರೆಗೆ ಚದುರಿಹೋದ ಕೊಂಕಣಿ ಜನಕ್ಕೆ ಯಾವ ಲಿಪಿ? ಎಂಥ ಭಾಷೆ? ಗೋಮಾಂತಕದಲ್ಲಿ ಕೊಂಕಣಿಯ ವಿಕಾಸಕ್ಕೆ ಐತಿಹಾಸಿಕ ಕ್ರಮದಲ್ಲಿ ಮರಾಠೀ ಹಾಗೂ ಪೋರ್ಚುಗೀಸ್ ವರ್ಚಸ್ಸು ಪ್ರಭಾವಿಯಾದ ಕಾರಣವಾಯಿತು. ನಮ್ಮ ಕರಾವಳಿಯ ಕೊಂಕಣಿಯು ಅದೇ ಸಾಹಸವನ್ನು ಕನ್ನಡದ ನೆರವಿನಿಂದ ಸಾಧಿಸುವುದು ಸಾಧ್ಯವೇ? ಸಾಧುವೇ?

---

೧೯೮೯. 'ಉದಯವಾಣಿ' ದೈನಿಕ, ಮಣಿಪಾಲ.

---

*(ಈ ಲೇಖನದಲ್ಲಿ ಗೌರೀಶ ಕಾಯ್ಕಿಣಿಯವರು ಉಲ್ಲೇಖಿಸಿರುವ ಯಶವಂತ ಚಿತ್ತಾಲರ ಕಥಾಸಂಕಲನ -'ಖೇಲ್ ಆನಿ ಹರ್ ಕಥಾ' (1986) ಭಾಷಾಂತರ - ಮೆಲ್ವಿನ್ ರೋಡ್ರಿಗಸ್ ಮತ್ತು ವಿಲ್ಲಿ ಡಿ'ಸಿಲ್ವ - ಸಂ.)*

# ಕೊಂಕಣಿಯ ಸ್ಥಿತಿ – ಗತಿ

– ಕೆ. ಕೆ. ಪೈ
ಭಾಷಾಂತರ : ಶಾಂಭವಿ ಉಪ್ಪಿನಕೋಟೆ.

---

ಉದ್ಘಾಟಕರಾದ ಮಾನನೀಯ ಶ್ರೀಯುತ ಡಾ॥ ಸುನೀತಿಕುಮಾರ ಚಟರ್ಜಿ, ಸ್ವಾಗತಾಧ್ಯಕ್ಷ ಮತ್ತು ಮಹಾರಾಷ್ಟ್ರ, ಕರ್ನಾಟಕ, ಕೇರಳ ಹಾಗೂ ಎಲ್ಲೆಡೆಗಳಿಂದ ಬಂದು ಈ ದಿನ ಇಲ್ಲಿ ಸೇರಿರುವ ಎಲ್ಲ ಸಹೋದರರ, ಸಹೋದರಿಯರಿಗೆ ವಿಶ್ವಾಸ ಪೂರ್ವಕ ವಂದನೆಗಳು.

ಈ ಸಮ್ಮೇಳನದಲ್ಲಿ ಭಾಗಿಯಾಗುವ ಸುವರ್ಣಾವಕಾಶ ನನಗೆ ದೊರೆತಿರುವುದು ಮತ್ತು ಕೊಂಕಣಿ ಮಾತೆಯ ಉದ್ಧಾರಕ್ಕಾಗಿ ನಾವೆಲ್ಲ ಇಲ್ಲಿ ಸೇರಿರುವುದು ತುಂಬಾ ಸಂತೋಷದ ವಿಷಯ. ನಮ್ಮ ಮಾತೃಭಾಷೆ ಕೊಂಕಣಿ. ನಮಗದು ಪ್ರಥಮ ಭಾಷೆ. ಭಾಷಾಗಣದಲ್ಲಿ ಮಾತೃಭಾಷೆಗೆ ಶ್ರೇಷ್ಠವಾದ ಸ್ಥಾನವಿದೆ. ಅವಳು ನಮ್ಮ ಸಂಸ್ಕೃತಿಯನ್ನು, ಪರಂಪರೆಯನ್ನು ರಕ್ಷಿಸುತ್ತಾಳೆ. ದೂರದೂರದಲ್ಲಿರುವ ನಮ್ಮ ಸಹೋದರರ ಪರಿಚಯವನ್ನು ಮಾಡಿಕೊಡುತ್ತಾಳೆ. ಹಾಲಿನಂತೆ ಸಿಹಿಯಾದ ಈ ಭಾಷೆ ನಮಗೆ ಆದಿಯಿಂದ ದೊರೆತದ್ದು. ಇವಳ ಉದ್ಧಾರಕ್ಕಾಗಿ ಪ್ರಯತ್ನಿಸುವುದು ನಮ್ಮ ಕರ್ತವ್ಯ.

ಗೋವಾ ಸ್ವತಂತ್ರವಾದಾಗ ಇತರ ಭಾಷೆಗಳಂತೆ ಕೊಂಕಣಿ ಭಾಷೆಯ ಅಭಿವೃದ್ಧಿ ಸಾಧ್ಯವಾಗಲಿಲ್ಲ. ಕಾರಣ, ಕೊಂಕಣಿಭಾಷೆಯ ಕ್ಷೇತ್ರ ಗೋವಾಕ್ಕೆ ಸೀಮಿತವಾದುದು. ನಮ್ಮ ಕುಲದೇವರು, ಕುಲಾಚಾರ, ಕುಲಪರಂಪರೆ ಮತ್ತು ಜೀವನದರ್ಶನ ಇವೆಲ್ಲದರ ವಾಸ್ತವಿಕ ತವರು ಗೋವಾ. ಪಾರತಂತ್ರ್ಯದ ಸಂಕೋಲೆ ಕಳಚಿಕೊಂಡ ಅನಂತರ ಭಾಷೆಯ ಬೆಳವಣಿಗೆಗಿದ್ದ ಎಲ್ಲ ಅಡಚಣೆಗಳೂ ದೂರವಾಗಿ ಕೊಂಕಣಿ ಗಂಗೋತ್ರಿಯ ಪ್ರವಾಹ ಹರಿಯಲು ಆರಂಭವಾಯಿತು. ಕೊಂಕಣಿ ಸುವರ್ಣಯುಗದ ಪ್ರಶಂಸೆ ಕೇಳತೊಡಗಿತು. ಕಲಾವಿದರು ಕೊಂಕಣಿಯಲ್ಲಿ ಸಾಹಿತ್ಯ ರಚಿಸಲು ತೊಡಗಿದರು. ಕೊಂಕಣಿ ಅತ್ಯಂತ ಶ್ರುತಿಮಧುರ ಭಾಷೆ ಎಂದು ಪ್ರಖ್ಯಾತ ಭಾಷಾತಜ್ಞರು ಮಾನ್ಯ ಮಾಡಿದ್ದಾರೆ. ಭಾಷೆಯ ಉದ್ಧಾರಕ್ಕಾಗಿ ನಮ್ಮವರನ್ನು ಜಾಗೃತಗೊಳಿಸಿ ಅವರಲ್ಲೊಂದು ಬಲಿಷ್ಠ ಒಕ್ಕೂಟವಾಗಲು ಅಧಿಕ ಲಕ್ಷ್ಯ ಕೊಡಬೇಕು. ಅದಕ್ಕಾಗಿ ಹೆಚ್ಚಿನ ಕಾರ್ಯ ಆಗಬೇಕಾಗಿದೆ. ಇದರರ್ಥ ನಮ್ಮವರು ಇತರ ಭಾಷೆಗಳಲ್ಲಿ ಮಾಡುತ್ತಾ ಬಂದಿರುವ ಸಾಧನೆಯನ್ನು ಅಲಕ್ಷಿಸಬೇಕೆಂದಲ್ಲ. ಇತರ ಭಾಷೆಗಳಲ್ಲಿರುವ ಸಂಪತ್ತನ್ನು ನಮ್ಮ ಭಾಷೆಗೆ

ತರುವುದು ಮತ್ತು ನಮ್ಮ ಭಾಷೆಯಲ್ಲಿನ ಉಚ್ಚ ಸಾಹಿತ್ಯವನ್ನು ಅನ್ಯ ಭಾಷೆಗಳಿಗೆ ಅನುವಾದ ಮಾಡಬೇಕಾಗಿದೆ.

ಗೋವಾದಲ್ಲಿ ಹೆಚ್ಚಿನ ಜನರ ಮಾತೃಭಾಷೆ ಕೊಂಕಣಿ. ಗೋವಾದ ಎತ್ತರ ಭಾಗದಲ್ಲಿರುವ ಮಾಳವಣದಿಂದ ಕೊಚ್ಚಿಯ ವರೆಗೆ ಹೆಚ್ಚಿನ ಜನರು ಕೊಂಕಣಿ ಯಲ್ಲಿ ಮಾತನಾಡುತ್ತಾರೆ. ಪಶ್ಚಿಮ ಘಟ್ಟದ ಶಿರಸಿ, ಬೆಳಗಾವಿ ಪ್ರದೇಶಗಳಲ್ಲಿ ಹಾಗೂ ಮುಂಬಯಿ, ಬೆಂಗಳೂರು, ಮದ್ರಾಸು, ಕಲ್ಕತ್ತಾ, ದೆಹಲಿ ಮತ್ತು ಹೊರ ದೇಶಗಳಿಂದ ಮಲೇಶ್ಯಾ, ಇರಾನ್, ಆಫ್ರಿಕಗಳಲ್ಲಿ ಕೂಡ ಕೊಂಕಣಿ ಭಾಷೆಯಲ್ಲಿ ಮಾತಾಡುವವರಿದ್ದಾರೆ. ಈ ಭಾಷೆಯ ಬಗ್ಗೆ ಅಭಿಮಾನಪಡುವವರಿದ್ದಾರೆ. ಮುಂಬಯಿಯಲ್ಲಿ ಕೊಂಕಣಿ ವಾರಪತ್ರಿಕೆ, ಮಾಸಿಕಗಳು ಬಹಳ ಹಿಂದಿನಿಂದಲೂ ಪ್ರಕಟಗೊಳ್ಳುತ್ತಿವೆ. ಕೊಂಕಣಿ ನಾಟಕಗಳೂ ಪ್ರದರ್ಶಿತವಾಗುತ್ತಿವೆ. ಮಂಗಳೂರಿನಲ್ಲಿ ಕೂಡ ಅನೇಕ ವಾರಪತ್ರಿಕೆ, ಮಾಸ ಪತ್ರಿಕೆಗಳು ಪ್ರಕಟವಾಗುತ್ತಿವೆ. ನಾಟಕಗಳೂ ಪ್ರದರ್ಶಿತವಾಗುತ್ತಿವೆ. ಮುಂಬಯಿ, ಧಾರವಾಡ ಮತ್ತು ಪಣಜಿ ಆಕಾಶವಾಣಿ ಗಳಲ್ಲಿ ಕೊಂಕಣಿ ಕಾರ್ಯಕ್ರಮಗಳು ಪ್ರಸಾರವಾಗುತ್ತಿವೆ. ಕೊಂಕಣಿ ಭಾಷಾ ಪ್ರಚಾರ ಸಭೆಯ ಪ್ರಯತ್ನದಿಂದಾಗಿ ಕೊಚ್ಚಿ, ತಿರುವನಂತಪುರಂ, ಆಲೆಪ್ಪಿ, ಚಿತ್ತೂರು ಮತ್ತು ಕಲ್ಕತ್ತ ಆಕಾಶವಾಣಿಗಳಲ್ಲಿ ಕೊಂಕಣಿ ಕಾರ್ಯಕ್ರಮಗಳು ಪ್ರಾರಂಭವಾಗಿವೆ. ಪೋರ್ಚುಗೀಸ್, ಇಂಗ್ಲಿಷ್, ಮರಾಠಿ ಮತ್ತು ಕನ್ನಡ, ಮಲಯಾಳಂ ಇತ್ಯಾದಿ ಭಾಷೆಗಳ ಪ್ರಖ್ಯಾತ ಕೊಂಕಣಿ ಲೇಖಕರು ಕೊಂಕಣಿ ಸಾಹಿತ್ಯ ರಚಿಸುವಲ್ಲೂ ಹೆಚ್ಚಿನ ಶ್ರದ್ಧೆ ತೋರಿದ್ದಾರೆ. ಸಭೆ, ಸಮ್ಮೇಳನಗಳಲ್ಲಿ ಕೊಂಕಣಿ ಭಾಷೆಯಲ್ಲಿ ಮಾತನಾಡಲು ಹಿಂಜರಿಯಬಾರದು. ಕೊಂಕಣಿ ಕಾವ್ಯ ಸ್ಪರ್ಧೆ, ನೃತ್ಯ, ಲೋಕಗೀತೆಗಳು ಹೆಚ್ಚಿನ ಪ್ರದೇಶಗಳಲ್ಲಿ ಪ್ರಚಲಿತದಲ್ಲಿವೆ.

ಸ್ವಾತಂತ್ರ್ಯದ ಕಾಲದಲ್ಲಿ ಗೋವಾಕ್ಕೆ ಬಂದ ಜವಾಹರಲಾಲ ನೆಹರೂ ಮತ್ತು ಇತರ ಮಂತ್ರಿಗಳು ಸಂದರ್ಶನದ ವೇಳೆ ಕೊಂಕಣಿ ಭಾಷೆಯಲ್ಲಿ ಮಾತ ನಾಡಲು ಸಾಧ್ಯವಾಗದ ಬಗ್ಗೆ ಜನರಲ್ಲಿ ಕ್ಷಮೆ ಯಾಚಿಸಿದ್ದರೆಂಬ ಬಗ್ಗೆ ವರದಿ ಗಳಿವೆ. ಗೋವಾದ ಪ್ರೈಮರಿ ಶಾಲೆಗಳಲ್ಲಿ ಕೊಂಕಣಿ ಮಾಧ್ಯಮಿಕ ಶಿಕ್ಷಣ ಭಾಷೆ ಯಾಗಿದೆ. ಕೊಂಕಣಿಯನ್ನು ಅಲ್ಲಿಯ ಶಾಲೆಗಳಲ್ಲಿ ಮಕ್ಕಳಿಗೆ ಕಲಿಸುತ್ತಿರುವುದು ನನಗೆ ಬಹಳ ಸಂತೋಷ. ಗೋವಾ ಸರಕಾರ ವ್ಯಾವಹಾರಿಕ ಭಾಷೆಯಾಗಿ ಮೂರು ಅಥವಾ ನಾಲ್ಕು ಭಾಷೆಗಳನ್ನು ಆಯ್ದುಕೊಂಡಿದೆ. ಅದರಲ್ಲಿ ಒಂದು ಭಾಷೆ ಕೊಂಕಣಿ. ಕೇರಳದಲ್ಲಿರುವ ಮಾಧ್ಯಮ ಭಾಷೆಗೆ ದೋಷ ಬಾರದಂತೆ ಕೊಂಕಣಿಯನ್ನು ಒಂದು ಪಠ್ಯವಿಷಯವಾಗಿ ಕಲಿಸುತ್ತಿದ್ದಾರೆ. ಕಲ್ಕತ್ತಾ ವಿಶ್ವ ವಿದ್ಯಾನಿಲಯದಲ್ಲಿ ಕೊಂಕಣಿ ಅಧಿಕಾರ ಪೀಠಸ್ಥಾಪನೆಗಾಗಿ ಎರಡು ಆಯೋಗ ಗಳನ್ನು ಕಲ್ಕತ್ತ ವಿಶ್ವವಿದ್ಯಾನಿಲಯ ಸಿಂಡಿಕೇಟ್ ನಿಯುಕ್ತಮಾಡಿರುವುದಾಗಿ ಕೊಂಕಣಿ ಪ್ರಚಾರ ಸಭೆ ತಿಳಿಸಿದೆ. ಐಕ್ಯರಾಷ್ಟ್ರ ಸಭೆಯಲ್ಲಿ ಭಾರತದ ನಿಯುಕ್ತ

ಪ್ರತಿನಿಧಿಗಳಾಗಿದ್ದ ರೆವರೆಂಡ್ ಫಾದರ್ ಜೆರೋಮ್‌ಡಿಸೋಜಾ ಅವರು ಪ್ರಥಮವಾಗಿ ಕೊಂಕಣಿಯಲ್ಲಿ ಭಾಷಣ ನೀಡಿದರು. ವಿಲಿಯಂ ಕಾರೆ, ಜಾನ್ ವಿಲ್ಸನ್, ಜೂಲ್ಸ್ ಬ್ಲೋಕ್, ಜೆ.ಎಚ್. ಇಟನ್ ಮತ್ತು ಡಾ। ಎಸ್. ಎಂ. ಕತ್ರೆ ಇವರೆಲ್ಲ ಕೊಂಕಣಿ ಭಾಷೆಗೆ ಒಂದು ಸ್ವತಂತ್ರ ಸ್ಥಾನವಿದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಕೊಂಕಣಿ ಪ್ರಾಕೃತದಿಂದ ಬಂದ ಭಾಷೆಗಳಲ್ಲಿ ಒಂದು. ಹಿಂದಿ, ಮೈಥಿಲಿ, ಬಂಗಾಲಿ, ಅಸ್ಸಾಮಿ, ಒರಿಯಾ, ಗುಜರಾತಿ, ಮರಾಠಿಯಂತೆ ಇವಳೂ ಕೂಡ ಸಂಸ್ಕೃತದ ಒಬ್ಬ ಮಗಳು. ಹಾಗಾಗಿ ದೇವನಾಗರಿ ಅವಳ ಸ್ವಾಭಾವಿಕ ಲಿಪಿ. ಸ್ವರಗಳಲ್ಲಿ ಕೊಂಚ ಬದಲಾವಣೆ ಮಾಡಿದರೆ ದೇವ ನಾಗರಿ ನಮ್ಮ ಭಾಷೆಗೆ ಸಮನಾಗಿ ಹೊಂದಿಕೊಳ್ಳುತ್ತದೆ. ಕೆಲವು ಕಾರಣಗಳಿಂದಾಗಿ ನಾವು ಕೊಂಕಣಿ ಭಾಷೆಯನ್ನು ರೋಮನ್, ಕನ್ನಡ, ಮಲಯಾಳ ಮತ್ತು ಅರಬ್ಬಿ ಲಿಪಿಯಲ್ಲಿ ಬರೆಯುತ್ತಿದ್ದೇವೆ. ಈ ರೀತಿ ಹಲವು ಲಿಪಿಗಳಲ್ಲಿ ಬರೆಯುವುದರಿಂದಾಗಿ ನಮ್ಮಲ್ಲಿನ ಒಗ್ಗಟ್ಟಿಗೆ ಅಡಚಣೆಗಳು ಬರಬಹುದು. ಹಾಗಾಗಿ ದೇವನಾಗರಿ ಲಿಪಿಯಲ್ಲೇ ಕೊಂಕಣಿ ಸಾಹಿತ್ಯ ರಚಿಸಬೇಕಾಗುತ್ತದೆ. ಕೇರಳದಲ್ಲಿ ಕೊಂಕಣಿಯನ್ನು ನಾಗರಿ ಲಿಪಿಯಲ್ಲಿ ಕಲಿಸುತ್ತಾರೆ. ಶಾಲೆಗಳಲ್ಲಿ ಕೊಂಕಣಿ ಭಾಷೆ ಕಲಿಸುವುದಕ್ಕಾಗಿ ನೀಡಿದ ತನ್ನ ಆದೇಶದಲ್ಲಿ ಕೇರಳ ಸರಕಾರ, ದೇವನಾಗರಿ ಕೊಂಕಣಿ ಭಾಷೆಯ ಲಿಪಿಯೆಂದು ತಿಳಿಸಿದೆ. ಹೆಚ್ಚು ಜನರಿಗೆ ನಾಗರಿಲಿಪಿ ತಿಳಿದಿದೆ. ತಿಳಿಯದಿದ್ದಲ್ಲಿ ಪ್ರಸ್ತುತ ಅದನ್ನು ಕಲಿಯುವುದು ಅವಶ್ಯ ಮತ್ತು ಮಕ್ಕಳಿಗಾದರೂ ಅದನ್ನು ಕಲಿಸ ಬೇಕು. ಆಗ ಮಾತ್ರ ಲಿಪಿ ವಿಷಯದಲ್ಲಿರುವ ತೊಂದರೆಗಳು ದೂರವಾಗುತ್ತವೆ.

ಒಂದೇ ಲಿಪಿಯಲ್ಲಿ ಸಾಹಿತ್ಯ ನಿರ್ಮಾಣವಾದರೆ ಹಲವು ರೀತಿಯ ಪ್ರಯೋಜನಗಳಿವೆ.

೧. ನಮ್ಮ ಸಮುದಾಯದಲ್ಲಿ ಒಗ್ಗಟ್ಟು ಬೆಳೆಯುತ್ತದೆ.

೨. ಶಬ್ದದ ಉಚ್ಚಾರಣೆಯಲ್ಲಿ ಶುದ್ಧ ಸ್ವರೂಪ ಉಳಿಯುತ್ತದೆ.

೩. ನಮ್ಮ ವೇದಭಾಷೆಯಾದ ಸಂಸ್ಕೃತ, ರಾಷ್ಟ್ರಭಾಷೆಯಾದ ಹಿಂದಿ ಮತ್ತು ನೆರೆಯ ಭಾಷೆಗಳಾದ ಮರಾಠಿ ಮತ್ತು ಗುಜರಾತಿ ಭಾಷೆಗಳನ್ನು ಕಲಿಯಲು ಅನುಕೂಲವಾಗುತ್ತದೆ.

೪. ಇತರ ಭಾಷೆಯವರಿಗೆ ಕೊಂಕಣಿ ಕಲಿಯಲು ಸಹಾಯವಾಗುತ್ತದೆ.

ಮೈಥಿಲಿ ಮತ್ತು ವ್ರಜ ಭಾಷೆಗಳಿಗೆ ಮತ್ತು ಕೊಂಕಣಿಗೆ ಹೆಚ್ಚು ಸಾಮ್ಯ ವಿದೆ. ಮಧ್ಯ ಏಷ್ಯಾದ ಜಿಪ್ಸಿ ಭಾಷೆಗೆ ಸಾದೃಶ್ಯವಿರುವ ಒಂದು ಭಾಷೆ ಭಾರತ ದಲ್ಲಿರುವುದಾದರೆ, ಅದು ಕೊಂಕಣಿ. ಭಾಷೆಯ ವಾಙ್ಮಯ ಸಂಶೋಧನೆ ಮಾಡಿದರೆ ಕೊಂಕಣಿ ಭಾಷೆಗೆ ಐದು ಸಾವಿರ ವರ್ಷಗಳ ಇತಿಹಾಸವಿರುವುದು ತಿಳಿಯುತ್ತದೆ. ಪೈಶಾಚಿ ಮತ್ತು ಮಾಗಧಿ ಪ್ರಾಕೃತಗಳ ಪ್ರಭಾವ ಕೊಂಕಣಿ ಭಾಷೆಗಿದೆ ಎಂದು ಸಂಶೋಧನೆಯಿಂದ ತಿಳಿದುಬಂದಿದೆ.

ಭಾರತದಲ್ಲಿ ವ್ಯಾಕರಣ ನಿರ್ಮಾಣದಲ್ಲಿ ಕೊಂಕಣಿ ಭಾಷೆಗೆ ಪ್ರಥಮ ಸ್ಥಾನವಿದೆ. ಸಾಸಷ್ಟಿ ಪ್ರದೇಶದ ಕೃಷ್ಣದಾಸ ಶರ್ಮ ಅವರು ಬರೆದಿರುವ ರಾಮಾಯಣ, ಮಹಾಭಾರತ ಕಥೆಗಳ ಸಂಗ್ರಹದಿಂದ ೧೬ನೇ ಶತಮಾನದಲ್ಲೇ ಕೊಂಕಣಿಯಲ್ಲಿ ಗದ್ಯ ರಚನೆಯಾಗಿರುವುದು ತಿಳಿಯುತ್ತದೆ. ೧೨ನೇ ಶತಮಾನದ ಕೊಂಕಣರಾಜ ಅಪರಾದಿತ್ಯನ ಕಾಲದಲ್ಲಿ ಮತ್ತು ೧೪೧೩ರಲ್ಲಿ ಕೊಂಕಣಿ ಬರವಣಿಗೆ ಮತ್ತು ಸಾಹಿತ್ಯದಲ್ಲಿ ವ್ಯಾವಹಾರಿಕ ಭಾಷೆಯಾಗಿತ್ತು ಎಂದು ಆಗಿನ ನಾಗೇಶ ಶಿಲಾಲೇಖನದಿಂದ ತಿಳಿಯುತ್ತದೆ. ೧೬ನೇ ಶತಮಾನದಲ್ಲಿ ಮಿಶನರಿಗಳು ಕೊಂಕಣಿಯನ್ನು ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಭಾಷೆಯಾಗಿ ಬಳಸಿದರು. ಕ್ರೈಸ್ತ ಮತದ ಪ್ರಚಾರಕ್ಕಾಗಿ ಕ್ರಿಸ್ತ ಪುರಾಣವನ್ನು ರಚಿಸಿದರು. ಕಾಶೀಮಠದ ಸ್ವಾಮಿಗಳು ತಮ್ಮ ಶಿಷ್ಯರಿಗೆ ಬರೆಯುತ್ತಿದ್ದ ರಾಯಸ ಪತ್ರವನ್ನು ದೇವನಾಗರಿ ಲಿಪಿಯಲ್ಲಿ ಬರೆಯುತ್ತಿದ್ದರು. ಕೇರಳದ ದಾಖಲೆಗಳ ಸಂಗ್ರಹದಿಂದ ದೊರೆತ ಸೂಚನೆಗಳಂತೆ ಡಚ್ಚರ ಆಳ್ವಿಕೆಯ ಕಾಲದಲ್ಲಿ ಕೊಚ್ಚಿಯಲ್ಲಿ ಕೊಂಕಣಿ ವ್ಯಾವಹಾರಿಕ ಭಾಷೆಯಾಗಿ ಬಳಕೆಯಲ್ಲಿತ್ತು. ಕೊಚ್ಚಿಯ ಅಪ್ಪಾ ಭಟ್, ವಿನಾಯಕ ಪಂಡಿತ, ರಂಗಭಟ್ ಇವರು ಬರೆದ ಮಲಬಾರು ದೇಶದ ಸಸ್ಯಶಾಸ್ತ್ರ ಗ್ರಂಥ 'ಹರ್ಬಸ್ ಇಂಡಿಕಸ್' ಪುಸ್ತಕದ ಕೊಂಕಣಿಯ ನಿದರ್ಶನಪತ್ರವು ನಾಗರಿಲಿಪಿಯಲ್ಲಿದ್ದು ಪ್ರಥಮವಾಗಿ ಪಡಿಯಚ್ಚಿನೊಂದಿಗೆ ಮುದ್ರಣವಾಯಿತು.

ರವೀಂದ್ರ ಕೇಳೇಕಾರ್ ಅವರು ಕೊಂಕಣಿಯ ಗ್ರಂಥಸೂಚಿಯನ್ನು ಬರೆದಿದ್ದಾರೆ. ಕೊಂಕಣಿ ಸಾಹಿತ್ಯವು ಅರಬ್ಬಿ, ನಾಗರಿ, ರೋಮನ್, ಕನ್ನಡ ಮತ್ತು ಮಲಯಾಳ ಲಿಪಿಗಳಲ್ಲಿದೆ. ಆರ್. ದಾಲ್ಗೊದ ಅವರು ಕೊಂಕಣಿ–ಪೋರ್ಚು ಗೀಸ್ ಶಬ್ದಕೋಶವನ್ನು ೧೮೯೩ರಲ್ಲಿ ಮತ್ತು ಪೋರ್ಚುಗೀಸ್–ಕೊಂಕಣಿ ಶಬ್ದ ಕೋಶವನ್ನು ೧೯೦೫ರಲ್ಲಿ ರಚಿಸಿ ಸಮರ್ಪಿಸಿದ್ದಾರೆ. ಶೆಣೈ ಗೋಂಯ್‌ಬಾಬ್ ಅವರನ್ನು ಆಧುನಿಕ ಕೊಂಕಣಿ ಸಾಹಿತ್ಯದ ತಂದೆ ಎನ್ನಬಹುದು. ಅವರು ಬರೆದ ನಾಟಕ, ಸಣ್ಣಕತೆ, ಆತ್ಮಕಥೆ, ಸಂಶೋಧನೆ, ವ್ಯಾಕರಣ, ಮಕ್ಕಳ ಸಾಹಿತ್ಯ ಉತ್ಕೃಷ್ಟ ಸಾಹಿತ್ಯವಾಗಿದೆ. ಅನಂತರದ ಕ್ರೈಸ್ತ ಭಕ್ತಿ ಸಾಹಿತ್ಯದಲ್ಲಿ ೪೫೦ಕ್ಕಿಂತ ಹೆಚ್ಚಿನ ವಿಭಿನ್ನ ಕೃತಿಗಳಿವೆ. ದಕ್ಷಿಣದಿಂದ ಹಿಂದೂ ಕೊಂಕಣಿ ಸಂತ ಸಾಹಿತ್ಯ ಸೃಷ್ಟಿಯಾಯಿತು. ಇದರ ಹೊರತಾಗಿ ಜೋಗವ್ವ ಮತ್ತು ಅಪ್ಪಯ್ಯ ಇವರು ಕೊಂಕಣಿ ಭಕ್ತಿಗೀತೆಗಳನ್ನು ರಚಿಸಿದ್ದಾರೆ. ನಾರಾಯಣತೀರ್ಥ ಅವರು ಭಕ್ತಿಗೀತೆ ಮತ್ತು ಗದ್ಯಸಾಹಿತ್ಯವನ್ನು ಬರೆದಿದ್ದಾರೆ. ವೆಂಕಟರಾವ್ ಅವರು ವಿವೇಕ ರತ್ನಾಕರ ಕೃತಿಯನ್ನು ರಚಿಸಿದ್ದಾರೆ. ಹರಿಶಂಕರ ಗುಲ್ವಾಡಿ ಅವರು 'ಹರಿಕೀರ್ತನ ಸಮರ್ಥಾಚೆ ಸಾಮರ್ಥ್ಯ' ಕೃತಿಯನ್ನು ಮತ್ತು ಸಾಕಷ್ಟು ಅನುವಾದ ಹಾಗೂ ಗೀತಾ ವ್ಯಾಖ್ಯಾನಗಳನ್ನೂ ಬರೆದಿದ್ದಾರೆ.

೧೫೬೩ರಲ್ಲಿ ಪ್ರಥಮವಾಗಿ ಕೊಂಕಣಿಯ ಶ್ರೇಷ್ಠ ಸಾಹಿತ್ಯ ಗ್ರಂಥ ರಚಿತವಾಯಿತು. ಪ್ರಥಮ ವ್ಯಾಕರಣ ೧೫೬೮ರಲ್ಲಿ ರಚಿತವಾಗಿ ೧೬೪೦ರಲ್ಲಿ ಮುದ್ರಣಗೊಂಡಿತು. ಕ್ರೈಸ್ತರ ಪ್ರಥಮ ಧರ್ಮಗ್ರಂಥ ಪ್ರಕಾಶಿತವಾದದ್ದು ೧೬೬೦ ರಲ್ಲಿ. ಕೊಂಕಣಿಯ ಪ್ರಥಮ ಬೈಬಲ್ ೧೬೬೭ರಲ್ಲಿ ಪ್ರಕಟವಾಯಿತು. ಕೊಂಕಣಿ ನಾಟಕ ಮಂಡಳಿಯು ೧೮೯೨ರಲ್ಲಿ ಸ್ಥಾಪನೆಯಾಯಿತು. ಕೊಂಕಣಿಯ ಪ್ರಾಥಮಿಕ ಪುಸ್ತಕ ಪ್ರಕಟವಾದದ್ದು ೧೮೯೬ರಲ್ಲಿ. ಇವುಗಳನ್ನೆಲ್ಲ ಪರಿಶೀಲಿಸುವಾಗ ಕೊಂಕಣಿ ಭಾಷೆಯ ಬಗ್ಗೆ ಅಭಿಮಾನವುಂಟಾಗುತ್ತದೆ. ಕೊಂಕಣಿ ಭಾಷೆಯಲ್ಲಿ ಸಾಹಿತ್ಯ ಕೃತಿ ಗಳಿಗೇನೂ ಕೊರತೆಯಿಲ್ಲವೆನಿಸುತ್ತದೆ.

ಈಗ ಗೋವಾದಲ್ಲಿ ಹೆಚ್ಚೆಚ್ಚು ಸಾಹಿತ್ಯ ನಿರ್ಮಾಣವಾಗುತ್ತಿದೆ. ಡಾ। ಆರ್.ವಿ. ಪಂಡಿತರು ಕೊಂಕಣಿ ಕಾವ್ಯಕ್ಕೆ ಲೋಕ ಪ್ರಶಂಸೆ ತಂದರು. ಸರ್ವಶ್ರೀ ರಾಮಚಂದ್ರ ನಾಯಕ್, ರವೀಂದ್ರ ಕೇಳಕಾರ್, ಚಂದ್ರಕಾಂತ ಕೇಣಿ, ಜೆ. ಮೊರ್‍ಯಾಸ್, ಬಾಕೀಬಾಬ್ ಬೋರ್ಕರ್, ಮನೋಹರ ಸರ್‌ದೇಸಾಯಿ ಇವರೆಲ್ಲ ಶ್ರೇಷ್ಠ ಸಾಹಿತ್ಯವನ್ನು ಸೃಷ್ಟಿಸಿದರು. ಗೋವಾದ ಸರ್ವಶ್ರೀ ಉದಯ ಬೆಂಬ್ರೆ, ನಾಗೇಶ್ ಕರಮಲಿ, ಆರ್ಮಂಡೋ ಪಿರೇರಾ, ಒಲ್ವಿನೊ ಗೋಮ್ಸ್, ಪುಂಡಲೀಕ ನಾಯಕ್, ರಮೇಶ್, ವೆಳೂಸ್‌ಕಾರ್, ಪುರುಷೋತ್ತಮ ಶಿಂಗ್‌ವಾಳ, ಶಾಂತಾರಾಮ ವಾಲಾವಲಿಕಾರ್, ಶೀಲಾ ನಾಯಕ್, ಮೀನಾ ಕಾಕೋಡಕರ್, ಜಯಮಾಲಾ ಚೊಡ್ಕೇಕರ್ ಮತ್ತು ಇತರ ಉದಯೋನ್ಮುಖ ಸಾಹಿತಿಗಳೆಲ್ಲ ಸಾಹಿತ್ಯರಂಗಕ್ಕೆ ಪ್ರವೇಶಿಸಿದ್ದು ಕೊಂಕಣಿ ಸಾಹಿತ್ಯದ ಭಾಗ್ಯೋದಯ ಎಂದು ತಿಳಿಯೋಣ.

ಕೇರಳದಲ್ಲಿ ಕಮಲಮ್ಮಾಳ್, ನರಸಿಂಹ ಪೈ, ನಾರಾಯಣ ಮಲ್ಯ, ಅನಂತ ಶರ್ಮಾ ಇವರೆಲ್ಲ ಸಾಕಷ್ಟು ಕೊಂಕಣಿ ಕಾವ್ಯವನ್ನು ರಚಿಸಿದ್ದಾರೆ. ಸಾಕಷ್ಟು ಮಟ್ಟಗಿನ ಜನರ ಸಹಕಾರ ಮತ್ತು ಸರಕಾರದಿಂದ ನೆರವು ದೊರೆಯದ ಕಾರಣ ಕೊಂಕಣಿ ಒಂದು ಉಪೇಕ್ಷಿತ ಭಾಷೆಯಾಗಿ ಉಳಿದಿದೆ. ಅವಳ ಉದ್ಧಾರದ ಸಲುವಾಗಿ ಒಂದು ಸಂಸ್ಥೆಯ ಅವಶ್ಯವಿದೆ. ದಿ। ಎಂ. ಎಂ. ಶ್ಯಾನುಭಾಗ್ ಅವರು ಕೊಂಕಣಿ ಭಾಷಾಮಂಡಲವನ್ನು ಸ್ಥಾಪಿಸಿದ್ದಾರೆ. ಪ್ರಥಮ ಸಮ್ಮೇಳನ ೧೯೩೯ರಲ್ಲಿ ಕಾರವಾರದಲ್ಲಿ ಜರಗಿತು. ಆನಂತರ ಕೆಲವು ಸಂಸ್ಥೆಗಳು ಜನ್ಮ ತಳೆದವು. ಕೊಂಕಣಿ ಸಾಹಿತ್ಯ ಸಮಿತಿ, ಕೊಂಕಣಿ ಕಲ್ಚರಲ್ ಎಸೋಸಿಯೇಶನ್ ಇತ್ಯಾದಿ ಸಂಸ್ಥೆಗಳು ಬೊಂಬಾಯಿಯಲ್ಲಿ ಸ್ಥಾಪನೆಯಾದುವು. ಕಾರವಾರದಲ್ಲಿ ಕೊಂಕಣಿ ಭಾಷಾ ಪರಿಷತ್ತು ಮತ್ತು ಮುಂಬಯಿಯಲ್ಲಿ ಕೊಂಕಣಿ ಭಾಷಾಮಂಡಲ ಸ್ಥಾಪನೆ ಯಾಯಿತು. ಕೇರಳದಲ್ಲಿ ೧೯೬೬ರಲ್ಲಿ ಕೊಂಕಣಿ ಭಾಷಾ ಪ್ರಚಾರ ಸಭೆ ಹುಟ್ಟಿಕೊಂಡಿತು ಮತ್ತು ಆ ಭಾಷೆಗೆ ಕೇರಳ ಸರಕಾರದಿಂದ ರಾಜ್ಯಮಾನ್ಯತೆ ಪಡೆಯಿತು. ಈ ವರ್ಷ ಜನವರಿ ೧ರಂದು ಕರ್ನಾಟಕದಲ್ಲಿ ಕೊಂಕಣಿ ಭಾಷಾ

ಮಂಡಲ ಮಂಗಳೂರಿನಲ್ಲಿ ಸ್ಥಾಪನೆಯಾಯಿತು. ಗೋವಾ ಸ್ವತಂತ್ರವಾದ ಅನಂತರ ಮಡಗಾಂವ್ ನಲ್ಲಿ ಕೊಂಕಣಿ ಭಾಷಾ ಮಂಡಲ ಸ್ಥಾಪನೆಯಾಯಿತು. ಈ ಸಂಸ್ಥೆ ಕೊಂಕಣಿಯ ಪ್ರಗತಿಗಾಗಿ ಪ್ರಯತ್ನಿಸುವ ಆವಶ್ಯಕತೆ ಇದೆ. ಮತ್ತು ಅದರ ನಿರಂತರ ಪ್ರಯತ್ನದಿಂದ ಕೊಂಕಣಿಗೆ ಭಾರತದ ಎಂಟನೆಯ ಪರಿಶಿಷ್ಟದಲ್ಲಿ ಸ್ಥಾನ ಸಿಕ್ಕುವಲ್ಲಿ ಸಂಶಯ ವಿಲ್ಲ. ಗೋವಾ ಸರಕಾರಕ್ಕೆ ಕೊಂಕಣಿ ಭಾಷೆಯ ಬಗ್ಗೆ ದ್ವೇಷ ಭಾವನೆಯೇನೂ ಇಲ್ಲ.

ಕೇಂದ್ರ ಸಾಹಿತ್ಯ ಅಕಾಡೆಮಿಯಲ್ಲಿ ಕೊಂಕಣಿ ಭಾಷೆಗೆ ಮಾನ್ಯತೆ ಸಿಕ್ಕುವ ನಿರೀಕ್ಷೆ ಇದೆ. ಸಾಹಿತ್ಯ ಅಕಾಡೆಮಿಯ ಅಧ್ಯಕ್ಷ ಡಾ॥ ಸುನೀತಿಕುಮಾರ ಚಟರ್ಜಿ ಈ ವಿಷಯದಲ್ಲಿ ವಿಚಾರ ಮಾಡುತ್ತಿದ್ದಾರೆ. ಕೊಂಕಣಿ ಬಗ್ಗೆ ಸ್ನೇಹಭಾವವಿರುವ ಅವರೊಬ್ಬ ಮಹಾಪುರುಷರು. ಅಕಾಡೆಮಿಯಲ್ಲಿ ಕೊಂಕಣಿಗೆ ಸ್ಥಾನ ಸಿಕ್ಕುವುದೆಂಬ ಭರವಸೆ ಇದೆ.

ಭಾರತದಲ್ಲಿ ಸುಮಾರು ಮೂವತ್ತು ಲಕ್ಷ ಮಂದಿ ಕೊಂಕಣಿಯನ್ನು ಮಾತಾಡುವವರಿದ್ದಾರೆ. ಅವರಲ್ಲಿ ಹೆಚ್ಚು ಮಂದಿ ಕ್ರೈಸ್ತರಿದ್ದಾರೆ; ಮುಸಲ್ಮಾನರಿದ್ದಾರೆ; ಹಿಂದೂಗಳಿದ್ದಾರೆ. ಹಿಂದೂಗಳಲ್ಲಿ ಬ್ರಾಹ್ಮಣರು, ಕಡುಬಿಯರು, ಗಾವಳಿ, ಶೇಟ್ ಮತ್ತು ಇತರ ಪಂಗಡದವರೂ ಇದ್ದಾರೆ. ಮುಂಬಯಿಯಿಂದ ಕೊಚ್ಚಿಯ ವರೆಗಿನ ಜನಾಂಗವನ್ನು ಏಕೀಕೃತಗೊಳಿಸುವ ಭಾಷೆ ಕೊಂಕಣಿ.

ಇಂದು ಭಾರತದಲ್ಲಿ ಹಂಚಿ ಹೋಗಿರುವ ಕೊಂಕಣಿಯರು ಪರಸ್ಪರ ಒಂದುಗೂಡಲು ಕೊಂಕಣಿ ಮಾತೆ ಸಹಾಯ ಮಾಡಿದಳು. ಆಕೆಯ ಮಕ್ಕಳೆಲ್ಲ ಒಂದುಗೂಡಿ ಮಾತೃಭಾಷೆಯ ಸೇವೆ ಮಾಡುವ ಈ ಸಮಾರಂಭಕ್ಕೆ ಅವಳ ಪೂರ್ಣ ಅನುಗ್ರಹವಿದೆ. ಪಣಜಿಯ ೧೦ನೆಯ ಅಖಿಲ ಭಾರತ ಕೊಂಕಣಿ ಸಾಹಿತ್ಯ ಪರಿಷತ್ತಿನಲ್ಲಿ ಕೊಂಕಣಿಯ ಭವಿಷ್ಯತ್ತಿನ ಬಗ್ಗೆ ನಿರ್ಣಯವಾಗಲಿದೆ. ಸಂವಿ ಧಾನದ ಎಂಟನೆಯ ಪರಿಶಿಷ್ಟದಲ್ಲಿ ಸ್ಥಾನ ದೊರೆಯುವುದಕ್ಕಾಗಿ ಮಾಡುವ ಪ್ರಯತ್ನಕ್ಕೆ ಗೆಲುವು ದೊರೆಯಬಹುದು. ಕೊಂಕಣಿಗೆ ಇತರ ಭಾಷೆಗಳಿಗಿರುವ ಸ್ಥಾನಮಾನ ದೊರಕಿ ಯಶಸ್ಸಾಗಬಹುದೆಂದು ತಿಳಿಯುತ್ತೇನೆ. ಭಾರತದಲ್ಲಿ ಕೊಂಕಣಿಗೆ ಶ್ರೇಷ್ಠವಾದ ಸ್ಥಾನವಿದೆ. ನಿಮಗೆ ನಮ್ಮಿಂದಾಗುವ ನೆರವನ್ನು ಯಾವಾ ಗಲೂ ನೀಡುತ್ತೇವೆಂದು ತಿಳಿಸಲು ಸಂತೋಷಿಸುತ್ತೇನೆ.

---

೧೯೮೪. ಅಕ್ಟೋಬರ್ ೯ ರಂದು ಪಣಜಿಯಲ್ಲಿ ಜರಗಿದ ಅಖಿಲ ಭಾರತ ಕೊಂಕಣಿ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣ.

# ಕೊಂಕಣಿ ಭಾಷೆಯ ಅಭಿವೃದ್ಧಿ

– ಡಾ। ವಿಲ್ಯಂ ಮಾಡ್ತ

---

## ೦. ಪ್ರಸ್ತಾವನೆ

ಬುದ್ಧಿಜೀವಿಯೂ ಸಮಾಜಜೀವಿಯೂ ಆದ ಮಾನವ ತನ್ನ ವಿಕಾಸಕ್ಕೆ ಬೇಕಾದ ನೆರವನ್ನು ಸಮಾಜದಿಂದ ಪಡೆದುಕೊಳ್ಳಲು ಅಂಗಚೇಷ್ಟೆ (Kinesics), ದೂರಸಾಮೀಪ್ಯ (Promemics)ಗಳಲ್ಲದೆ ಸಮಗ್ರ ಸಂಪರ್ಕ ಸಾಧನವನ್ನಾಗಿ ಭಾಷೆಯನ್ನೂ ರೂಪಿಸಿಕೊಂಡು ವಿಶ್ವದಲ್ಲಿಯೇ ಮಾತಾಡುವ ಏಕೈಕ ಜೀವಿಯಾಗಿ ಮೆರೆಯುತ್ತಾನೆ. ಮಾತನಾಡಬಲ್ಲ ಮಾನವನಿಗೆ ಭಾಷೆ ಆನುವಂಶಿಕವಲ್ಲ. ಅದು ಅತನಿಗೆ ಕಲಿತ ಕ್ರಿಯೆ. ಮಾನವ ಸಾಮಾನ್ಯವಾಗಿ ಒಂದು ಸಮಾಜಕ್ಕೆ ಸೇರಿದ ದಂಪತಿಗಳಿಗೆ ಹುಟ್ಟುತ್ತಾನೆಯಾದ್ದರಿಂದ ಆ ಸಾಮಾಜಿಕ ಪರಿಸರದ ಭಾಷೆಯನ್ನೇ ಆತ ಹುಟ್ಟಿದಾರಭ್ಯ ಅಥವಾ ತತ್ಪೂರ್ವದಿಂದಲೂ ಅರ್ಥಾತ್ ತಾಯಿಯ ಗರ್ಭದಲ್ಲಿರುವಾಗಲೇ ಕಲಿತುಕೊಳ್ಳುತ್ತಾನೆ. ಹೀಗೆ ಕಲಿತ ಭಾಷೆಯನ್ನೇ ನಾವು ಪಾರಿಭಾಷಿಕವಾಗಿ ಮಾತೃ/ಪಿತೃಭಾಷೆ (Mother/Father tongue) ಎಂದು ಕರೆಯುತ್ತೇವೆ.

ಮಾನವ ಸಂಸ್ಕೃತಿ ಬೆಳೆದಂತೆ ಒಂದೇ ಪ್ರದೇಶದಲ್ಲಿ ಹಲವಾರು ಸಮಾಜಗಳು ವಿವಿಧ ಕಾರಣಗಳಿಂದಾಗಿ ಜೀವಿಸುವುದು ಸ್ವಾಭಾವಿಕ. ಆಗ ಆ ಪ್ರದೇಶದಲ್ಲಿ ಎಷ್ಟು ಸಮಾಜಗಳು ಇವೆಯೋ ಅಷ್ಟಾದರೂ ಭಾಷೆಗಳು ಇರುತ್ತವೆ. ಈ ಭಾಷೆಗಳನ್ನು ಜನಸಂಖ್ಯಾನುಗುಣವಾಗಿ ನಾವು ಬಹುಸಂಖ್ಯಾತ ಭಾಷೆ ಮತ್ತು ಅಲ್ಪಸಂಖ್ಯಾತ ಭಾಷೆಗಳೆಂದು ವರ್ಗೀಕರಿಸಬಹುದು.

ಬಹುಸಂಖ್ಯಾತ ಭಾಷೆ ಆ ಭಾಷಾಪ್ರದೇಶದಲ್ಲಿಯ ಎಲ್ಲ ಜನರ ಮಾತೃಭಾಷೆಯಾಗಿರುವುದಿಲ್ಲ ಎಂಬ ಸತ್ಯವನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಉದಾಹರಣಾರ್ಥವಾಗಿ ಕರ್ನಾಟಕದಲ್ಲಿ ಕನ್ನಡ ಬಹುಸಂಖ್ಯಾತ ಭಾಷೆ. ಆದರೆ ಅದು ಕರ್ನಾಟಕದಲ್ಲಿರುವ ಎಲ್ಲ ಪ್ರಜೆಗಳ ಮಾತೃಭಾಷೆಯಲ್ಲ. ಇಲ್ಲಿಯ ಅಲ್ಪ ಸಂಖ್ಯಾತರಾದ ಕೊಂಕಣಿಗರಿಗೆ, ತುಳುವರಿಗೆ, ಕೊಡವರಿಗೆ ಕನ್ನಡ ಪರಿಸರ ಶಿಕ್ಷಣದ ಮೂಲಕ ಕಲಿತ ಪ್ರಥಮ (L.೧.) ಅಥವಾ ದ್ವಿತೀಯ (L.೨.) ಭಾಷೆಯಾಗಿದೆಯೆಂಬುದು ಎಲ್ಲರಿಗೂ ತಿಳಿದ ವಿಷಯ.

ವಸ್ತುಸ್ಥಿತಿ ಹೀಗಿರುವಾಗ, ರಾಜಕೀಯ ಆಡಳಿತ ದೃಷ್ಟಿಯಿಂದ ಬಹು ಸಂಖ್ಯಾತ ಭಾಷೆಯನ್ನೇ ರಾಜ್ಯ ಭಾಷೆಯನ್ನಾಗಿ ಅರ್ಥಾತ್ ಆಡಳಿತ ಭಾಷೆ ಯನ್ನಾಗಿ ಒಪ್ಪಿಕೊಳ್ಳುವುದು ಸಹಜ ಹಾಗೂ ಅನಿವಾರ್ಯ. ಹೀಗೆ ಕರ್ನಾಟಕದಲ್ಲಿ ಕನ್ನಡವು ರಾಜ್ಯಾಡಳಿತ ಭಾಷೆಯೇ ಹೊರತು ಇನ್ನೊಂದಲ್ಲ. ಸಾಂಸ್ಕೃತಿಕ ಜೀವಿಯಾದ ಮಾನವನಿಗೆ ಆಡಳಿತವೊಂದೇ ಸಾಲದು. ಆತನಿಗೆ ಕೆಲವೊಂದು ಆತ್ಮೀಯ ಸಂದರ್ಭಗಳಲ್ಲಿ (....ಗಂಡ–ಹೆಂಡಿರ ಸಂವಾದ, ಪ್ರಿಯತಮ–ಪ್ರಿಯತಮೆ ಯರ ಸಲ್ಲಾಪ, ತಾಯಿ–ಮಕ್ಕಳ ಮಾತುಕತೆ, ಕೌಟುಂಬಿಕ–ಸಾಮಾಜಿಕ ಸ್ತರದಲ್ಲಿ ನಡೆಯುವ ಧಾರ್ಮಿಕ ಸಮಾರಂಭಗಳು....) ತನ್ನ ಮಾತೃಭಾಷೆಯಷ್ಟು ಸಲುಗೆ ಇನ್ನೊಂದು ಭಾಷೆಯ ಮೂಲಕ ಸಿಗಲಾರದು. ಈ ಸಂದರ್ಭಗಳಲ್ಲಿ ಕನ್ನಡಿಗರು ಎಷ್ಟು ನಿರ್ಭಿಡೆಯಿಂದ ತಮ್ಮ ಮಾತೃಭಾಷೆಯನ್ನು ಬಳಸುತ್ತಾರೆಯೋ ಅಷ್ಟೇ ಸ್ವತಂತ್ರವಾಗಿ ಕೊಂಕಣಿಗರಿಗೆ, ತುಳುವರಿಗೆ, ಕೊಡವರಿಗೆ ಮೊದಲಾದ ಅಲ್ಪ ಸಂಖ್ಯಾತರಿಗೆ ಅವರವರ ಮಾತೃಭಾಷೆಯನ್ನು ಬಳಸುವ ಸ್ವಾತಂತ್ರ್ಯ ಇದೆ. ಈ ಸ್ವಾತಂತ್ರ್ಯವನ್ನು ಮೊಟಕುಗೊಳಿಸುವ ದಮನಕಾರೀ ಪ್ರವೃತ್ತಿ ಬಹುಸಂಖ್ಯಾತರಲ್ಲಿ ಇರಕೂಡದು. ಇದ್ದರೆ ಅದನ್ನು ಪ್ರತಿಭಟಿಸುವುದು ಸ್ವತಂತ್ರ ಪ್ರಜೆಯಾಗಿರುವ ಎಲ್ಲರ ಕರ್ತವ್ಯ.[1] ಅಲ್ಪಸಂಖ್ಯಾತ ಭಾಷೆಗಳನ್ನು ಕಬಳಿಸುವ, ನುಂಗಿಬಿಡುವ ಸ್ವಾತಂತ್ರ್ಯವನ್ನು ಭಾರತೀಯ ಸಂವಿಧಾನ ಬಹುಸಂಖ್ಯಾತ ಜನರಿಗೆ ಕೊಟ್ಟಿಲ್ಲ. ತಂತಮ್ಮ ಸಂಸ್ಕೃತಿಯ ಪ್ರತೀಕಗಳಾಗಿರುವ ತಂತಮ್ಮ ಜನಾಂಗೀಯ ಭಾಷೆಗಳನ್ನು ರಕ್ಷಿಸಿಕೊಂಡು ಹಾಗೂ ಪೋಷಿಸಿಕೊಂಡು ಹೋಗುವ ಜವಾಬ್ದಾರಿಯನ್ನು ಆ ಸಂವಿಧಾನ ಕಸಿದುಕೊಳ್ಳಲಿಲ್ಲವೆಂಬುದು ಪ್ರೌಢರೆಲ್ಲರೂ ನೆನಪಿಡಬೇಕಾದ ವಿಷಯ.

ಪ್ರಸ್ತುತದಲ್ಲಿ ಕರ್ನಾಟಕದಲ್ಲಿ ಕೊಂಕಣಿಗೆ ಸೀಮಿತವಾಗಿ ಭಾಷಾಭಿವೃದ್ಧಿ (Language Development) ಕುರಿತು ಸಂಕ್ಷಿಪ್ತವಾಗಿ ಕೆಲವೊಂದು ವಿಚಾರ ಗಳನ್ನು ಮಂಡಿಸಲು ಇಚ್ಛೆ ಪಡುತ್ತೇನೆ.

## ೦.೧. ಕೊಂಕಣಿ ಭಾಷೆ

ಇಂಡೋ ಆರ್ಯನ್ ಭಾಷಾಪರಿವಾರದ ದಕ್ಷಿಣ ವರ್ಗಕ್ಕೆ ಸೇರಿದ ಕೊಂಕಣಿ ಭಾಷೆ ಗೋವೆಯಿಂದ ಹೊರಗೆ ವಲಸೆಹೋಗಿ ಪ್ರಮುಖವಾಗಿ ಮಹಾರಾಷ್ಟ್ರ, ಕರ್ನಾಟಕ ಹಾಗೂ ಕೇರಳ ರಾಜ್ಯಗಳಲ್ಲಿ ಹಂಚಿಹೋಗಿದೆ. ಗೋವೆ ಬಿಟ್ಟರೆ ಉಳಿದೆಡೆ ಅದು ಅಲ್ಪಸಂಖ್ಯಾತರ ಭಾಷೆಯಾಗಿ ಪರಿಗಣಿಸಲ್ಪಟ್ಟಿದೆ.

1. ಶಿಕ್ಷಣ ಮಾಧ್ಯಮವಾಗಿ ಭಾಷೆಯನ್ನು ಆರಿಸುವ ವ್ಯಕ್ತಿಸ್ವಾತಂತ್ರ್ಯ ಕುರಿತು ಮತ್ತು ಭಾಷಾವೈಜ್ಞಾನಿಕ ಧೋರಣೆಗಳನ್ನು ಕುರಿತು ಚರ್ಚಿಸಲು ಈ ಅವಕಾಶ ಸಾಲದು.

ಗೋವೆಗೆ ಸ್ವಾತಂತ್ರ್ಯ ಸಿಕ್ಕಿದ ಬಳಿಕ ಆ ಮಣ್ಣಿನ ಭಾಷೆಯಾದ ಕೊಂಕಣಿ ಅದರ ಸೋದರಿ ಭಾಷೆಯಾದ ಮರಾಠಿಯೊಂದಿಗೆ ಅಲ್ಲಿಯ ರಾಜ್ಯಭಾಷೆಯಾಗಿದೆ.

ಕೊಂಕಣಿ ದ್ವಿತೀಯ ಸ್ಥಾನದ ಭಾಷೆಯಾಗಿರಲು ಹಲವಾರು ಐತಿಹಾಸಿಕ, ಸಾಂಸ್ಕೃತಿಕ ಕಾರಣಗಳಿವೆ. ಯಾವುದೇ ಅರಸರ ಆಶ್ರಯ ಈ ಹಿಂದೆ ಕೊಂಕಣಿಗೆ ಇದ್ದಿಲ್ಲ. ಕೊಂಕಣಿ ಜನ ಸ್ವಾಭಾವಿಕವಾಗಿ ಆಕ್ರಮಣ ಪ್ರವೃತ್ತಿ ಹೊಂದಿದವರು ಅಲ್ಲ. ತಮ್ಮ ಜನ, ಭಾಷೆ, ಸಂಸ್ಕೃತಿಗಳ ಬಗ್ಗೆ ಅವರಿಗೆ ಅಭಿಮಾನ ಇದ್ದರೂ ಅದನ್ನು ಪ್ರದರ್ಶನ ವಸ್ತುವನ್ನಾಗಿ ಮಾಡುವಂತಹ ಒರಟುತನ ಅವರಲ್ಲಿ ಇಲ್ಲವೆನ್ನುವಷ್ಟು ಕಡಿಮೆ. ಜಾತೀಯತೆ, ಗುಂಪುಗಾರಿಕೆ ಇವರಲ್ಲಿ ಇಲ್ಲದೆ ಇರುವುದರಿಂದ ಅವರು ಸಹಜವಾಗಿ ಉಳಿದ ಜನಸಮುದಾಯಗಳೊಂದಿಗೆ ಸುಲಭವಾಗಿ ಬೆರೆತುಕೊಳ್ಳುತ್ತಾರೆ. ಬೆರೆತಾಗ ತಮ್ಮನ್ನೇ ಮರೆಯುತ್ತಾರೆ.

ಕರ್ನಾಟಕದಲ್ಲಿಯ ಸು. ೨೫ ಲಕ್ಷ ಕೊಂಕಣಿಗರು ಕಲೆ, ಸಾಹಿತ್ಯ, ಸಂಗೀತ, ರಂಗಭೂಮಿ, ಸಿನೇಮ, ವಾಣಿಜ್ಯ, ಬ್ಯಾಂಕ್ ಉದ್ಯಮ, ಪತ್ರಿಕೋದ್ಯಮ, ಶಿಕ್ಷಣ ಹೀಗೆ ಸಮಾಜದ ಹಲವು ಕ್ಷೇತ್ರಗಳಲ್ಲಿ ದುಡಿಯುತ್ತಿದ್ದಾರೆ. ದುಡಿದು ಕೀರ್ತಿ ತಂದಿದ್ದಾರೆ. ಬಹುಶಃ ಇಷ್ಟೊಂದು ಪ್ರಗತಿಪರ ಜನಾಂಗ ಇನ್ನೊಂದಿಲ್ಲವೆಂದರೆ ಸತ್ಯಕ್ಕೆ ದೂರವಾಗಲಾರದು.

ವಸ್ತುಸ್ಥಿತಿ ಹೀಗಿರುವಾಗ, ಕರ್ನಾಟಕ ಸರಕಾರ, ಹಾಗೂ ರಾಜ್ಯದ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕದ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಕನ್ನಡ ಸಾಹಿತ್ಯ ಪರಿಷತ್ತು ಮೊದಲಾದ ಸರಕಾರಿ ಹಾಗೂ ಸರಕಾರಿ ಧನಸಹಾಯ ಪಡೆಯುವ ಸಂಸ್ಥೆಗಳು ೨೫ ಲಕ್ಷಕ್ಕಿಂತಲೂ ಮೀರಿರುವ ಅಲ್ಪ ಸಂಖ್ಯಾತರ ಕೊಂಕಣಿಯ ಅಭಿವೃದ್ಧಿಗೆ ಯಾಕೆ ಬೆಂಬಲ ಕೊಡಬಾರದು? ಯೋಜನೆಗಳನ್ನು ರೂಪಿಸಿಕೊಳ್ಳಬಾರದು? ಸರಕಾರಕ್ಕೆ ಹಾಗೂ ಬಹುಸಂಖ್ಯಾತ ಜನರಿಗೆ ಅಲ್ಪಸಂಖ್ಯಾತ ಭಾಷೆ, ಸಂಸ್ಕೃತಿಗಳನ್ನು ಅಭಿವೃದ್ಧಿಪಡಿಸುವ ಹೊಣೆಗಾರಿಕೆ ಜವಾಬ್ದಾರಿಗಳಿಲ್ಲವೇ? ಅಲ್ಪಸಂಖ್ಯಾತರಿಗೆ ತಮ್ಮ ಭಾಷೆ ಸಂಸ್ಕೃತಿ ಸಾಹಿತ್ಯಗಳನ್ನು ಬೆಳೆಯಿಸುವ ಅದಕ್ಕಾಗಿ ಸರಕಾರದ ಅನುಕೂಲತೆಗಳನ್ನು ಪಡೆದುಕೊಳ್ಳುವ ಹಕ್ಕುಗಳಿಲ್ಲವೆ? ಇತ್ಯಾದಿ ಇತ್ಯಾದಿ ಪ್ರಶ್ನೆಗಳು ಇತ್ತೀಚಿನ ದಿನಗಳಲ್ಲಿ ಸಹಜವಾಗಿ ಕೊಂಕಣಿಗರಲ್ಲಿ ತಲೆದೋರುತ್ತವೆ. ಇದು ಅಸಹಜವೂ ಅಲ್ಲ, ಅಪಾಯಕಾರಿಯೂ ಅಲ್ಲ. ಇದು ಅಲ್ಪಸಂಖ್ಯಾತರ ಮಾನಸಿಕ ಬೆಳವಣಿಗೆಯ, ಅವರ ಸ್ವಾತಂತ್ರ್ಯದ ಅರಿವಿನ, ಮಾನವ ಹಕ್ಕುಗಳನ್ನು ಕುರಿತು ಅವರಲ್ಲಾದ ಜಾಗೃತಿಯ ಲಕ್ಷಣ. ಅಲ್ಪ ಸಂಖ್ಯಾತ ಸಮೂಹ ತನ್ನ ಬಾಲ್ಯಾವಸ್ಥೆಯನ್ನು ಕಳೆದು ಪ್ರೌಢಾವಸ್ಥೆಗೆ ಬರುವಂತಹ ಶುಭಲಕ್ಷಣ ಅಷ್ಟೇ.

ಪ್ರಜಾಪ್ರಭುತ್ವದಲ್ಲಿ ತೆರಿಗೆ ಕೊಡುವ ಎಲ್ಲ ವ್ಯಕ್ತಿಗಳಿಗೂ ಬೆಳೆಯುವ ಅವಕಾಶ ಸಿಗಬೇಕು. ಸ್ವಾಭಿವೃದ್ಧಿಯಿಂದ ಅವರು ವಂಚಿತರಾಗಬಾರದು.

### ೦.೨. ಕೊಂಕಣಿ ಸ್ವತಂತ್ರ ಭಾಷೆ

ಕೊಂಕಣಿ ಮರಾಠಿಯ ಉಪಭಾಷೆ ಎಂಬ ಮೊಂಡು ವಾದ ಈಗ ಬಿದ್ದು ಹೋಗಿದೆ. ರೆವರೆಂಡ್ ಜೋನ್ ವಿಲ್ಸನ್ (೧೮೦೪-೧೯೦೦) ಯೇಸು ಸಮಾಜಿ ಫಾದರ್ ಅಜ್ಞೆಲೊ ಮಾಫೇಯಿೀ (೧೮೪೪-೧೮೯೯), ಜೋರ್ಜ್ ಏಬ್ರಹಾಂ ಗ್ರಿಯರ್‌ಸನ್ (೧೮೫೧-೧೯೪೧), ಶೆಣೈ ವಾಮನ ರಘುನಾಥ್ ವರ್ದೇ ವಾಲ ವ್ಲಿಕರ್, (ಶೆಣೈ ಗೊಂಯೆ ಬಾಬ್ ೧೮೭೭-೧೯೫೬) ಮೊದಲಾದ ಭಾಷಾಶಾಸ್ತ್ರಜ್ಞರು ಅಂತೆಯೇ ಸುನೀತಿಕುಮಾರ ಚಟರ್ಜಿ, ಸುಮಿತ್ರ ಮಂಗೇಶ ಕತ್ರೆ ಮೊದಲಾದ ಸುಪ್ರಸಿದ್ಧ ಭಾಷಾವಿಜ್ಞಾನಿಗಳು ಕೊಟ್ಟ ಐತಿಹಾಸಿಕ ಹಾಗೂ ಭಾಷಾವೈಜ್ಞಾನಿಕ ಆಧಾರಗಳಿಂದ ಕೊಂಕಣಿ ಯಾವುದೇ ಒಂದು ಲಿಪಿಗೆ ಸೀಮಿತಗೊಳ್ಳದೆ ಇಂದು ಸ್ವತಂತ್ರ ಭಾಷೆಯೆಂದು ಪರಿಗಣಿತವಾಗಿದೆ. ಭಾರತ ಸರ್ಕಾರವೂ ಅದನ್ನು ಮಾನ್ಯ ಮಾಡಿದೆ (Kamath 1989:3) ಭಾರತದ ಕೇಂದ್ರ ಸಾಹಿತ್ಯ ಅಕಾಡೆಮಿ ೧೯೭೫ರಲ್ಲಿ ಒಪ್ಪಿಕೊಂಡಿರುವಂತೆ ಕೊಂಕಣಿ ಒಂದು ಸ್ವತಂತ್ರ ಸಾಹಿತ್ಯಿಕ ಭಾಷೆ. ಜನಗಣತಿಯಲ್ಲಿಯೂ ಅದಕ್ಕೆ ಪ್ರತ್ಯೇಕ ಸ್ಥಾನ ಸಿಕ್ಕಿದೆ.[2] ಪ್ರಪಂಚದಲ್ಲಿ ಈಗ ಸು. ೫೦ ಲಕ್ಷ ಕೊಂಕಣಿಗರು ಇದ್ದಾರೆ. ಇವರಲ್ಲಿ ಅತ್ಯಧಿಕ, ಅಂದರೆ ೨೫ ಲಕ್ಷ ಕೊಂಕಣಿಗರು ಇರುವುದು ಕರ್ನಾಟಕದಲ್ಲಿ. ಗೋವೆಯಲ್ಲಿ ೯ ಲಕ್ಷ; ಮಹಾರಾಷ್ಟ್ರದಲ್ಲಿ ೮ ಲಕ್ಷ; ಕೇರಳದಲ್ಲಿ ೪ ಲಕ್ಷ; ಇತರೆಡೆ ೪ ಲಕ್ಷ.

## ೧.೦. ಕೊಂಕಣಿಭಾಷಾ ಸಮಸ್ಯೆಗಳು

### ೧.೧. ಲಿಪಿ

ಕೊಂಕಣಿ ಭಾಷಾಭಿವೃದ್ಧಿ ಮಾಡುವಲ್ಲಿ ಹಲವಾರು ತೊಡಕುಗಳಿವೆ. ಅವುಗಳಲ್ಲಿ ಲಿಪಿ ಒಂದು. ಕೊಂಕಣಿ ಬರಹ ಸಾಹಿತ್ಯಕ್ಕೆ ಒಂದೇ ಲಿಪಿ ಇಲ್ಲ. ಕೊಂಕಣಿ ಸಾಹಿತ್ಯ ದೇವನಾಗರೀ, ರೋಮನ್, ಕನ್ನಡ, ಮಲಯಾಳಂ ಮತ್ತು ಅರೆಬಿಕ್ ಲಿಪಿಗಳಲ್ಲಿ ಹಂಚಿಹೋಗಿದೆ. ಕೊಂಕಣಿ ಸಾಹಿತ್ಯ ಮರಾಠಿ, ಕನ್ನಡ, ಮಲಯಾಳಂ ಮೊದಲಾದ ಸಾಹಿತ್ಯಗಳ ಜೊತೆಗೆ ಸ್ಪರ್ಧಿಗಿಳಿಯಬೇಕಾದರೆ ಕೊಂಕಣಿ ಸಾಹಿತ್ಯ ಲಿಪಿಗಳಲ್ಲಿ ಹಂಚಿಹೋಗಬಾರದು. ತಾತ್ವಿಕವಾಗಿ ಲಿಪಿ ಕೇವಲ ಸಾಹಿತ್ಯವನ್ನು ಬರಹಕ್ಕಿಳಿಸುವ ಸಾಧನ ಮಾತ್ರ. ಆದರೂ ಬರೆದ ಸಾಹಿತ್ಯಕ್ಕೆ

---

2. ಸಂಯುಕ್ತ ರಾಷ್ಟ್ರ ಸಂಸ್ಥೆಯಲ್ಲಿ ಪ್ರಥಮ ಕೊಂಕಣಿ ಭಾಷಣ ಮಾಡಿದ ಕೀರ್ತಿ ಯೇಸು ಸಮಾಜಿ ಫಾದರ್ ಜೆರಮ್ ಡಿಸೋಜ ಇವರಿಗೆ ಸಲ್ಲುತ್ತದೆ. ಇವರು ಭಾರತದ ಪ್ರತಿನಿಧಿಯಾಗಿ ೧೯೬೭ರಲ್ಲಿ ಅಲ್ಲಿಗೆ ಹೋಗಿದ್ದರು (Shanbagh, 11) ಇವರು ಮೂಲತಃ ದ.ಕ. ಜಿಲ್ಲೆಯ ಮೂಲ್ಕಿಯವರು.

ವಾಚಕರ ಪ್ರೋತ್ಸಾಹ ಬೆಂಬಲ ಸಿಗಬೇಕಾದರೆ ಎಲ್ಲರಿಗೂ ಓದಿ ಬರೆಯಲು ಅನುಕೂಲವಾಗುವ ಒಂದು ಲಿಪಿಯನ್ನು ಬಳಸುವುದು ಉತ್ತಮ. ಸ್ವತಂತ್ರ ಭಾರತದಲ್ಲಿ ಆ ಸ್ಥಾನ ದೇವನಾಗರಿ ಲಿಪಿಗೆ ಹೆಚ್ಚೆಚ್ಚು ಭಾವನಾತ್ಮಕ ಹಾಗೂ ಇತರ ಕಾರಣಗಳಿಂದ ದೊರಕುವುದರಿಂದ ಅನೇಕ ಪ್ರದೇಶಗಳಲ್ಲಿ ಹಂಚಿಹೋದ ಕೊಂಕಣಿ ಸಾಹಿತ್ಯವನ್ನು ಅಧಿಕ ಸಂಖ್ಯೆಯ ವಾಚಕರಿಗೆ ಲಭ್ಯ ಮಾಡಲು ದೇವ ನಾಗರೀ ಲಿಪಿಯನ್ನೇ ಬಳಸುವುದು ಸೂಕ್ತ. ಯಾವುದೇ ಸಾಂಪ್ರದಾಯಿಕ ಲಿಪಿ ಜೀವಂತಭಾಷೆಗಳಿಗೆ ಎಲ್ಲ ಕಾಲದಲ್ಲಿಯೂ ಪರಿಪೂರ್ಣವಾಗಿ ಸಮಾಧಾನಕರವಾಗಿ ಉಳಿಯುವುದು ಅಸಾಧ್ಯ. ಕಾರಣ ದೇವನಾಗರಿಲಿಪಿಯನ್ನು ಇಂದು ಕೊಂಕಣಿಯ ಉಚ್ಚಾರಗಳಿಗೆ ಅನುಗುಣವಾಗಿ ರೂಪಿಸಿಕೊಳ್ಳುವುದು ಅನಿವಾರ್ಯ. ಈಗ ಲಭ್ಯವಿರುವ ಲಿಪಿಗಳಲ್ಲಿ ದೇವನಾಗರೀ ಲಿಪಿ ಹೆಚ್ಚು ಸೂಕ್ತ ಎಂಬುದು ನನ್ನ ಅಭಿಪ್ರಾಯ.

ಆದರೆ ದ.ಕ. ಜಿಲ್ಲೆಯಲ್ಲಿ ಆರಂಭದಿಂದಲೂ ಕೊಂಕಣಿ ಸಾಹಿತ್ಯ ಬೆಳೆದದ್ದು ಕನ್ನಡ ಲಿಪಿಯಲ್ಲಿ. ಈ ಲಿಪಿಯಲ್ಲಿದ್ದಷ್ಟು ಕೊಂಕಣಿ ಸಾಹಿತ್ಯ, ಕೊಂಕಣಿ ನಿಯತ ಕಾಲಿಕಗಳು ಇನ್ನೊಂದು ಲಿಪಿಯಲ್ಲಿಲ್ಲವೆಂದರೆ ಅತಿಶಯೋಕ್ತಿಯಾಗ ಲಾರದು. ಅಷ್ಟೇ ಅಲ್ಲದೆ, ದ.ಕ. ಜಿಲ್ಲೆಯಲ್ಲಿ ದೇವನಾಗರಿಲಿಪಿಯ ಬಗೆಗೆ ಅಷ್ಟೊಂದು ಆಸಕ್ತಿಯೂ ಇಲ್ಲ. ಈ ಕಾರಣಗಳಿಂದಾಗಿ ಒಮ್ಮಿಂದೊಮ್ಮೆಲೇ ಕನ್ನಡ ಲಿಪಿಯನ್ನು ಪದಚ್ಯುತಿಗೊಳಿಸುವುದು ಕೊಂಕಣಿ ಸಾಹಿತ್ಯಕ್ಕೆ ತಾರಕವಲ್ಲ. ಅದು ನಿಜವಾಗಿಯೂ ಮಾರಕವೇ ಸರಿ. ಕಾರಣ ಯಾವುದೇ ಒತ್ತಾಯವಿಲ್ಲದೆ ತನ್ನಿಂದ ತಾನೇ ದೇವನಾಗರಿ ಲಿಪಿ ಕೊಂಕಣಿ ಸಾಹಿತಿಗಳ ಪ್ರಜ್ಞೆಯನ್ನು ಪ್ರವೇಶಿಸುವ ತನಕ ಕೊಂಕಣಿ ಸಾಹಿತ್ಯದಲ್ಲಿರುವ ಕನ್ನಡ ಲಿಪಿಯ ಸ್ಥಾನಮಾನಕ್ಕೆ ಧಕ್ಕೆ ತರುವ ಪ್ರಯತ್ನ ಮಾಡುವುದು ಉಚಿತವಲ್ಲ. ಎಷ್ಟಾದರೂ ಲಿಪಿಯೇ ಸಾಹಿತ್ಯವಲ್ಲ. ಲಿಪಿ ಸಾಹಿತ್ಯವನ್ನು ಬರೆದು ಹಿಡಿಯಲು ಬಳಸುವ ಒಂದು ಸಾಧನ ಮಾತ್ರ. ಭಾರತದಲ್ಲಿಯೇ ಅನೇಕ ಭಾಷೆಗಳನ್ನು ಎರಡೆರಡು ಲಿಪಿಗಳಲ್ಲಿ ಬರೆಯುವ ರೂಢಿ ಇದ್ದೇ ಇದೆ. ಕೆಳಗಿನ ಕೋಷ್ಟಕವನ್ನು ಗಮನಿಸಿ:

ಅನೇಕ ಲಿಪಿಗಳುಳ್ಳ ಭಾಷೆಗಳು

| ದೇಶ | ಭಾಷೆ | ಲಿಪಿ |
| --- | --- | --- |
| ೧. ಭಾರತ | ೧. ಹಿಂದೂಸ್ಥಾನಿ | ಪರ್ಸೊ–ಅರೆಬಿಕ್, ದೇವನಾಗರೀ, ರೋಮನ್ |
| | ೨. ಸಿಂಧಿ | ಪರ್ಸೊ–ಅರೆಬಿಕ್, ಗುರುಮುಖಿ, ದೇವನಾಗರಿ |
| | ೩. ಕಾಶ್ಮೀರಿ | ಪರ್ಸೊ–ಅರೆಬಿಕ್, ದೇವನಾಗರಿ, ರೋಮನ್ |

| ದೇಶ | ಭಾಷೆ | ಲಿಪಿ |
|---|---|---|
| | ೪. ಮೈಥಿಲಿ | ಮೈಥಿಲಿ,* ದೇವನಾಗರಿ |
| | ೫. ನೆವಾರಿ | ನೆವಾರಿ,* ದೇವನಾಗರಿ |
| | ೬. ಮಣಿಪುರಿ | ಮಣಿಪುರಿ,* ರೋಮನ್, ದೇವನಾಗರಿ |
| | ೭. ಸಂತಾಲಿ | ಬೆಂಗಾಲಿ-ಒರಿಯಾ, ದೇವನಾಗರಿ, ರೋಮನ್, ಒಲ್ |
| | ೮. ಮುಂಡಾರಿ | ರೋಮನ್, ದೇವನಾಗರಿ |
| ೨. ಯುಗೊಸ್ಲಾವ್ | ೧. ಸೆರ್ಬೋಕ್ರೋಟ್ | ಸಿರಿಲಿಕ್, ರೋಮನ್ |
| ೩. ಜರ್ಮನಿ | ೧. ಜರ್ಮನ್ | ಗೋಥಿಕ್, ರೋಮನ್ |

ವಿ.ಸೂ: ಜಗತ್ತಿನಾದ್ಯಂತ ಭಾಷಾವಿಜ್ಞಾನಿಗಳು ಸಾಮಾನ್ಯವಾಗಿ ರೋಮನ್ ಲಿಪಿ ಆಧರಿತ ಧ್ವನಿಮಾತ್ರಕ ಲಿಪಿ ಸಂಕೇತಗಳನ್ನು ಬಳಸುವುದಕ್ಕೆ ಹೆಚ್ಚಿನ ಒಲವನ್ನು ತೋರಿಸುತ್ತಾರೆ. ಇದು ವಿಶ್ವಭಾಷೈಕ್ಯತೆಯ ದೃಷ್ಟಿಯಿಂದಲೂ ಬಹಳ ಮಹತ್ವದ್ದು.

### ೧.೨. ಉಚ್ಚಾರದ ಪ್ರಮಾಣೀಕರಣ

ಕೊಂಕಣಿ ಭಾಷೆ ಒಂದಾದರೂ ಅದರ ಉಚ್ಚಾರದ ರೀತಿ ಹಲವಾರು. ಗೋವೆಯವರು ಒಂದು ಧಾಟಿಯಲ್ಲಿ ಮಾತನಾಡಿದರೆ ರತ್ನಗಿರಿಯವರ ರೀತಿಯೇ ಬೇರೆ. ಉತ್ತರ ಕನ್ನಡ ಜಿಲ್ಲೆಯವರ ಶೈಲಿ ಒಂದಾದರೆ ದಕ್ಷಿಣ ಕನ್ನಡ ಜಿಲ್ಲೆಯವರದ್ದು ಇನ್ನೊಂದು. ಸಾರಸ್ವತರ ಉಚ್ಚಾರಕ್ಕೂ ಕ್ರೈಸ್ತರ ಉಚ್ಚಾರಕ್ಕೂ ಅಜಗಜಾಂತರ. ಹೀಗಾಗಿ ವಿಭಿನ್ನ ಪ್ರದೇಶದವರು ಅಥವಾ ವಿಭಿನ್ನ ಸಮಾಜದ ಕೊಂಕಣಿಗರು ಪರಸ್ಪರ ಭೇಟಿಯಾದಾಗ ಕೊಂಕಣಿಯನ್ನು ಬಿಟ್ಟು ಪ್ರಾದೇಶಿಕ ಭಾಷೆಗಳಲ್ಲಿ ಅಥವಾ ಇಂಗ್ಲಿಷಿನಲ್ಲಿ ಮಾತನಾಡುವುದೇ ಜಾಸ್ತಿ.

ಯಾವುದೇ ಭಾಷೆಯ ಉಚ್ಚಾರದಲ್ಲಿ ಭಿನ್ನತೆಯನ್ನು ಸಂಪೂರ್ಣವಾಗಿ ತೆಗೆದುಹಾಕುವುದು ದುಸ್ಸಾಧ್ಯ ಹಾಗೂ ಅಸಾಧು. ಆದರೆ ಸುಲಭವಾಗಿ ಪರಸ್ಪರ ಅರ್ಥವಾಗುವಷ್ಟರ ಮಟ್ಟಿಗಾದರೂ ಒಂದು ಸಾಮೀಪ್ಯತೆಯಾದರೂ ಬೇಡವೆ?

ಭಾಷಾ ಉಚ್ಚಾರದಲ್ಲಿ ಏಕತೆ ಸಾಮೀಪ್ಯತೆ ಇಲ್ಲಿದಿದ್ದರೆ ಪರಸ್ಪರ ಸಂಪರ್ಕಕ್ಕೆ ತೊಡಕಾಗುತ್ತದೆ. ಆದರೆ ಸಾಮೀಪ್ಯತೆ ತರಲಿಕ್ಕೆ ಯಾವುದಾದರೂ ಒಂದು ಪ್ರದೇಶ ಅಥವಾ ಸಮಾಜದ ಉಚ್ಚಾರವನ್ನು ಸಾರ್ವತ್ರಿಕವಾಗಿ ಹೇರಿಸು ವುದೂ ಸರಿಯಲ್ಲ. ಇದರ ಬದಲಾಗಿ ಆಯಾಯ ಪ್ರದೇಶದ ವಿವಿಧ ಕೊಂಕಣಿ

* ಈ ಲಿಪಿಯತ್ತ ಇತ್ತೀಚೆಗೆ ಒಲವು ಹೆಚ್ಚುತ್ತಿದೆ.

ಸಮಾಜದವರು ಪರಸ್ಪರ ಸೇರಿಕೊಂಡು ಕೆಲವು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಮತ್ತು ಸಾಮಾಜಿಕ ಸೇವಾ ಚಟುವಟಿಕೆಗಳಲ್ಲಿ ತೊಡಗಿದರೆ ಪರಸ್ಪರ ಸಂಬಂಧ ಗಳು ಹೆಚ್ಚೆಚ್ಚು ದಟ್ಟವಾಗಿ ಬೆಳೆದು ಕಾಲಕ್ರಮೇಣ ಉಚ್ಚಾರದಲ್ಲಿ ಒಂದು ಸಾಮಾನ್ಯೀಕರಣ ಬರುವುದರಲ್ಲಿ ಸಂದೇಹವಿಲ್ಲ. ಅದೇ ರೀತಿಯಲ್ಲಿ ಸಾಹಿತ್ಯಿಕವಾಗಿ, ಸಾಂಸ್ಕೃತಿಕವಾಗಿ ವಿಭಿನ್ನ ಪ್ರದೇಶಗಳ ಕೊಂಕಣಿಗರು ಕೂಡುವ ಸಂದರ್ಭಗಳನ್ನು ಹೆಚ್ಚೆಚ್ಚು ಕಲ್ಪಿಸಿಕೊಂಡರೆ ಪ್ರಾದೇಶಿಕ ಭಿನ್ನತೆಗಳೂ ಕಡಿಮೆಗೊಳ್ಳುವ ಸಂಭವ ಹೆಚ್ಚು. ಇದಕ್ಕಿಂತಲೂ ಹೆಚ್ಚಾಗಿ ವಿವಿಧ ಸಮಾಜಗಳು, ಪ್ರದೇಶಗಳ ನಾಟಕಕಾರರು, ಹಾಡುಗಾರರು ಜೊತೆಜೊತೆಯಾಗಿ ಸೇರಿ ತಮ್ಮ ಕಲಾಪ್ರದರ್ಶನಗಳನ್ನು ಏರ್ಪ ಡಿಸುವುದು, ದೂರದರ್ಶನ, ಆಕಾಶವಾಣಿ ಮೊದಲಾದವುಗಳ ಮೂಲಕ ತಮ್ಮ ಕಾರ್ಯಕ್ರಮಗಳನ್ನು ಜೊತೆ ಸೇರಿಕೊಂಡು ಬಿತ್ತರಿಸುವುದು, ವಿವಿಧ ಕೊಂಕಣಿಗರ ಸಹಾಯದಿಂದ ಚಲನಚಿತ್ರಗಳನ್ನು ಸಿದ್ಧಗೊಳಿಸುವುದು ಹೀಗೆ ವಿವಿಧ ಸಾಂಸ್ಕೃತಿಕ ಹಾಗೂ ಕಲಾ ಮಾಧ್ಯಮಗಳ ಮೂಲಕ ವಿವಿಧ ಪ್ರದೇಶಗಳ ಹಾಗೂ ಸಮಾಜ ಗಳ ಕೊಂಕಣಿಗಳನ್ನು ಸಮೀಪ ತರಿಸುವ, ಚರ್ಚಿಸುವ, ಮಾತನಾಡುವ, ಅಭಿ ಪ್ರಾಯಗಳನ್ನು ವ್ಯಕ್ತಪಡಿಸುವ ಅವಕಾಶಗಳನ್ನು ನಿರ್ಮಿಸುವುದು ಅತ್ಯಗತ್ಯ. ಎಷ್ಟು ಪರಸ್ಪರ ಸೇರುತ್ತೇವೆ ಅಷ್ಟು ವ್ಯತ್ಯಾಸಗಳು ಕಳಚಿ ಹೋಗುತ್ತವೆ. ನಾವೆಲ್ಲರೂ ಕೊಂಕಣಿಗರು ಎಂಬ ಏಕತಾ ಭಾವನೆಗೆ ಸಮಾಜದಲ್ಲಿ ಪ್ರಾಶಸ್ತ್ಯ ಕೊಡಬೇಕೇ ಹೊರತು ನಮ್ಮನ್ನು ಪರಸ್ಪರ ಬೇರ್ಪಡಿಸುವ ಧರ್ಮ, ಜಾತಿ, ಪಂಗಡಗಳಿಗಲ್ಲ. ವೈವಿಧ್ಯಗಳುಳ್ಳ ಕೊಂಕಣಿಗರ ಸಂಪರ್ಕ ಹೆಚ್ಚೆಚ್ಚಾದಾಗ ಅವರ ಭಾಷಾ ಉಚ್ಚಾರ ದಲ್ಲಿ ವೈಷಮ್ಯಗಳು ಕಡಿಮೆಯಾಗಿ ಸಾಮ್ಯತೆಯ ಪ್ರಮಾಣ ಜಾಸ್ತಿಯಾಗುತ್ತದೆ. ಇದರಿಂದಾಗಿ ಕೊಂಕಣಿಯಲ್ಲಿ ಪರಸ್ಪರ ಸಂಪರ್ಕಿಸಲು ಸಂತೋಷವೆನಿಸುತ್ತದೆ.

ಕೊಂಕಣಿ ಶಾಲೆಗಳು ಅಥವಾ ಶಾಲೆಗಳಲ್ಲಿ ಕೊಂಕಣಿ ಹೆಚ್ಚೆಚ್ಚು ಬಂದಾಗ ಉಚ್ಚಾರದಲ್ಲಿ ಏಕತೆ ಬರುವುದು ಸುಲಭಸಾಧ್ಯವಾಗಬಹುದು. ಜೀವನದ ಹಲವಾರು ಮಜಲುಗಳಲ್ಲಿ ಈ ಏಕತೆ ಅನಗತ್ಯವಾದರೂ ಕೆಲವೊಂದು ವಿಶಿಷ್ಟ ಸಾಮಾಜಿಕ, ಧಾರ್ಮಿಕ, ರಾಜಕೀಯ ಸಂದರ್ಭಗಳಲ್ಲಿ ಇಂತಹ ಸಾಮೀಪ್ಯತೆ ಅಪೇಕ್ಷಣೀಯ. ಸಮೂಹ ಮಾಧ್ಯಮಗಳಲ್ಲಿಯೂ ಇದು ಅತ್ಯಗತ್ಯ.

ಕೊಂಕಣಿ ಉಚ್ಚಾರದಲ್ಲಿ ಏಕತೆ ಅಥವಾ ಸಾಮೀಪ್ಯತೆ ಕೂಡಾ ದಿಢೀರನೆ ಬರಬೇಕಾದುದಲ್ಲ. ಆದರೂ ಈ ನಿಟ್ಟಿನಲ್ಲಿ ಕೊಂಕಣಿ ಭಾಷಾ ಯೋಜನೆಯಲ್ಲಿ ಗಮನ ಹರಿಯಿಸಬೇಕಾದುದು ಕೊಂಕಣಿಯ ಸಾಹಿತ್ಯಾಭಿವೃದ್ಧಿಗೆ ಅನಿವಾರ್ಯ. ಕೊಂಕಣಿಗರು ಯಾವುದೇ ಸಮಾಜದವರಾಗಲಿ ಪರಸ್ಪರ ಭೇಟಿಯಾದಾಗ ತಂತಮ್ಮ ಉಚ್ಚಾರದ ಬಗ್ಗೆ, ಶಬ್ದವಿಶೇಷಗಳ ಬಗ್ಗೆ ನಾಚಿಕೊಳ್ಳದೆ, ಕೊಂಕಣಿ ಯಲ್ಲಿಯೇ ಮಾತನಾಡಬೇಕು. ಆಗ ಕೊಂಕಣಿ ಕಾಲಾಂತರದಲ್ಲಿ ಸಹಜವಾದ ಏಕತೆಯ ಕಡೆ ಸಾಗುವುದು ಸುಲಭಸಾಧ್ಯವಾಗುತ್ತದೆ. ಕರ್ನಾಟಕದಲ್ಲಿ ಕೊಂಕಣಿ

ಮಾತನಾಡಲು ಕೊಂಕಣಿಗರು ಹೆದರಬೇಕಾಗಿಲ್ಲ. ನಾಚಬೇಕಾಗಿಲ್ಲ. ಕೊಂಕಣಿಯಿಂದಾಗಿ ನಾವು ಕರ್ನಾಟಕದವರಾಗಿಯೇ ಉಳಿಯುತ್ತೇವೆ. ಬಾಳುತ್ತೇವೆ. ಕೊಂಕಣಿ ಸ್ವಾಭಿಮಾನ ದಿಂದಾಗಿ ಅನ್ಯ ಭಾಷೆಗಳ ದುರಭಿಮಾನ ಹುಟ್ಟಬೇಕಾಗಿಲ್ಲ. ಹುಟ್ಟಬಾರದು.

## ೧.೩. ಸಾಹಿತ್ಯಿಕ ಕೊಂಕಣಿ ನಿರ್ಮಾಣ

ಕೊಂಕಣಿಯಲ್ಲಿ ವಾಚಿಕ ಕಲೆ (Verbal-art) ಅರ್ಥಾತ್ ಮೌಖಿಕ ಸಾಹಿತ್ಯ(Oral literature) ಬಹಳ ವಿಪುಲವಾಗಿದ್ದರೂ ಲಿಖಿತ ಸಾಹಿತ್ಯದಲ್ಲಿಯೂ ಅದು ಮುಂದೆ ಸಾಗುತ್ತಿರುವುದು ಸಮಾಧಾನಕರವಾದ ವಿಷಯ. ಆದರೆ ಅದು ಕನ್ನಡ, ಮರಾಠಿ, ಮಲಯಾಳಂ ಸಾಹಿತ್ಯಗಳೊಡನೆ ಪೈಪೋಟಿ ನಡೆಯಿಸುವಷ್ಟರ ಮಟ್ಟಿಗೆ ಬೆಳೆದಿಲ್ಲವೆಂದರೆ ಮಹಾ ಅಪರಾಧವಾಗಲಾರದು. ಗೋವೆಯಲ್ಲಿ ಕೊಂಕಣಿ ಯನ್ನು ಹಿಂದಕ್ಕೆ ನಾಗರೀ ಹಾಗೂ ಗೋಮಾಂತಕೀ ಕನ್ನಡಲಿಪಿಯಲ್ಲಿ ಬರೆಯುತ್ತಿ ದ್ದರೆ(Shanbhag, 28) ಈಗ ರೋಮನ್ ಹಾಗೂ ನಾಗರೀಲಿಪಿಗಳಲ್ಲಿ ಬರೆ ಯುತ್ತಾರೆ. ಕರ್ನಾಟಕದಲ್ಲಿ ಕನ್ನಡ ಲಿಪಿಯಲ್ಲಿಯೂ ಕೇರಳದೊಳಗೆ ಮಲಯಾಳಂ ಲಿಪಿಯಲ್ಲಿಯೂ ಕೊಂಕಣಿಯನ್ನು ಹೆಚ್ಚಾಗಿ ಬರೆದರೆ ನವಾಯತರು ಅರಬಿ ಲಿಪಿ ಯನ್ನು ಕೊಂಕಣಿಗೆ ಬಳಸಿಕೊಂಡಿದ್ದಾರೆ.

ಕೇವಲ ಲಿಪಿ ಭಿನ್ನತೆಗಳು ಮಾತ್ರವಲ್ಲದೆ ಪ್ರಾದೇಶಿಕ ಕೊಂಕಣಿ ಪ್ರಭೇದ ಗಳು ಇವೆ. ಗೋವೆಯ ಕೊಂಕಣಿ, ಕರ್ನಾಟಕ ಕೊಂಕಣಿ ಮತ್ತು ಕೇರಳ ಕೊಂಕಣಿ ಗಳು ಪರಸ್ಪರ ಅರ್ಥವಾಗುವುದು ಕಷ್ಟವೇ. (Pereira, 16) ಕೊಂಕಣಿಯ ಮೇಲೆ ಆಗಿರುವ ಪ್ರಾದೇಶಿಕ ಭಾಷೆಗಳ ದಟ್ಟ ಪ್ರಭಾವವೇ ಅದಕ್ಕೆ ಮುಖ್ಯ ಕಾರಣ. (Shanbhag, 14, 35-36).

ಭಾಷೆಯಲ್ಲಿ ಪ್ರಾದೇಶಿಕತೆ ಹೆಚ್ಚಾದಂತೆ ಸಂವಹನ ಕಠಿಣಗೊಳ್ಳುತ್ತದೆ. ಸಂವಹನವಾಗದಿದ್ದಲ್ಲಿ ಸಾಹಿತ್ಯದಿಂದ ಆನಂದ ಪಡೆಯುವುದಾದರೂ ಹೇಗೆ? ಸಾಹಿತ್ಯದಿಂದ ರಸಾನಂದ ದೊರಕದಿದ್ದರೆ ಅದು ವಾಚಕನ ಮಟ್ಟಿಗೆ ಸಾಹಿತ್ಯವೇ? ಪ್ರಾದೇಶಿಕ ಕೊಂಕಣಿ ಸಾಹಿತ್ಯಗಳ ಸ್ಥಿತಿ ಇದೇ ಕಾರಣದಿಂದ ಚಿಂತಾಜನಕವಾಗಿದೆ.

ಸಾಹಿತ್ಯಿಕ ಕೊಂಕಣಿ ಬೆಳವಣಿಗೆಯಾಗಬೇಕಾದದ್ದೂ ವ್ಯಾಕರಣಕಾರರಿಂದಾ ಗಲಿ ಭಾಷಾವಿಜ್ಞಾನಿಗಳಿಂದಾಗಲಿ ಅಲ್ಲ. ಅದು ಆಗಬೇಕಾದದ್ದು ಸಾಹಿತಿಗಳಿಂದ ಮಾತ್ರ. ವಿಭಿನ್ನ ಪ್ರದೇಶಗಳ, ಸಮಾಜಗಳ ಕೊಂಕಣಿ ಸಾಹಿತಿಗಳು ಎಷ್ಟು ಆತ್ಮೀ ಯತೆಯಿಂದ ಪರಸ್ಪರ ಸೇರಿಕೊಂಡು, ಪರಸ್ಪರ ಸಾಹಿತ್ಯವನ್ನು ಓದಿಕೊಂಡು, ವಿಭಿನ್ನ ಕೊಂಕಣಿಗಳ ಪದಸಂಪತ್ತನ್ನೂ, ವಾಗ್ರೂಢಿಗಳನ್ನೂ, ನುಡಿಕಟ್ಟುಗಳನ್ನೂ ಬಳಸಿಕೊಂಡು ಸಾಹಿತ್ಯ ನಿರ್ಮಾಣ ಮಾಡುತ್ತಾರೋ ಅಷ್ಟಷ್ಟರ ಮಟ್ಟಿಗೆ ಸಾಹಿತ್ಯಿಕ ಕೊಂಕಣಿಯಲ್ಲಿ ಏಕತೆ ಅಥವಾ ಸಾಮೀಪ್ಯತೆ ಬರುವುದು ಸಾಧ್ಯ

ವಾಗುತ್ತದೆ. ಕೊಂಕಣಿ ಸಾಹಿತಿಗಳ, ಭಾಷಾವಿಜ್ಞಾನಿಗಳ, ವಿಮರ್ಶಕರ ಅಂತಾರಾಜ್ಯ ಮಟ್ಟದ ಕೂಟಗಳು ಆಗಾಗ ಸೇರಬೇಕು. ಚರ್ಚೆಗಳು ನಡೆಯಬೇಕು. ಸಾಹಿತ್ಯ ವಾಚನ ವಿಮರ್ಶೆಗಳು ನಡೆಯಬೇಕು. ಈ ನಿರಂತರ ಪ್ರಕ್ರಿಯೆಯಿಂದಾಗಿ ಮಾತ್ರ ಒಂದು ಬಲಿಷ್ಠ ವಾದ, ಶಕ್ತಿಯುತವಾದ ಸಾಹಿತ್ಯಿಕ ಭಾಷೆ ರೂಪುಗೊಳ್ಳುವುದು ಸಾಧ್ಯವಾಗುತ್ತದೆ. ಶ್ರೇಷ್ಠ ಸಾಹಿತಿಗಳ ಸಂಖ್ಯೆ ಹೆಚ್ಚಾದಂತೆ ಶ್ರೇಷ್ಠ ಸಾಹಿತ್ಯಿಕ ಭಾಷೆಯೂ ರೂಪುಗೊಳ್ಳುತ್ತದೆ.

ಸಾಹಿತ್ಯಿಕ ಭಾಷೆಯನ್ನು ರೂಪಿಸುವಲ್ಲಿ ವೃತ್ತಪತ್ರಿಕೆ ಮತ್ತು ನಿಯತ ಕಾಲಿಕೆಗಳ ಪಾತ್ರ ಬಹು ಹಿರಿದಾದುದು. ಒಂದು ಧರ್ಮಕ್ಕೆ ಅಥವಾ ಜಾತಿಗೆ ಸೀಮಿತವಾಗಿ ಈ ವೃತ್ತಪತ್ರಿಕೆ ಅಥವಾ ನಿಯತಕಾಲಿಕೆಗಳು ಬೆಳಕನ್ನು ಕಂಡರೆ ಅವುಗಳಿಂದ ಕೊಂಕಣಿ ಸಾಹಿತ್ಯದ ಭಾಷೆ ಬೆಳೆಯಲಾರದು. ಕೊಂಕಣಿಯ ಉತ್ತಮ ಲೇಖಕರನ್ನು ಆಕರ್ಷಿಸುವಂತಹ ಕನ್ನಡದ 'ತರಂಗ'ದಂತಹ ಉನ್ನತ ಮಟ್ಟದ ಒಂದು ನಿಯತಕಾಲಿಕೆ ಕೊಂಕಣಿಗೆ ಅಗತ್ಯ. ವಿಭಿನ್ನ ಕೊಂಕಣಿ ಕುಲದವರು ಒಂದು ಕಡೆ ಸೇರಿ ತಮ್ಮ ಸಂಪನ್ಮೂಲಗಳನ್ನು ಕೇಂದ್ರೀಕರಿಸಿ ಇಂತಹ ಒಂದು ಪತ್ರಿಕೆಯನ್ನು ತರುವಲ್ಲಿ ಯಶಸ್ವಿಯಾದರೆ, ತಂತಮ್ಮ ಸೀಮಿತ ವಲಯಗಳ ಪತ್ರಿಕೆ ಗಳನ್ನು ನಿರ್ಲಕ್ಷಿಸಿದರೂ ತಪ್ಪಾಗಲಿಕ್ಕಿಲ್ಲ ಎಂಬುದು ನನ್ನ ಖಚಿತ ಅಭಿಪ್ರಾಯ.

ಈ ನಿಯತಕಾಲಿಕೆಯಲ್ಲಿ ಬಳಸುವ ಭಾಷೆಯ ಸ್ವರೂಪವನ್ನು ಕೆಲವು ಮಟ್ಟಿಗೆ ಪ್ರಮಾಣೀಕರಿಸಬಹುದು. ಕೆಥೋಲಿಕ್ ಕ್ರೈಸ್ತ ಸಮಾಜದವರು ಕೊಂಕಣಿ ಯನ್ನು ತಮ್ಮ ಉಪಾಸನಾ ವಿಧಿಗಳಿಗೆ ಬಳಸುವಲ್ಲಿ ಗೋವೆ ಮತ್ತು ಕರ್ನಾಟಕಕ್ಕೆ ಅನ್ವಯಿಸಿ ಪ್ರಮಾಣೀಕರಿಸಿದ್ದಾರೆ. ಇದು ಅತ್ಯಂತ ಯಶಸ್ವಿಯೂ ಆಗಿದೆ ಎಂಬು ದನ್ನು ಇಲ್ಲಿ ಸ್ಮರಿಸಿಕೊಳ್ಳಬಹದು.

ಸಾಹಿತ್ಯಿಕ ಕೊಂಕಣಿ ನಿರ್ಮಾಣದ ಪ್ರಕ್ರಿಯೆಯಲ್ಲಿ ಇನ್ನೊಂದು ಮಹತ್ವದ ಕೆಲಸವೆಂದರೆ ಪ್ರಾಚೀನ ಅಥವಾ ಮಧ್ಯಕಾಲದ ಕೊಂಕಣಿ ಸಾಹಿತ್ಯಿಕ ಮಾರ್ಗ ಕೃತಿಗಳನ್ನು ಪುನರ್ಮುದ್ರಿಸುವುದು. ಕ್ರಿ. ಶ. ೧೬ನೇ ಶತಮಾನದಲ್ಲಿ ಕೃಷ್ಣದಾಸ ಶರ್ಮಾ ಅವರು ಬರೆದ ಕೊಂಕಣಿ ರಾಮಾಯಣ, ಮಹಾಭಾರತ ಪುರಾಣಗಳು, ಯೇಸು ಸಮಾಜಿ ಫಾ। ಸ್ಟೀವನ್‌ಸನ್ ಅವರ ಕ್ರಿಸ್ತ ಪುರಾಣ, ಶೆಣ್ಯೆ ಗೊಂಯೆ ಬಾಬ್ ಇವರ ಕೊಂಕ್ಣಿ ವ್ಯಾಕರಣ, ಯೇಸು ಸಮಾಜಿ ಫಾ। ಮಾಫೇಯೀ ಅವರ ಕೊಂಕ್ಣಿ ವ್ಯಾಕರಣ ಮತ್ತು ನಿಘಂಟುಗಳು ಹೀಗೆ ಇತರ ಸಾಹಿತ್ಯಿಕ ಹಾಗೂ ಶಾಸ್ತ್ರೀಯ ಗ್ರಂಥಗಳು ಪುನರ್ಮುದ್ರಣವಾಗಬೇಕು. ಅದೇ ರೀತಿಯಲ್ಲಿ ಧಾರ್ಮಿಕ ಗ್ರಂಥಗಳು (ವೇದಗಳು, ಉಪನಿಷತ್ತುಗಳು, ಬೈಬಲ್, ಕುರ್‌ಆನ್), ಆಧ್ಯಾತ್ಮಿಕ ಗ್ರಂಥಗಳು, ಸಂತರ ಜೀವನ ಚರಿತ್ರೆಗಳು ಇವುಗಳ ಕೊಂಕಣಿ ಭಾಷಾಂತರಗಳು ದೊರಕಬೇಕು. ಸಂಸ್ಕೃತ, ಪರ್ಷಿಯನ್, ಅರೇಬಿಕ್, ಇಂಗ್ಲಿಷ್, ಹಿಂದಿ ಮೊದಲಾದ ಭಾಷೆಗಳಲ್ಲಿಯ ಮೌಲಿಕ ಸಾಹಿತ್ಯ ಕೃತಿಗಳ ಭಾಷಾಂತರಗಳನ್ನು ಕೊಂಕಣಿ ಸಾಹಿತಿಗಳು ಕೊಂಕಣಿಯಲ್ಲಿ ತರಬೇಕು. ಅದರಂತೆಯೇ ವಿಭಿನ್ನ ಲಿಪಿಗಳಲ್ಲಿಯ

ಸಾಹಿತ್ಯವನ್ನು ತಂತಮ್ಮ ಲಿಪಿಗಳಲ್ಲಿ ಲಿಪ್ಯಂತರಿಸುವ ಕೆಲಸವೂ ಜೊತೆಜೊತೆಯಲ್ಲಿ ನಡೆಯಬೇಕು. ಆಗ ಕೊಂಕಣಿ ಸಾಹಿತ್ಯಕ್ಕೆ ಭದ್ರವಾದ ಬುನಾದಿಯೂ ಅಂತೆಯೇ ಸ್ಪಷ್ಟವಾದ ದಿಗಂತವೂ ದೊರಕವುದು. ಇವುಗಳಿಂದಾಗಿ ಕೊಂಕಣಿ ಸಾಹಿತ್ಯ ಪುಷ್ಟಿಯಾಗಿ ಹಾಗೂ ಗಟ್ಟಿಯಾಗಿ ಬೆಳೆಯುವುದು ಸಾಧ್ಯವಾಗುತ್ತದೆ.

## ೨.೦. ಕೊಂಕಣಿ ಭಾಷಾ ಯೋಜನೆಗಳು

ಪ್ರಜಾಪ್ರಭುತ್ವದಲ್ಲಿ ಬಹುಸಂಖ್ಯಾತ ಭಾಷೆಯೇ ಆಡಳಿತ ಭಾಷೆಯಾಗುವುದು ಸಹಜ. ಆದರೆ ಉಳಿದ ಭಾಷೆಗಳ ಬಗೆಗೆ ದಮನ ಪ್ರವೃತ್ತಿ ಮಾತ್ರ ಸಲ್ಲದು. ಸಮಾಜದಲ್ಲಿ ಪ್ರತಿಯೊಂದು ಭಾಷೆಗೂ ಅದರದ್ದೇ ಆದ ಸ್ಥಾನ ಇದ್ದೇ ಇರುತ್ತದೆ. ಪ್ರಜಾಪ್ರಭುತ್ವದಲ್ಲಿ ಎಲ್ಲ ಪ್ರಜೆಗಳೂ ಸಮಾನರು. ಅಂತೆಯೇ ಅವರ ಭಾಷೆಗಳೂ ಸಮಾನ. ದುರದೃಷ್ಟವಶಾತ್, ಅಲ್ಪಸಂಖ್ಯಾತರ ಅಭಿವೃದ್ಧಿಗೆ ಸರಕಾರಗಳು ಹಾಗೂ ಬಹುಸಂಖ್ಯಾತರು ಅಷ್ಟೊಂದು ಉತ್ಸುಕತೆಯನ್ನು ತೋರುವುದು ಕಂಡುಬರುತ್ತಿಲ್ಲ.

ಅಲ್ಪಸಂಖ್ಯಾತ ಭಾಷೆಗಳ ಅಭಿವೃದ್ಧಿಗೆ ಪ್ರಾಧಾನ್ಯತೆ ಕೊಟ್ಟಾಗ ಕರ್ನಾಟಕದ ಅವಿಭಾಜ್ಯಾಂಗಗಳಾದ ಎಲ್ಲ ಸಮಾಜಗಳ ಸಾಂಸ್ಕೃತಿಕ ಬೆಳವಣಿಗೆ ಸಾಧ್ಯವಾಗುತ್ತದೆ. ಕರ್ನಾಟಕದ ೨೫ ಲಕ್ಷ ಕೊಂಕಣಿಗರು ರಾಷ್ಟ್ರದ ಹಾಗೂ ರಾಜ್ಯದ ಸರ್ವತೋಮುಖ ಅಭಿವೃದ್ಧಿಯಲ್ಲಿ ತೊಡಗಿರುವಾಗ ಅವರ ಜಾನಾಂಗಿಕ ಭಾಷೆಯಾಗಿರುವ ಕೊಂಕಣಿಯ ಅಭಿವೃದ್ಧಿಗೋಸ್ಕರ ಯೋಜನೆ ಹಾಕಿಕೊಳ್ಳುವುದು ಕರ್ನಾಟಕ ಸರಕಾರದ ಕರ್ತವ್ಯಗಳಲ್ಲೊಂದು. ಕೊಂಕಣಿ ಭಾಷಾಭಿವೃದ್ಧಿಗೆ ಈ ಕೆಳಗಿನ ಯೋಜನೆಗಳು ಅನಿವಾರ್ಯ.

೧. ಕೊಂಕಣಿ : ಪ್ರಾಥಮಿಕ ಶಿಕ್ಷಣ ಮಾಧ್ಯಮವಾಗಿ

೨. ಕೊಂಕಣಿ : ಸಮೂಹ ಸಂಪರ್ಕ ಸಾಧನವಾಗಿ

೩. ಕೊಂಕಣಿ : ಸಾಹಿತ್ಯ ಭಾವೈಕ್ಯತೆಯ ಕೊಂಡಿಯಾಗಿ

## ೨.೧. ಶಿಕ್ಷಣದಲ್ಲಿ ಕೊಂಕಣಿ

ಮಾತೃಭಾಷೆಯಲ್ಲಿ ಪ್ರಾಥಮಿಕ ಶಿಕ್ಷಣವಾಗಬೇಕೆಂಬುದು ಕರ್ನಾಟಕ ಸರಕಾರದ ಧೋರಣೆ. ಕರ್ನಾಟಕದಲ್ಲಿ ಅದರಲ್ಲಿಯೂ ಕರಾವಳಿ ಕರ್ನಾಟಕದ ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಕೊಂಕಣಿಗರ ಸಂಖ್ಯೆ ಬಹಳ ಅಧಿಕವಾಗಿರುವುದರಿಂದ ಈ ಎರಡು ಜಿಲ್ಲೆಗಳಲ್ಲಿಯಾದರೂ ಕೊಂಕಣಿ ಮಾಧ್ಯಮದ ಪ್ರಾಥಮಿಕ ಶಾಲೆಗಳನ್ನು ತೆರೆಯಬೇಕು. ಅಂತೆಯೇ ಅಗತ್ಯವಿದ್ದ ಕಡೆಗಳಲ್ಲಿ ಮತ್ತು ಕೋರಿಕೆ

ಗಳಿದ್ದಲ್ಲಿ ಕನ್ನಡ ಮತ್ತು ಇಂಗ್ಲಿಷ್ ಮಾಧ್ಯಮದ ಶಾಲೆಗಳಲ್ಲಿ ಕೊಂಕಣಿ ವರ್ಗಗಳನ್ನು ತೆರೆಯಲು ಸರಕಾರ ಅನುಮತಿ ನೀಡಬೇಕು ಹಾಗೂ ಅನುದಾನವನ್ನು ನೀಡಬೇಕು. ಈ ಶಾಲೆ ಮತ್ತು/ಅಥವಾ ವರ್ಗಗಳಿಗೆ ಬೇಕಾಗಿರುವ ಕೊಂಕಣಿ ಪಠ್ಯಪುಸ್ತಕಗಳನ್ನು ರಚಿಸಲು ಶಿಕ್ಷಣತಜ್ಞರು, ಕೊಂಕಣಿ ಸಾಹಿತಿಗಳು, ಭಾಷಾವಿಜ್ಞಾನಿಗಳು ಸದಸ್ಯ ರಾಗಿರುವ ವಿಶೇಷ ಸಮಿತಿಗಳನ್ನು ಸರಕಾರ ರಚಿಸಬೇಕು. ಇವುಗಳಿಗೆ ಪೂರಕವಾಗಿ ಬೇಕಾಗಿರುವ ಶಬ್ದಕೋಶಗಳ ರಚನೆ, ವಿಶ್ವಕೋಶ ರಚನೆ, ಬೋಧನಾ ಸಾಮಗ್ರಿ ಗಳು ಇತ್ಯಾದಿಗಳ ಸಿದ್ಧತೆಯೂ ಆಗಬೇಕು.

ಕೊಂಕಣಿ ಹಲವಾರು ಉಪಭಾಷೆಗಳಿಂದ ಕೂಡಿದ ಭಾಷೆಯಾಗಿರುವುದ ರಿಂದ ಕರ್ನಾಟಕದ ಕೊಂಕಣಿಗೆ ಸೀಮಿತವಾಗಿ ಮೇಲಿನ ಸಾಹಿತ್ಯದ ರಚನೆಯಾಗು ವುದು ಒಳ್ಳೆಯದು. ಇಷ್ಟೇ ಅಲ್ಲದೆ ಕರ್ನಾಟಕದ ವಿಶ್ವವಿದ್ಯಾಲಯಗಳಲ್ಲಿ ಪ್ರತ್ಯೇಕ ವಾಗಿ ಮಂಗಳ ಗಂಗೋತ್ರಿ ಮತ್ತು ಕರ್ನಾಟಕ ವಿಶ್ವವಿದ್ಯಾಲಯಗಳಲ್ಲಿ ಪ್ರಾರಂ ಭದ ಹಂತದಲ್ಲಿ ಕೊಂಕಣಿ ಡಿಪ್ಲೊಮಾಗಳನ್ನು ತೆರೆಯುವುದು ಅತ್ಯಗತ್ಯ. ಆಗ ಆಯಾಯ ಪ್ರದೇಶಗಳಲ್ಲಿಯ ಕೊಂಕಣಿಯ ಬೆಳವಣಿಗೆ ಸುಲಭಸಾಧ್ಯವಾಗುತ್ತದೆ. ಕೊಂಕಣಿ ಅಭಿರುಚಿ ಬೆಳೆಯುತ್ತದೆ.

ಸಕ್ರಮವಾದ ಪಠ್ಯಪುಸ್ತಕಗಳು, ವೈಜ್ಞಾನಿಕವಾದ ನಿಘಂಟುಗಳು ಇತ್ಯಾದಿ ಗಳು ಉಂಟಾಗಬೇಕಾದರೆ ಪ್ರಾದೇಶಿಕ ಕೊಂಕಣಿ ಉಪಭಾಷೆಗಳ ಕ್ಷೇತ್ರಕಾರ್ಯ ನಡೆಯಬೇಕಾದುದು ಅನಿವಾರ್ಯ.

## ೨.೨. ಸಮೂಹ ಸಂಪರ್ಕ ಸಾಧನವಾಗಿ ಕೊಂಕಣಿ

ಕರ್ನಾಟಕದಲ್ಲಿ ಕೊಂಕಣಿಗರ ಸಂಖ್ಯೆ ಬಹಳ ಅಧಿಕವಾಗಿರುವುದರಿಂದ ಸಮೂಹ ಸಂಪರ್ಕ ಮಾಧ್ಯಮವಾಗಿ ಕೊಂಕಣಿ ಪಾತ್ರ ಬಹಳ ಹಿರಿದು. ಈಗಾಗಲೇ ಹಲವಾರು ಕೊಂಕಣಿ ವಾರಪತ್ರಿಕೆಗಳು, ಪಾಕ್ಷಿಕಗಳು, ಮಾಸಿಕಗಳು ಇವೆಯಾದರೂ ಕರ್ನಾಟಕದಲ್ಲಿ ಕೊಂಕಣಿ ದೈನಿಕದ ಕೊರತೆ ಇದೆ. ಇತರ ನಿಯತ ಕಾಲಿಕೆಗಳು ಆಯಾಯ ಧಾರ್ಮಿಕ ಗುಂಪುಗಳಿಗೆ ಸೀಮಿತವಾಗಿ ಇವೆಯೇ ಹೊರತು ಸಮಗ್ರವಾದ ಸಾಹಿತ್ಯಿಕವಾಗಿ 'ತರಂಗ'ದ ಮಟ್ಟದ ನಿಯತಕಾಲಿಕೆ ಕೊಂಕಣಿಗೆ ಬೇಕೇಬೇಕು. ಮಂಗಳೂರು ಮತ್ತು ಧಾರವಾಡದ ಅಕಾಶವಾಣಿಯಲ್ಲಿ ಕೊಂಕಣಿ ಕಾರ್ಯಕ್ರಮಗಳು ಪ್ರಸಾರಗೊಳ್ಳುತ್ತವೆ. ಆದರೆ ಅವುಗಳನ್ನು ಇನ್ನೂ ಹೆಚ್ಚು ಸಾಮಾನ್ಯ ಕೊಂಕಣಿ ರೂಪುಗೊಳ್ಳುವ ಹಾಗೆ ನಿಯೋಜಿಸಬೇಕು. ಕೊಂಕಣಿ ಸಾಹಿತ್ಯದ ಸಿರಿವಂತಿಕೆ ಅಲ್ಲಿ ಪ್ರದರ್ಶನಗೊಳ್ಳುವಂತೆ ಎಚ್ಚರ ವಹಿಸಬೇಕು. ಅದೇ ರೀತಿಯಲ್ಲಿ ಕರ್ನಾಟಕದ ದೂರದರ್ಶನದಲ್ಲಿಯಾದರೂ ಕೊಂಕಣಿಗೆ ಸಂಬಂಧಿಸಿದ ಕಲಾತ್ಮಕವಾದ ಕಾರ್ಯಕ್ರಮಗಳನ್ನು ಪ್ರದರ್ಶಿಸುವಂತಾಗಬೇಕು. ಇವುಗಳಿಗೋಸ್ಕರ ತರಬೇತಿಹೊಂದಿದ್ದ ವ್ಯಕ್ತಿಗಳು ಇರುವಂತಹ ಪ್ರತ್ಯೇಕ ವಿಭಾಗಗಳು ಅಲ್ಲಿರುವ

ವ್ಯವಸ್ಥೆಯಾಗಬೇಕು. ಸಮೂಹಸಂಪರ್ಕಮಾಧ್ಯಮಗಳ ಮೂಲಕ ಕೊಂಕಣಿಯ ಸಾಮಾನ್ಯೀಕರಣ/ಪ್ರಮಾಣೀಕರಣ ಅತ್ಯಂತ ಸಹಜವಾಗಿ ನಡೆಯುವುದರಲ್ಲಿ ಸಂದೇಹವಿಲ್ಲ.

### ೨.೩. ಕೊಂಕಣಿ ಸಾಹಿತ್ಯ ಭಾವೈಕ್ಯದ ಕೊಂಡಿಯಾಗಿ

ಕರ್ನಾಟಕದಲ್ಲಿ ಕನ್ನಡಿಗರೊಂದಿಗೆ ಹಲವಾರು ಕನ್ನಡೇತರ ಜನಾಂಗಗಳು ಕೂಡಿಕೊಂಡಿವೆ. ಇವರೆಲ್ಲರ ರೀತಿನೀತಿಗಳು, ಸಂಪ್ರದಾಯಗಳು, ಜನಪದ ಸಾಹಿತ್ಯ ಸ್ವರೂಪಗಳು, ವೈಯಕ್ತಿಕ ಆಸಕ್ತಿ ಒಲವುಗಳು ತಂತಮ್ಮ ಸಾಹಿತ್ಯದ ಮೂಲಕ ಅಭಿವೃದ್ಧಿಗೊಂಡಾಗ ಕರ್ನಾಟಕದ ಸಂಸ್ಕೃತಿ ಹಿರಿದಾಗುತ್ತದೆ, ಬೆಳೆಯುತ್ತದೆ. ವಿವಿಧ ಸಾಹಿತ್ಯಗಳು ಪುಷ್ಟಿಗೊಳ್ಳುತ್ತವೆ. ಅನೇಕತೆಯಲ್ಲಿ ಏಕತೆ ರೂಪುಗೊಳ್ಳುತ್ತದೆ. ಭಾಷೆಗಳ ಶಬ್ದ ಸಂಪತ್ತು ಬೆಳೆಯುತ್ತದೆ. ಹೊಸಹೊಸ ಭಾಷಾಶೈಲಿ ನಿರ್ಮಾಣಗೊಳ್ಳುತ್ತದೆ. ಇವುಗಳಿಂದಾಗಿ ಸಾಹಿತ್ಯದ ಮಟ್ಟ ಹೆಚ್ಚಾಗುತ್ತದೆ. ನಾವೂ ಬಾಳಬೇಕು. ಇತರರನ್ನೂ ಬಾಳಲಿಕ್ಕೆ ಬಿಡಬೇಕು ಎಂಬ ಮಂತ್ರವೇ ಭಾವೈಕ್ಯತೆಯ ಬೀಜಮಂತ್ರ. ಇದನ್ನು ಬಹುಸಂಖ್ಯಾತರು ಮರೆಯಬಾರದು. ಕೊಂಕಣಿಯಂತೆ ತುಳು, ತಮಿಳು, ಮರಾಠಿ, ತೆಲುಗು, ಮಲಯಾಳಂಗಳಿಂದಲೂ ಕನ್ನಡಮ್ಮ ಸಮೃದ್ಧವಾಗಿ ಬೆಳೆದಿದ್ದಾಳೆಂಬುದನ್ನು ಕನ್ನಡಮ್ಮನ ಮಕ್ಕಳು ಮರೆಯಬಾರದು. ಸಮೃದ್ಧವಾಗಿ ಬೆಳೆದು ದೊಡ್ಡ ಭಾಷೆ ಆದಮಾತ್ರಕ್ಕೆ ಸಣ್ಣ ಭಾಷೆಯಾಗಿ ಉಳಿದಿರುವ ಕೊಂಕಣಿಯನ್ನು ನುಂಗಿಹಾಕಬಾರದು. ಇದು ಮಾನವಧರ್ಮವಲ್ಲ. ಕರ್ನಾಟಕದ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಕನ್ನಡ ಸಾಹಿತ್ಯ ಪರಿಷತ್ತು ಮೊದಲಾದ ಸರಕಾರಿ, ಅರೆಸರಕಾರಿ ಸಂಸ್ಥೆಗಳು ಕೇವಲ ಕನ್ನಡಕ್ಕಾಗಿಯೇ ತಮ್ಮನ್ನು ಸೀಮಿತಗೊಳಿಸಬಾರದು. ಈ ಸಂಸ್ಥೆಗಳಿಗೆ ಸಿಗುವ ಅನುದಾನದಲ್ಲಿ ಕೊಂಕಣಿಗರು ಕೊಡುವ ತೆರಿಗೆಯ ಪಾಲು ಇದೆ ಎಂಬುದನ್ನು ಸರಕಾರವಾಗಲಿ ಈ ಸಂಸ್ಥೆಗಳಾಗಲಿ ಮರೆಯಕೂಡದು. ಆದುದರಿಂದ ಅಲ್ಪಸಂಖ್ಯಾತ ಭಾಷಾಭಿವೃದ್ಧಿ ಇಲಾಖೆ ಎಂಬ ಹೊಸ ಇಲಾಖೆಯನ್ನು ರಚಿಸಿ ಕೊಂಕಣಿ ಮೊದಲಾದ ಅಲ್ಪಸಂಖ್ಯಾತ ಭಾಷೆಗಳು ಹಾಗೂ ಅವುಗಳ ಸಾಹಿತ್ಯಗಳ ಅಭಿವೃದ್ಧಿಗೆ ಯೋಜನೆಗಳನ್ನು ಹಾಕ ಬೇಕಾದದ್ದು ಅನಿವಾರ್ಯ ಹಾಗೂ ಅತ್ಯಗತ್ಯ.

ಪ್ರಸ್ತುತ ಇಲಾಖೆಯ ಮುಖಾಂತರ ಪ್ರಾಚೀನ ಹಾಗೂ ಮಧ್ಯಕಾಲೀನ ಸಾಹಿತ್ಯ ಕೃತಿಗಳ ಭಾಷಾಂತರ, ಅನೇಕ ಲಿಪಿಗಳ ಸಾಹಿತ್ಯದ ಪರಸ್ಪರ ಲಿಪ್ಯಂತರ, ನಿಘಂಟು, ವ್ಯಾಕರಣ ಮೊದಲಾದ ಶಾಸ್ತ್ರೀಯ ಗ್ರಂಥಗಳ ಸಂಪಾದನೆ ಅಥವಾ ನಿರ್ಮಾಣ, ಸಾಹಿತಿಗಳ ಹಾಗೂ ಕೊಂಕಣಿ ಭಾಷಾವಿಜ್ಞಾನಿಗಳ ಕಾರ್ಯಾಗಾರ, ಕೊಂಕಣಿಯ ಪ್ರಾಮಾಣೀಕರಣ ಇತ್ಯಾದಿ ಕೆಲಸಗಳನ್ನು ಕಾರ್ಯಗತಗೊಳಿಸಬಹುದು.

## ೩.೦. ಸರಕಾರ ಮತ್ತು ಸಂಸ್ಥೆಗಳ ಪಾತ್ರ

ರಾಜ್ಯದಲ್ಲಿರುವ ಪ್ರಜೆಗಳ ವೈಯಕ್ತಿಕ ಹಾಗೂ ಸಾಮಾಜಿಕ ಸರ್ವತೋಮುಖ ಅಭಿವೃದ್ಧಿಗಾಗಿಯೇ ಸರಕಾರವಿರುತ್ತದೆ. ಭಾರತ ಸರಕಾರದ ಸಾಹಿತ್ಯ ಅಕಾಡೆಮಿ ಕೊಂಕಣಿಯನ್ನು ಸಾಹಿತ್ಯಿಕ ಭಾಷೆ ಎಂದು ಪರಿಗಣಿಸಿದುದರಿಂದ ಅದರ ಭಾಷಿಕ, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಅಭಿವೃದ್ಧಿಗೆ ಬೇಕಾದಷ್ಟು ಧನ ಸಹಾಯ ನೀಡುವುದು ಸರಕಾರಗಳ ಕರ್ತವ್ಯ. ಕರ್ನಾಟಕದಲ್ಲಿಯೇ ಕೊಂಕಣಿಗರ ಸಂಖ್ಯೆ ೨೫ ಲಕ್ಷಕ್ಕೂ ಮೀರಿರುವುದರಿಂದ ಕರ್ನಾಟಕದ ರಾಜ್ಯ ಸರಕಾರ ಈ ಭಾಷೆಯ ಬೆಳವಣಿಗೆಗೆ ಸಾಕಷ್ಟು ಧನಸಹಾಯ ಇತ್ಯಾದಿಗಳನ್ನು ನೀಡಿ ಪ್ರೋತ್ಸಾಹಿಸುವುದು ಅದರ ಆದ್ಯಕರ್ತವ್ಯಗಳಲ್ಲಿ ಒಂದು. ಕರಾವಳಿ ಕರ್ನಾಟಕದಲ್ಲಿ ಎರಡು ವಿಶ್ವವಿದ್ಯಾಲಯಗಳಿವೆ. ಈ ವಿಶ್ವವಿದ್ಯಾಲಯಗಳಲ್ಲಿ ಕನ್ನಡ ಹಾಗೂ ಇತರ ಭಾಷೆಯ ವಿಭಾಗಗಳಿವೆ. ಅಂತೆಯೇ ಕೊಂಕಣಿ ಭಾಷೆಯ ಬೋಧನೆ ಹಾಗೂ ಸಂಶೋಧನೆಗಾಗಿ ಅವುಗಳಲ್ಲಿಯಾದರೂ ಪ್ರತ್ಯೇಕ ವಿಭಾಗಗಳನ್ನು ಅದು ತೆರೆಯಬೇಕು. ಈಗಾಗಲೇ ಹೇಳಿದಂತೆ ಅಲ್ಪಸಂಖ್ಯಾತ ಭಾಷಾಭಿವೃದ್ಧಿ ಇಲಾಖೆಯನ್ನೂ ಅದು ಆರಂಭಿಸುವುದು ಒಳ್ಳೆಯದು. ಅಂತೆಯೇ ಕರ್ನಾಟಕ ಸರಕಾರದ ಅಧೀನಕ್ಕೆ ಒಳಗಾದ ಅಥವಾ ಅದರ ಧನಸಹಾಯ ಪಡೆಯುವ ಅಕಾಡೆಮಿ, ಇಲಾಖೆ, ಸಂಸ್ಥೆಗಳು ಸೂಕ್ತವಾದ ರೀತಿಯಲ್ಲಿ (ಉದಾ: ಕರ್ನಾಟಕ ಸಂಸ್ಕೃತಿ ಇಲಾಖೆ, ಕರ್ನಾಟಕ ಸಾಹಿತ್ಯ ಪರಿಷತ್ತು ಇತ್ಯಾದಿಯಾಗಿ) ಪುನರ್ನಾಮಕರಣವಾಗಿ ಅವುಗಳ ಮೂಲಕ ಅಲ್ಪಸಂಖ್ಯಾತರ ಭಾಷೆ, ಸಂಸ್ಕೃತಿ, ಸಾಹಿತ್ಯಗಳ ಸೇವೆಯೂ ನಡೆಯುವಂತಾಗಬೇಕು.

ಸರಕಾರೀ ಸಂಸ್ಥೆಗಳಲ್ಲದೆ ಸಾರ್ವಜನಿಕ ಸಂಸ್ಥೆಗಳಾದ ಕೊಂಕಣಿ ಸಾಹಿತ್ಯ ಪರಿಷತ್, ಕೊಂಕಣಿ ಅಭ್ಯಾಸ ಕೇಂದ್ರ, ಕೊಂಕಣಿ ಭಾಷಾ ಮಂಡಳಿ, ಕೊಂಕಣಿ ಭಾಷಾ ಪ್ರಚಾರ ಸಭಾ, ಸ್ಟೀವನ್‌ಸನ್ ಕೊಂಕ್ಣಿ ಕೇಂದ್ರ, ಸಾಂ ಲುವಿಸ್ ಕೊಲೇಜಿನ ಕೊಂಕ್ಣಿ ಕೇಂದ್ರ, ಮಣಿಪಾಲ್ ಅಕಾಡೆಮಿ ಕೊಂಕ್ಣಿ ಕೇಂದ್ರ ಮೊದಲಾದ ಸಂಸ್ಥೆಗಳು ಕೊಂಕಣಿಗರನ್ನು ತಮ್ಮ ಭಾಷಾಭಿಮಾನದ ಬಗೆಗೆ ಜಾಗೃತಗೊಳಿಸಬೇಕು. ಅಂತೆಯೇ ಸರಕಾರ ಮತ್ತು ಸರಕಾರಿ ಸಂಸ್ಥೆಗಳು ಕೊಂಕಣಿಯ ಭಾಷಾಭಿವೃದ್ಧಿಯತ್ತ ಜವಾಬ್ದಾರಿ ತೆಗೆದುಕೊಳ್ಳುವಂತೆ ಎಚ್ಚರಿಸಬೇಕು.

## ೪.೦. ಸಮಾರೋಪ

ಕೊಂಕಣಿ ಕರ್ನಾಟಕದಲ್ಲಿ ಅಲ್ಪಸಂಖ್ಯಾತ ಭಾಷೆ. ಅದು ಕನ್ನಡಕ್ಕೆ ರಾಜ್ಯ ಭಾಷೆ ಎಂದು ಮನ್ನಣೆ ಕೊಡುತ್ತದೆ. ಅದೇ ಹೊತ್ತಿನಲ್ಲಿ ಆ ಭಾಷೆಯಿಂದ ತನ್ನ ಬೆಳವಣಿಗೆಯೂ ಆಗಬೇಕು ಎಂದು ಬಯಸುತ್ತದೆ.

ಕೊಂಕಣಿಯ ಅಭಿವೃದ್ಧಿಯಾಗಬೇಕಾದರೆ ಕೊಂಕಣಿ ಪ್ರಾಥಮಿಕ ಶಿಕ್ಷಣದ ಮಾಧ್ಯಮವಾಗಿ, ಕೊಂಕಣಿ ಸಮಾಜದಲ್ಲಿ ಸಮೂಹ ಸಂಪರ್ಕ ಮಾಧ್ಯಮವಾಗಿ, ಇತರ ಭಾಷೆಗಳೊಂದಿಗೆ ಸಾಹಿತ್ಯಿಕ ಭಾಷೆಯಾಗಿ ಬೆಳೆಯುವಂತೆ ಯೋಜನೆಗಳನ್ನು ಹಾಕಿಕೊಳ್ಳಬೇಕು.

ಈ ಯೋಜನೆಗಳಿಗೆ ಸರಕಾರದ ಧನ ಸಹಾಯ ಅತ್ಯಗತ್ಯ. ಸ್ಥಳೀಯ ವಿಶ್ವವಿದ್ಯಾಲಯಗಳಲ್ಲಿ ಕೊಂಕಣಿ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ಅಧ್ಯಯನ, ಅಧ್ಯಾಪನ, ಸಂಶೋಧನೆಗಳಿಗೆ ಅವಕಾಶಗಳಿರಬೇಕು. ಕರ್ನಾಟಕ ಸರಕಾರದ ಇಲಾಖೆಗಳು, ಅಕಾಡೆಮಿಗಳು, ಪರಿಷತ್ತುಗಳು ಕೇವಲ ಕನ್ನಡಕ್ಕೆ ಅಷ್ಟೇ ತಮ್ಮನ್ನು ಸೀಮಿತಗೊಳಿಸದೆ ಕೊಂಕಣಿ ಮೊದಲಾದ ಸಣ್ಣ ಭಾಷೆಗಳನ್ನು ಎತ್ತಿ ಹಿಡಿದು ನಡೆ ಯಿಸಿಕೊಂಡು ಹೋಗಬೇಕು. ಸಾರ್ವಜನಿಕ, ಸಾಮಾಜಿಕ ಸಂಸ್ಥೆಗಳು, ಕೊಂಕಣಿ ಸಾಹಿತಿ–ಅಭಿಮಾನಿಗಳು ಹಾಗೂ ತೆರಿಗೆ ನೀಡುವ ಕೊಂಕಣಿಗರೆಲ್ಲರೂ ಈ ದೆಸೆ ಯಲ್ಲಿ ಜನರನ್ನು ಜಾಗೃತಗೊಳಿಸುವ, ಸರಕಾರ ಹಾಗೂ ಸಂಸ್ಥೆಗಳನ್ನು ಎಚ್ಚರಿಸುವ ಕಾಯಕದಲ್ಲಿ ನಿರತರಾಗಬೇಕು. ಆಗ ಮಾತ್ರ ಕೊಂಕಣಿ ಮಾತೆಯ ಮೊಲೆಹಾಲ ಸವಿ ನಮಗೆ ತಿಳಿಯಬಲ್ಲುದು. ಇಲ್ಲದಿದ್ದಲ್ಲಿ ಆಕೆಯ ಮೊಲೆ ಬತ್ತಿ ಹೋಗಿ ಆಕೆ ಬರಡಾಗಬಹುದು. ಕ್ಷೀಣಿಸಬಹುದು. ಹಾಗಾಗದಂತೆ ನಾವು ನೋಡಿಕೊಳ್ಳಬೇಕು.

## ೫.೦. ಆಕರ ಸೂಚಿ

೧. ಕರ್ನಾಟಕ ಜಿಜ್ವಿತ್ ಪ್ರಾಂತಾಚಾ ಶತಾಬ್ದೆಚಿಂ ಪ್ರಕಟನಾಂ (೧೯೭೮) (ಡಿಸೆಂಬರ್ ೯೧) ಮಂಗ್ಳೂರ್ ಮಿಸಾಂವಾಚಿ ಪ್ರಥಮ ವೀರ್ : ಜೆ.ಸ. ಅಂಜೆಲೊ ಫ್ರಾನ್ಸಿಸ್ ಸಾವೆರ್ ಮಾಫೇಯಿೀ (೧೮೪೪-೧೮೯೯) (ಕೊಂಕಣಿಯಲ್ಲಿ) ಮಂಗ್ಳೂರ್ : ಸಾಂ ಜುಜೆಚಿ ಸೆಮಿನರಿ

೨. ಮಾಡ್ತ ವಿಲ್ಯಂ : (೧೯೭೨) ಕೊಂಕಣಿ ಭಾಷೆ ಮತ್ತು ಸಾಹಿತ್ಯ. ಕನ್ನಡ ವಿಶ್ವ ಕೋಶ. ಸಂ. ೫ ಮೈಸೂರು: ಮೈಸೂರು ವಿಶ್ವವಿದ್ಯಾಲಯ.

೩. ವಾಲ್ಡಾರ, ಮಾರ್ಕ್ (ಸಂ) : ೧೯೭೪. ಅಮರ್ ಕೊಂಕ್ಣಿ (ಕೊಂಕಣಿಯಲ್ಲಿ) ಮಂಗ್ಳೂರ್ ರಾಕ್ಣೊ ಪ್ರಕಾಶನ.

4. ALMEIDA (S.J.) Mathew : 1989 A Description of Konkani, Goa; Thomas Stephenson, Konkani Kendra

5. GULWADI, Santhoshkumar (Ed.) Mogaren, Manipal; 1989 The 17th Session of All India Konkani Sahitya Parishad

6. KAMATH, M.V. "The Future of Konkani" in Santoshkumar GULWADI 1989 (Ed.) Mogaren, Manipal; the 17th Session of All India Konkani Sahitya Parishad.

7. KATRE, S.M. : 1966 The Formation of Konkani. Poona; Deccan College.

8. MADTHA William : 1971 "Some Comments on the Language Situation of Goa in the 16th and 17th centuries", H.S. BILIGIRI (Ed.), Papers and Talks, Mysore: Central Institute of Indian Languages.
9. MADTHA William :1976 The Christian Konkani of South Kanara: A Linguistic Analysis, Dharwad: Prasaranga Karnatak University.
10. MADTHA William : 1980-81 "Konkani Dialects in the Dravidian Area", in the Karnatak University Journal: Humanities, Vol. XXIV & XXV, Dharwad: Karnatak University
11. PAI (S.J.) C.C.A. :1981 Konkani Riddles: Anthropological Analysis of the Konkani Riddles of Mangalore Catholics, Bangalore: Loyola Mandir.
12. PEREIRA Jose : 1973 Literary Konkany (A Brief History), Dharwar: Konkani Sahitya Prakashana.
13. PINTO Henry J. (Souvenir Committee President)
1984 XV All India Konkani Sahitya Parishad Souvenir, Bangalore
14. SHANBHAG, D.N. (Ed.-in-Chief) : 1970 Essays on Konkani Languages and Literature (Professor Armando Menezes Felicitation Volume), Dharwar: Konkani Sahitya Prakashan.

---

೧೯೯೧ರ ಅಕ್ಟೋಬರ್ ೭ರಂದು ತುಳು ದಿನಾಚರಣೆಯ ಅಂಗವಾಗಿ ಉಡುಪಿಯ ಮಹಾತ್ಮಾಗಾಂಧಿ ಕಾಲೇಜಿನ ಸ್ನಾತಕೋತ್ತರ ಸಂಶೋಧನ ಕೇಂದ್ರ - ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ - ದಲ್ಲಿ ನಡೆದ ಅಲ್ಪಸಂಖ್ಯಾತ ಭಾಷಾಭಿವೃದ್ಧಿ ವಿಚಾರ ಸಂಕಿರಣದಲ್ಲಿ ಮಾಡಿದ ದಿಕ್ಸೂಚಿ ಭಾಷಣ.

---

# ಕೊಂಕಣಿಯ ಭವಿಷ್ಯ

- ಎಂ. ವಿ. ಕಾಮತ್
ಭಾಷಾಂತರ : ಮುರಳೀಧರ ಉಪಾಧ್ಯ, ಹಿರಿಯಡಕ

---

ಕೊಂಕಣಿಗೆ ಭವಿಷ್ಯವಿದೆಯೇ? ಅದೊಂದು ಅಧಿಕಪ್ರಸಂಗದ ಪ್ರಶ್ನೆ ಎಂದು ನನಗನ್ನಿಸುತ್ತದೆ. ಕಂಡಿತವಾಗಿಯೂ ಅದಕ್ಕೆ ಭವಿಷ್ಯವಿದೆ, ಉಜ್ವಲ ಭವಿಷ್ಯವಿದೆ. ಆದರೆ ಕೊಂಕಣಿಯ ಭವಿಷ್ಯಕ್ಕೂ ರಾಜಕೀಯ, ಆರ್ಥಿಕ, ಸಾಮಾಜಿಕ ಸಂಗತಿಗಳಿಗೂ ಸಂಬಂಧವಿದೆ. ಹಲವು ಶತಮಾನಗಳಿಂದ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿರುವ ಈ ಭಾಷೆ ಬೆಳೆಯಬಲ್ಲುದು. ಎಲ್ಲ ಪ್ರತಿಕೂಲಗಳನ್ನು ಮೀರಿ ಕೊಂಕಣಿ ಉಳಿದಿರುವುದು ಸಣ್ಣ ಸಂಗತಿಯಲ್ಲ. ಗೋವಾದ ಕ್ರಿಶ್ಚಿಯನ್ನರು ಕೊಂಕಣಿ ಮಾತನಾಡುವುದನ್ನು ಪೋರ್ತುಗೀಸರು ನಿಷೇಧಿಸಿದ್ದರು. ಪೋರ್ತುಗೀಸರು ಕೊಳ್ಳೆಹೊಡೆದರೂ, ಕೊಂಕಣಿ ಜೀವಂತವಾಗಿದೆ. ಕೊಂಕಣಿ ಮರಾಠಿಯ ಉಪಭಾಷೆ ಎನ್ನುವ ಸುಳ್ಳು ಸಿದ್ಧಾಂತವನ್ನು ಪ್ರಚಾರ ಮಾಡುವ ಮರಾಠಿ ಚಳವಳಿಕಾರರ ಆಕ್ರಮಣವನ್ನು ಕೊಂಕಣಿ ಎದುರಿಸಿದೆ. ಕೊಂಕಣಿ ಒಂದು ಸ್ವತಂತ್ರ ಭಾಷೆ. ಅದನ್ನು ಗುರುತಿಸಬೇಕು, ಒಪ್ಪಿಕೊಳ್ಳಬೇಕು. ಈ ಕುರಿತು ಯಾವುದೇ ಸಂಶಯವಿರುವುದು ಸಾಧ್ಯವಿಲ್ಲ. ಕೊಂಕಣಿ ಹಿಂದುಳಿದ ಭಾಷೆಯಾಗಿರಬಹುದು, ಆದರೆ ಅದೊಂದು ವಿಶಿಷ್ಟವಾದ ಭಾಷೆ. ಏಂಜಲೀಸ್ ಫ್ರಾನ್ಸಿಸ್ ಕ್ಸೇವಿಯರ್ ಮಾಫಿ (Angelees Francis Xavier Maffei) ಒಂದು ನೂರು ವರ್ಷಗಳ ಮೊದಲು ೧೮೮೨ರಲ್ಲಿ ಹೇಳಿದಂತೆ, 'ಕೊಂಕಣಿ ಭಾಷೆಯನ್ನು ಬಾಲಬೋಧೆ ಅಥವಾ ನಾಗರೀಲಿಪಿಯಲ್ಲಿ ಬರೆಯಲಾಗುತ್ತಿತ್ತು.' ರಾಮಚಂದ್ರ ಭಿಕಾಜಿ ಗುಂಜೀಕರ್ ಅವರ ಅಭಿಪ್ರಾಯದಂತೆ ಮರಾಠಿ ಕೊಂಕಣಿ ಎರಡೂ ಭಾಷೆಗಳು ಸರಸ್ವತಿ ಬಾಲಭಾಷೆಯಿಂದ ಹುಟ್ಟಿದವುಗಳು. ಕೊಂಕಣಿ ಒಂದು ಸ್ವತಂತ್ರವಾದ ಭಾಷೆ ಎಂದು ಭಾರತ ಸರಕಾರ ಒಪ್ಪಿಕೊಂಡಿರುವುದರಿಂದ ಆ ಕುರಿತ ವಿವಾದ ಮುಕ್ತಾಯಗೊಂಡಿದೆ. ಈಗ ಪ್ರಸ್ತುತವಾಗಿರುವುದು ಕೊಂಕಣಿಯ ಭವಿಷ್ಯದ ಪ್ರಶ್ನೆ.

ಸಾವಂತವಾಡಿಯಿಂದ ದಕ್ಷಿಣ ಕನ್ನಡದ ವರೆಗೂ ಕೊಂಕಣಿ ಭಾಷೆ ಚಾಲ್ತಿಯಲ್ಲಿದೆ. ಕೇರಳದ ಕೊಲ್ಲಿ–ಕೊಚ್ಚಿಯ ವರೆಗೂ ಕೊಂಕಣಿ ಮಾತನಾಡುವ ಸಾರಸ್ವತ, ಗೌಡ ಸಾರಸ್ವತ ಬ್ರಾಹ್ಮಣರಿದ್ದಾರೆ. ಆದರೆ ಕೊಂಕಣಿ ಮಾತನಾಡುವ ಜನರಿಗೆ ರಾಜಕೀಯ ಅಧಿಕಾರವಿರುವುದು ಗೋವಾದಲ್ಲಿ ಮಾತ್ರ. ಗೋವಾದ ಕೊಂಕಣಿಗರಲ್ಲಿ ಎರಡು ಗುಂಪುಗಳಿರುವುದು ದುರದೃಷ್ಟದ ಸಂಗತಿ. ಕೆಲವರು

ಹಿಂದೂಗಳು, ಕೊಂಕಣಿ ಇನ್ನೂ ಬೆಳೆಯಲಿಕ್ಕಿದೆಯಾದ್ದರಿಂದ ಮರಾಠಿಗೆ ಸಮಾನ ಸ್ಥಾನಮಾನ ಕೊಡಬೇಕೆಂದು ವಾದಿಸುತ್ತಾರೆ.

ಕೊಂಕಣಿ ಬೆಳೆದ ಭಾಷೆಯೇ ಎಂಬುದರ ಬಗ್ಗೆ ಭಿನ್ನಾಭಿಪ್ರಾಯಗಳಿರಬಹುದು. 'ಬೆಳೆದ ಭಾಷೆ' ಎಂಬುದರ ಅರ್ಥವೇನು? ಕೊಂಕಣಿಯಲ್ಲಿ ಸಾಕಷ್ಟು ಜೀವಂತ ಸಾಹಿತ್ಯವಿಲ್ಲ ನಿಜ. ಕೊಂಕಣಿಯನ್ನು ಈಗ ದೇವನಾಗರಿ, ರೋಮನ್, ಕನ್ನಡ, ಮಲಯಾಳಮ್ ಲಿಪಿಯಲ್ಲಿ ಬರೆಯಲಾಗುತ್ತಿದೆ. ಕೊಂಕಣಿ ಉಚ್ಚಾರದಲ್ಲಿ ಹಲವು ಪ್ರಭೇದಗಳಿವೆ. ಸಾವಂತವಾಡಿ, ಗೋವಾ, ರತ್ನಗಿರಿ, ಉತ್ತರ ಕನ್ನಡ ಒಂದೊಂದು ಕಡೆಯ ಉಚ್ಚಾರವೂ ಇನ್ನೊಂದಕ್ಕಿಂತ ಭಿನ್ನವಾಗಿದೆ. ಪರವಾ ಇಲ್ಲ. ರೋಮನ್ನು ಒಂದೇ ದಿನದಲ್ಲಿ ಕಟ್ಟಲಿಲ್ಲ, ಒಂದು ದಶಕದೊಳಗೆ ಏಕೀಕೃತ ಕೊಂಕಣಿಯನ್ನು ಸೃಷ್ಟಿಸುವುದು ಸಾಧ್ಯವಿಲ್ಲ. ಕೊಂಕಣಿಯ ಭವಿಷ್ಯದ ಕುರಿತು ನಾವು ಆಶಾವಾದಿಗಳಾಗಿರುವಂತೆ ಮಾಡುವ ಕೆಲವು ರಚನಾತ್ಮಕ ಅಂಶಗಳಿವೆ –

೧. ಕೊಂಕಣಿ, ಮರಾಠಿಯ ಉಪಭಾಷೆಯಲ್ಲ, ಪ್ರತ್ಯೇಕ ಭಾಷೆ ಎಂಬುದನ್ನು ಈಗ ಒಪ್ಪಿಕೊಳ್ಳಲಾಗಿದೆ.

೨. ಕೊಂಕಣಿ, ಗೋವಾ ರಾಜ್ಯದ ಅಧಿಕೃತ ಭಾಷೆಯಾಗಿದೆ.

೩. ಕೊಂಕಣಿ ಭಾಷೆಯ ಕಾರ್ಯಕ್ರಮಗಳು ಆಕಾಶವಾಣಿಯಿಂದ ಪ್ರಸಾರ ವಾಗುತ್ತಿವೆ.

೪. ಕೊಂಕಣಿ ಪುಸ್ತಕಗಳು ಪ್ರಕಟವಾಗುತ್ತಿವೆ, ನಾಟಕಗಳು ಪ್ರದರ್ಶನಗೊಳ್ಳುತ್ತಿವೆ.

೫. ಗೋವಾದಿಂದ ಕೊಂಕಣಿ ದಿನಪತ್ರಿಕೆ ಪ್ರಕಟವಾಗುತ್ತಿದೆ. 'ರಾಕ್ಣೊ'ದಂಥ ವಾರಪತ್ರಿಕೆಗಳು ಪ್ರಕಟವಾಗುತ್ತಿವೆ. ಕೊಂಕಣಿಯಲ್ಲಿ ಸೃಜನಶೀಲ ಕೃಷಿ ನಡೆ ಯುತ್ತಿದೆ; ಅದು ಅಲಕ್ಷ್ಯಕ್ಕೆ ಗುರಿಯಾಗಿಲ್ಲ, ಅದರಲ್ಲಿ ಜೀವವಿದೆ.

ಕೊಂಕಣಿಯನ್ನು ಜನಪ್ರಿಯಗೊಳಿಸಲು ವ್ಯಾಪಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು ಮುಂದಿನ ಹೆಜ್ಜೆಯಾಗಬೇಕು. ಇದು ಸುಲಭದ ಕೆಲಸವೇನೂ ಅಲ್ಲ. ಆದರೆ ನಾವು ಹತಾಶರಾಗಬೇಕಿಲ್ಲ. ಇದು ಸುಲಭದ ಕೆಲಸವಲ್ಲ ಎಂಬುದನ್ನು ನಾವು ಗುರುತಿಸುವುದು ಮುಖ್ಯ. ಕೊಂಕಣಿಯ ಕೆಲಸ ಒಂದು ಸಣ್ಣ ಗೀರಿನಿಂದ ಆರಂಭವಾಗಬೇಕು. ಅದು ಬೆಳೆದ ಭಾಷೆಗಳೊಂದಿಗೆ ನಿರಂತರ ಸ್ಪರ್ಧಿಸಬೇಕಾಗಿದೆ. ಕೊಂಕಣಿ ತಾಯ್ನುಡಿಯಾಗಿದ್ದು ಅನ್ಯಭಾಷಾಪ್ರದೇಶದಲ್ಲಿ ವಾಸಿಸುತ್ತಿರುವವರಿಗೆ ಗುರುತರ ಕಾರ್ಯಭಾರಗಳಿವೆ. ಇನ್ನೊಂದು ದೃಷ್ಟಿಯಿಂದ ಇದನ್ನು ನೋಡೋಣ–ಕೊಂಕಣಿ ಮಾತನಾಡುವವರು, ಹಿಂದುಗಳು ಮತ್ತು ಕ್ರಿಶ್ಚಿಯನ್ನರು–ತಮ್ಮ ಮನೆಗಳಲ್ಲಿ ಕೊಂಕಣಿ ಮಾತನಾಡುತ್ತ ಕೊಂಕಣಿಯನ್ನು ಉಳಿಸಿದ್ದಾರೆ, ಬೆಳೆಸಿದ್ದಾರೆ. ಆದ್ದರಿಂದ ನಾವು ಹತಾಶರಾಗಬೇಕೆಂದಿಲ್ಲ.

ಕೊಂಕಣಿಗೆ ಪಂಥಾಹ್ವಾನ ನೀಡುತ್ತಿರುವುದು ಮರಾಠಿ, ಕನ್ನಡ, ಮಲಯಾಳಮ್‌ಗಳಲ್ಲ; ಇಂಗ್ಲಿಷ್, ಕೊಂಕಣಿಗೆ ಪಂಥಾಹ್ವಾನ ನೀಡುತ್ತಿದೆ. ಮರಾಠಿ, ಹಿಂದೀ, ಬಂಗಾಳಿಗಳಂಥ ಬೆಳೆದ ಭಾಷೆಗಳಿಗೂ ಇಂಗ್ಲಿಷ್ ಪಂಥಾಹ್ವಾನ ನೀಡುತ್ತಿದೆ. ಕಾರಣ ಸ್ಪಷ್ಟವಾಗಿದೆ. ಇಂಗ್ಲಿಷ್ ಬೃಹದಾಕಾರವಾಗಿ ಬೆಳೆದು ಅಂತಾ ರಾಷ್ಟ್ರೀಯ ಭಾಷೆಯಾಗಿದೆ, ಅದ್ಭುತ ಶಬ್ದಭಂಡಾರವನ್ನು ಪಡೆದಿದೆ. ಅದು ವ್ಯಾಪಾರ ವಾಣಿಜ್ಯಗಳ ಭಾಷೆಯಾಗಿದೆ. ಅದರ ಎದುರು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವುದು ಭಾರತದ ಬೆಳೆದ ಭಾಷೆಗಳಿಗೂ ಕಷ್ಟವಾಗುತ್ತದೆ. ಮಧ್ಯಮ ವರ್ಗದವರು ತಮ್ಮ ಮಕ್ಕಳನ್ನು ಇಂಗ್ಲಿಷ್ ಮಾಧ್ಯಮ ಶಾಲೆಗಳಿಗೆ ಕಳುಹಿಸುತ್ತಿ ದ್ದಾರೆ. ಹೀಗಿರುವಾಗ, ಕೊಂಕಣಿಯಂಥ ವರ್ಧಮಾನ ಭಾಷೆ ತಾಯ್ನುಡಿ ಯಾಗಿರುವ ಮಕ್ಕಳ ಗತಿಯೇನು?

ನಿಜವಾದ ಅಪಾಯ ಇದು. ಇದನ್ನು ಎದುರಿಸಬೇಕು. ಒಂದು ಏಕರೀತಿಯ ಶಬ್ದಭಂಡಾರ, ಸಾಹಿತ್ಯ ಕೃತಿಗಳಿಗೆ ವಿಸ್ತೃತ ಮಾರುಕಟ್ಟೆ ಮತ್ತೊಂದು ವಿಶೇಷ ಆಕರ್ಷಣೆ ಇಲ್ಲದೆ ಕೊಂಕಣಿ ಉಳಿಯಲಾರದು ಎಂಬ ವಾದವಿದೆ. ಕಾಲಪುರುಷನೊಡನೆ ಹೋರಾಟ ನಡೆಯಲಿಕ್ಕಿದೆ. ಆದರೆ ಈ ವಾಸ್ತವಗಳನ್ನು ಪರಿಗಣಿಸಿರಿ. ಇಂಗ್ಲಿಷ್ ಭಾಷೆಯಲ್ಲೂ ಹತ್ತಾರು ಉಚ್ಚಾರದ ಪ್ರಭೇದಗಳಿವೆ. ವೆಸ್ಟ್ ಇಂಡೀಸ್, ನ್ಯೂಯೋರ್ಕ್ ಮತ್ತು ಬೋಸ್ಟನ್ನಿನವರು ಬೇರೆ ಬೇರೆ ರೀತಿಯ ಇಂಗ್ಲಿಷ್ ಮಾತನಾಡುತ್ತಾರೆ. ಈ ಎಲ್ಲ ಇಂಗ್ಲಿಷ್‌ಗಳು ಆಕ್ಸ್‌ಫರ್ಡ್ ಮತ್ತು ಕೇಂಬ್ರಿಡ್ಜ್ ಇಂಗ್ಲಿಷ್‌ಗಿಂತ ಬೇರೆಯಾಗಿದೆ. ಆದ್ದರಿಂದ ಉಚ್ಚಾರ ವ್ಯತ್ಯಾಸ ಕೊಂಕಣಿಯ ಪ್ರಸಾರ ಮತ್ತು ಕ್ರೋಡೀಕರಣಕ್ಕೆ ಅಡ್ಡಿಯಾಗುವುದಿಲ್ಲ.

ಶಬ್ದಭಂಡಾರದ ವಿಷಯವನ್ನು ನೋಡೋಣ. ಅದು ಬೆಳೆಯಲು ಸಾಕಷ್ಟು ಸಮಯಬೇಕು. ತಮ್ಮ ಉಚ್ಚಾರಗಳಲ್ಲಿ ವ್ಯತ್ಯಾಸವಿದ್ದರೂ ಬೇರೆ ಬೇರೆ ಪ್ರದೇಶದ ಕೊಂಕಣಿಗರು ಕೊಂಕಣಿಯಲ್ಲಿ ಮಾತನಾಡಲು ನಾಚುತ್ತಿಲ್ಲ. ತಮ್ಮ ಕೊಂಕಣಿ ಇನ್ನೊಂದು ಕೊಂಕಣಿ ಪ್ರಭೇದದವರಿಗೆ ಅರ್ಥವಾಗದೆಂದು ನಾಚುವ, ಕೀಳರಿಮೆ ಯಿರುವ ಕೊಂಕಣಿಗರೂ ಇದ್ದಾರೆ. ಈ ಭಯ ಸಹಜವೆ. ಆದರೆ ನಾವು ಹಠ ಬಿಡದೆ ಮುಂದುವರಿಯಬೇಕು.

ಕೊಂಕಣಿಯ ಶಬ್ದಭಂಡಾರ ಮತ್ತು ಲಿಪಿಯಲ್ಲಿ ಏಕರೂಪತೆ ತರುವುದು ಹೇಗೆ? ವಿವಿಧ ಕೊಂಕಣಿ ಉಪಭಾಷೆಗಳನ್ನಾಡುವ ಜನರು ಹೆಚ್ಚು ಹೆಚ್ಚು ಬರೆಯಬೇಕು. ಮನೆಯೊಳಗೆ ಕೊಂಕಣಿ ಮಾತನಾಡುವುದು ಹೆಚ್ಚಾಗಬೇಕು. ಮಧ್ಯಮವರ್ಗದವರು ಸಣ್ಣಪುಟ್ಟ ಚಿತಾವಣೆಯಿಂದ ಇಂಗ್ಲಿಷ್‌ನತ್ತ ಧಾವಿಸುವುದು ದುರಂತದ ಸಂಗತಿ. ಇದನ್ನು ತಡೆಯಲು ಯತ್ನಿಸಬೇಕು. ಒಗ್ಗೂಡಿಸುವ ಶಕ್ತಿಯಾದ ಕೊಂಕಣಿ ರಂಗಭೂಮಿಗೆ ವಿಶೇಷ ಪ್ರೋತ್ಸಾಹ ನೀಡಬೇಕು. ವಿವಿಧ ಕೊಂಕಣಿ ಉಪಭಾಷೆಗಳನ್ನು ಮಾತನಾಡುವ ಪಾತ್ರಗಳಿರುವ ಕೊಂಕಣಿ ನಾಟಕಗಳ

ರಚನೆಗೆ ಪ್ರಚೋದನೆ ನೀಡಬೇಕು. ಜಾರ್ಜ್ ಬರ್ನಾರ್ಡ್ ಷಾನ 'ಪಿಗ್‌ಮೇಲಿಯನ್' ಇಂಗ್ಲಿಷ್‌ನಲ್ಲಿ ಈ ಕೆಲಸ ಮಾಡಿತೆಂಬುದನ್ನು ನಾವು ಮರೆಯಬಾರದು.

ಕೊಂಕಣಿ ಮಾತನಾಡುವ ಕುಟುಂಬಗಳೊಳಗೆ ವಿವಾಹ ಸಂಬಂಧಗಳು ಹೆಚ್ಚಬೇಕು. ತಂದೆ ತಾಯಂದಿರು ತಾವು ವಾಸಿಸುವ ಸ್ಥಳದಿಂದ ನಲುವತ್ತು ಮೈಲು ದೂರದೊಳಗಿರುವ ಕುಟುಂಬಗಳೊಂದಿಗೆ ತಮ್ಮ ಮಕ್ಕಳಿಗೆ ವಿವಾಹ ಸಂಬಂಧ ಮಾಡಿಸುವ ಕಾಲವೊಂದಿತ್ತು. ಈಗ ಕಾಲ ಬದಲಾಗಿದೆ. ಪ್ರಯಾಣ ಸುಲಭವಾಗಿದೆ, ವೇಗ ಹೆಚ್ಚಿದೆ. ಕೊಂಕಣಿ ಪ್ರದೇಶದಿಂದ ಬಂದ ಸಾವಿರಾರು ಕುಟುಂಬಗಳು ಮುಂಬಯಿಯಲ್ಲಿವೆ. ಅವರೊಳಗೆ ಪರಸ್ಪರ ಪರಿಚಯ, ಒಡನಾಟವಿಲ್ಲ. ಕೊಂಕಣಿ ಮಾತನಾಡುವವರ ಸಂಘಗಳನ್ನು ಆರಂಭಿಸಬೇಕು. ನಮಗೆ ಆಸಕ್ತಿ ಯಿದ್ದರೆ, ಯಾವುದೂ ಅಸಾಧ್ಯವಿಲ್ಲ.

ಶತಮಾನಗಳ ಅನಂತರ ಒಂದು ವಿಶಿಷ್ಟ ಕೊಂಕಣಿ ಪ್ರಜ್ಞೆ ಕಾಣಿಸುತ್ತಿದೆ. ಇದೊಂದು ಪ್ರಧಾನ ಬೆಳವಣಿಗೆ. ಕೊಂಕಣಿ ಭಾಷೆಯನ್ನು ಪೋಷಿಸುವ ಇಚ್ಛೆ ಇದೆ. ಇತ್ತೀಚೆಗೆ ಹಲವು ಅಂತಾರಾಜ್ಯ ಕೊಂಕಣಿ ಸಮ್ಮೇಳನಗಳು ನಡೆದಿವೆ. ಕೊಂಕಣಿಯ ವಿಷಯ ಜೀವಂತವಾಗಿದೆ.

ಒಂದು ಭಾಷೆ ಮಾತನಾಡುವ ಜನ ಅದನ್ನು ಅಲಕ್ಷಿಸಿದಾಗ ಆ ಭಾಷೆ ಸಾಯುತ್ತದೆ. ಈ ಭಯ ಕೊಂಕಣಿಗಿಲ್ಲ. ಸಾವಿರಾರು ಮಂದಿ ಅದನ್ನು ಪ್ರೀತಿಸು ತ್ತಾರೆ. ಕೊಂಕಣಿಗರು ಕೊಂಕಣಿ ಬಗ್ಗೆ ಅಭಿಮಾನಪಡುವಂತೆ ಮಾಡಬೇಕು. ಕೊಂಕಣಿ ಅಭಿಮಾನ ಸುಪ್ತವಾಗಿದೆ. ಅದು ಜಾಗೃತವಾಗಬೇಕು. ಇದಕ್ಕೂ ಕೂಡ ಪ್ರೋತ್ಸಾಹ ಅಗತ್ಯ. ಇದು ನಿಧಾನದ ಆದರೆ ಅಸಾಧ್ಯವಲ್ಲದ ಕೆಲಸ. ಕೊಂಕಣಿಗೆ ಯಾರೂ ಶತ್ರುಗಳಿಲ್ಲ ಎಂದು ಹೇಳುವಂತಿಲ್ಲ. ಶತ್ರುಗಳು ಬಹಳಷ್ಟಿದ್ದಾರೆ. ಕ್ರಿಶ್ಚಿಯನ್ನರ ಮೇಲೆ ಸೇಡು ತೀರಿಸುವುದಕ್ಕಾಗಿ ತಮ್ಮ ಕೊಂಕಣಿ ಪರಂಪರೆಯನ್ನು ತ್ಯಜಿಸಲು ಸಿದ್ಧರಿರುವ ಕೆಲವರು ಹಿಂದುಗಳು ಗೋವಾದಲ್ಲಿದ್ದಾರೆ. ಇನ್ನೊಬ್ಬನ ಮೋರೆಯನ್ನು ವಿಕೃತಗೊಳಿಸಲು ಹೊರಟು ತನ್ನ ಮೂಗನ್ನು ಕೊಯ್ದುಕೊಳ್ಳುವ ವಿಲೇವಾರಿ ಇದು. ಆದರೆ ಇದೊಂದು ತಾತ್ಕಾಲಿಕ ವಿದ್ಯಮಾನ. ಗೋವಾದ ಐತಿಹಾಸಿಕ ಹಿನ್ನೆಲೆಯ ಅನಿವಾರ್ಯ ಬಳುವಳಿಗಳಿವು. ಕೊಂಕಣಿಯ ಬದಲಿಗೆ ಪೋರ್ತುಗೀಸ್ ಭಾಷೆ ಮಾತನಾಡುತ್ತಿದ್ದ ಕ್ರಿಶ್ಚಿಯನ್ನರ ಬಗ್ಗೆ ಹಿಂದೂಗಳಿಗೆ ಸಿಟ್ಟಿದೆ. ಆದರೆ ಈ ನೆಲೆಯಲ್ಲಿ ಯೋಚಿಸಿರುವುದು ಸಣ್ಣತನ. ಆದರೆ ಗೋವಾದ ಹಿಂದುಗಳಲ್ಲಿ ಇಂಥವರ ಸಂಖ್ಯೆ ಹೆಚ್ಚೇನಿಲ್ಲ. ಈ ಒಳಜಗಳದಿಂದಾಗಿ ಮರಾಠಿ ವಾದಿಗಳ ಕೈ ಮೇಲಾಗಬಾರದು. ಧಾರ್ಮಿಕ ಅಥವಾ ಇನ್ನಾವುದೇ ಭಿನ್ನಾಭಿ ಪ್ರಾಯಗಳ ಹೊರತಾಗಿ ಕೊಂಕಣಿಗೆ ಗೋವಾದಲ್ಲಿ ಎಲ್ಲ ರೀತಿಯ ಪ್ರೋತ್ಸಾಹ ಸಿಗಬೇಕು. ಈ ಬಗ್ಗೆ ಎಚ್ಚರವಹಿಸುವುದು ಎಲ್ಲ ಕೊಂಕಣಿಗರ ಕರ್ತವ್ಯ.

ಕೊಂಕಣಿಯ ಭವಿಷ್ಯದ ಬಗ್ಗೆ ನನಗೇನೂ ಭಯವಿಲ್ಲ. ನಾನು ಆಶಾವಾದಿ, ನನ್ನ ಆಶಾವಾದದ ಹಿನ್ನೆಲೆಯಲ್ಲಿ ಸಾಕಷ್ಟು ಆಧಾರಗಳಿವೆ. ಶತಮಾನಗಳ ಕಾಲ ಹಿಂಸೆಯನ್ನು ಅನುಭವಿಸಿದ ಕೊಂಕಣಿ, ಮುಂಬರುವ ವರ್ಷಗಳಲ್ಲಿ ಬೆಳೆಯ ಬಲ್ಲುದು. ಸರಕಾರ ಕೊಂಕಣಿಗೆ ಮನ್ನಣೆ ನೀಡಿರುವುದು ಸಂತಸದ ಸಂಗತಿ. ಕೊಂಕಣಿನಿಷ್ಠೆ ಹೆಚ್ಚುತ್ತಿದೆ. ಈ ಭಾಷೆಯಲ್ಲಿರುವ ಆಂತರಿಕ ಶಕ್ತಿಯಿಂದಾಗಿ ಅದನ್ನು ನಾಶಮಾಡಲು ಯಾರಿಂದಲೂ ಸಾಧ್ಯವಿಲ್ಲ. ಕೊಂಕಣಿ ಚಳವಳಿಗಾರರ ಆರಂಭದ ಪ್ರಯತ್ನಗಳು ಪ್ರಶಂಸನೀಯವಾಗಿವೆ. ಮಿಕ್ಕಿದ್ದನ್ನು ಕಾಲ ನಿರ್ಧರಿಸುತ್ತದೆ. ನಾವು ಅವಸರಿಸಬಹುದು, ಆದರೆ ಒಂದು ಸರಿಯಾದ ಯೋಜನೆ ತಯಾರುಮಾಡಬೇಕು. ಯೋಜನೆ ಇರಲಿ ಇಲ್ಲದಿರಲಿ ಕೊಂಕಣಿ ಭಾಷೆ ವರ್ಧಮಾನದ ಆವೇಗದಲ್ಲಿದೆ. ಕೊಂಕಣಿಗೆ ಭವಿಷ್ಯವಿದೆ ಮಾತ್ರವಲ್ಲ ಮಹತ್ವದ ಭವಿಷ್ಯವಿದೆ ಎಂದು ನಾನು ವಿಶ್ವಾಸದಿಂದ ಹೇಳಬಲ್ಲೆ. ಕೊಂಕಣಿಯ ಕಾಲ ಮತ್ತೆ ಬಂದಿದೆ. ಕೊಂಕಣಿ ಶಕ್ತಿ ಸಂಪನ್ನವಾಗಲಿ.

---

೧೯೮೯. 'ಮೊಗರ್' - ಮಣಿಪಾಲದಲ್ಲಿ ಜರಗಿದ ೧೭ನೆಯ ಅಖಿಲ ಭಾರತೀಯ ಕೊಂಕಣಿ ಸಾಹಿತ್ಯ ಸಮ್ಮೇಳನದ ಸವಿನೆನಪಿನ ಸಂಚಿಕೆ, ಸಂ: ಸಂತೋಷಕುಮಾರ ಗುಲ್ವಾಡಿ.

# ಕೊಂಕಣಿ ಜನಪದ ಕಾವ್ಯದ ವೈವಿಧ್ಯ

- ಜೋಸ್ ಪಿರೇರಾ
ಸಂಗ್ರಹಾನುವಾದ : ಬಿ. ವಿ. ಬಾಳಿಗಾ

---

ಪ್ರಾದೇಶಿಕ ಕ್ಷೇತ್ರ ಪ್ರಮಾಣವನ್ನು ಗಮನಿಸುವಾಗ ಗೋವೆಯಲ್ಲಿ ಪ್ರಚಾರ ದಲ್ಲಿರುವ ಗೀತಗಳ ವೈವಿಧ್ಯ ನಿಜಕ್ಕೂ ಆಶ್ಚರ್ಯವನ್ನುಂಟುಮಾಡುತ್ತದೆ. ಈ ಕಡೆ ಆಳವಾದ ಸಂಶೋಧನೆ ನಡೆಸಿದವರು ಈ ವರೆಗೆ ಸುಮಾರು ಮೂವತ್ತು ಬೇರೆ ಬೇರೆ ವಿಧಗಳನ್ನು ಕಂಡುಹಿಡಿದಿದ್ದಾರೆ. ಇದೊಂದು ಪೂರ್ಣ ಇಲ್ಲವೆ ಸುಸ್ಪಷ್ಟ ವಾದ ಯಾದಿ ಎನ್ನಲು ಬರುವುದಿಲ್ಲ. ಶೋಧಿಸಲ್ಪಡದವುಗಳು ಇನ್ನೂ ಇರ ಬಹುದು. ಇವುಗಳಲ್ಲಿ 'ಮಾಂದೋ' (ಇಲ್ಲವೆ ಕೊಂಕಣಿಯಲ್ಲಿ ಕರೆಯಲ್ಪಡುವಂತೆ 'ಮಾಂಡೋ')ದ ಕುರಿತು ವಿವರ ಪೂರ್ಣ ಮಾಹಿತಿ ಸಂಗ್ರಹಿಸಲ್ಪಟ್ಟದ್ದು, 'ದುಲ್ಪೋದ್' ಅಥವಾ 'ದುಲಪದ್' ಮತ್ತು 'ದೇಖಣಿ' (ಸಾಮಾಜಿಕ ಕೂಟಗಳಲ್ಲಿ ಮಾಂಡೋ ಅನಂತರ ಹಾಡಲ್ಪಡುವ ಇತರ ಎರಡು ವಿಧದ ಗೀತ)ಗಳ ಬಗ್ಗೆಯೂ ತಕ್ಕ ಮಟ್ಟಿನ ಸಂಶೋಧನೆ ನಡೆದಿದೆ. ಇತರ ಗೀತಗಳ ಬಗ್ಗೆ ಅಭ್ಯಾಸ ಮತ್ತು ಸಂಶೋಧನೆ ಇನ್ನು ನಡೆಯಬೇಕಷ್ಟೆ. ಈ ವರೆಗೆ ಪ್ರಕಾಶಕ್ಕೆ ಬಂದಿರುವ ಬೇರೆ ಬೇರೆ ಗೀತಗಳ ಯಾದಿ ಈ ಕೆಳಗಿನಂತಿದೆ: 1. 'ಬನ್‌ವಡ'– 'ಮರಣದ ದಿನ' ಹಾಡುವ ಹಿಂದೂಗೀತ. 2. 'ಬ್ರಾಹ್ಮಣರ ವಿವಾಹ ಗೀತಗಳು' –ಮದುವೆಯ ಸಮಾರಂಭಗಳಲ್ಲಿ ಮತ್ತು ಚರ್ಚ್ ಸರ್ವೀಸ್ ಹೊರಗಡೆ ನಡೆ ಯುವ ಸಮಾರಂಭಗಳಲ್ಲಿ ಹಾಡಲ್ಪಡುವವುಗಳು. 3. 'ಶಿಶುಗೀತಗಳು'– ಮಗುವಿನ ಆರೈಕೆ ನೋಡಿಕೊಂಡಿರುವಾಗ ಬೇರೆ ಬೇರೆ ಚಟುವಟಿಕೆಗೆ ಸಂಬಂಧಿಸಿ ತಾಯಿ ಹಾಡುವ ಗೀತಗಳು (ಜೋಗುಳ ಪದಗಳ ಹೊರತು). 4. 'ಮಕ್ಕಳ ಗೀತಗಳು'– ಮಕ್ಕಳು ಆಟವಾಡುವಾಗ ಮತ್ತಿತರ ಸಂದರ್ಭಗಳಲ್ಲಿ ಹಾಡುವ ಗೀತಗಳು. 5. 'ದೇಖಣಿ'–ಗೋವಾದಲ್ಲಿ ಹಿಂದು ಜನಜೀವನದ ಕುರಿತಾದ ಗೀತ. ಕ್ರೈಸ್ತರ ಸಂಗೀತ ಅನುಕರಿಸಿ ಇದನ್ನು ಹಾಡುತ್ತಾರೆ. 6. 'ಧಾಲೊ'–ಹಿಂದೂ ಗೀತ (ವಿವಾಹ ಕಾಲದಲ್ಲಿ ಇದನ್ನು ಹಾಡುತ್ತಾರೆ?). 7. 'ದರ್ಜಸ್'– ಅಂತ್ಯ ಸಂಸ್ಕಾರಗಳಲ್ಲಿ ಶೋಕ–ಪ್ರದರ್ಶಕರು (Mourners) ಅನುವಾಚನ ಮಾಡುವ ಆಶುಗೀತಗಳು. 8. 'ದುಲ್ಪದ್'–ಗೋವೆಯ ದೈನಂದಿನ ಜೀವನವನ್ನು ಮುಖ್ಯವಾಗಿ ಗೋವೆಯ ಕ್ರಿಶ್ಚಿಯನರ ಜೀವನವನ್ನು ವರ್ಣಿಸುವ ತರಂಗ ಗತಿಯ ಗೀತ. 9. 'ದುವಾಲೊ' –ಗರ್ಭಿಣಿಯ ಬಯಕೆಯ ಹಾಡು. 10. 'ಫೇಳ'–ಆಮೋದ ಪ್ರಮೋದಗಳಲ್ಲಿ,

ಕ್ರಿಸ್‌ಮಸ್ ಮತ್ತು ಈಸ್ಟರ್ ಹಬ್ಬಗಳಲ್ಲಿ ಕೆಲವೊಮ್ಮೆ ವಿವಾಹದಂತಹ ಮಂಗಳ ಕಾರ್ಯಗಳು ನಡೆಯುವಾಗ, ಸುತ್ತಾಡಿಕೊಂಡಿರುವ ನಟರು ಆಡುವ ಒಂದು ಜಾನಪದ ನಾಟಕ. ಅವು ವರ್ಣಿಸುವ ಗೋವಾ ಜೀವನದ ಸಾಮಾಜಿಕ ಮಟ್ಟ ಗಳಿಗನುಸಾರವಾಗಿ ಮೂರು ರೀತಿಯ ಫೇಳಗಳಿವೆ. ಅವುಗಳಲ್ಲಿ ಒಂದು ಕ್ರೈಸ್ತ ಜಿಲ್ಲೆಗಳಲ್ಲಿ ಮೂರು ಉಚ್ಚ ಜಾತಿಯವರೆಂದೆನಿಸಲ್ಪಡುವ ಬ್ರಾಹ್ಮಣ, ಚಾಡ್ಡೀ (ಕ್ಷತ್ರಿಯ) ಮತ್ತು ಸುದೀರರ ಕುರಿತಾದುದು; ಇನ್ನೊಂದು ಕುಣಬೀಗಳ ಕುರಿತಾದುದು, ಮಗುದೊಂದು ಹಿಂದೂಗಳ ಕುರಿತಾದುದು. 11. 'ಪುಗಡೀ'–ಧಾರ್ಮಿಕ ಸಮಾ ರಂಭಗಳಲ್ಲಿ, ಮುಖ್ಯವಾಗಿ ಗಣೇಶ ಅಥವಾ ಗಣಪತಿಯ ಹಬ್ಬದಂದು ಹಾಡಲ್ಪ ಡುವ ಒಂದು ನೃತ್ಯಗೀತ. 12. 'ಕುಣಬೀ ಮದುವೆಯ ಹಾಡುಗಳು ಅಥವಾ ಪೀಟಾ'–ಕುಣಬೀಯವರ ಧಾರ್ಮಿಕೇತರ ಮದುವೆ ಸಮಾರಂಭದ ಗೀತಗಳು. 13. 'ಕುಣಬೀ ಗೀತಗಳು'–ಕುಣಬೀಯವರ ಬೇರೆ ಬೇರೆ ಸಂದರ್ಭಗಳಲ್ಲಿ ಹಾಡುವ ಹಾಡುಗಳು. 14. 'ಲಾವಣೀ'–ಧಾರ್ಮಿಕ ಮತ್ತು ಪುರಾಣೋಕ್ತ ವಿಷಯಗಳ ಕುರಿತಾದ ಜನಪ್ರಿಯ ಗೀತ ಪರಿವರ್ತನ. 15. 'ಮಾಂಡೋ'– ಸಾಮಾನ್ಯವಾಗಿ ಕ್ರಮಬದ್ಧವಾದ ಚರಣಯುಕ್ತ ಕವಿತೆ ಇಲ್ಲವೆ ಚರಣಬದ್ಧವಾದ ಪಲ್ಲವಿ. ಅದಕ್ಕೆ ಅದರದೇ ಛಂದಸ್ಸು ಮತ್ತು ತರಂಗ ಗೆರೆಯಿದ್ದು, ಪ್ರೇಮ, ವೈಯಕ್ತಿಕ ದುರಂತ ಮತ್ತು ಹೊರಗಿನ ಘಟನೆಗಳ ವರ್ಣನೆ ಬರುವುದು. 16. 'ಮಾಂಡೋ ದುಲ್ಪದ್'–ಮಾಂಡೋದಲ್ಲಿ ಕ್ಷಿಪ್ರಗತಿಯ ಒಂದು ವಿಧ. ಹಾಡುಗಾರ ರಿಗೆ ಮತ್ತು ನೃತ್ಯಗಾರರಿಗೆ ಮಾಂಡೋದಿಂದ ತೀವ್ರ ವೇಗದ ದುಲ್ಪದ್ ಪಟ್ಟು ಗಳಿಗೆ(beats) ಗತಿ ಬದಲಾಯಿಸಲು ಅನುಕೂಲವಾಗುವಂತೆ ಇದರ ರಚನೆಯಿದೆ. 17. 'ವೋವಿ ಮತ್ತು ವೆರ್ಸ್'– ಗೀತಗಳು ಶೈಲಿ ಮತ್ತು ಸಂಗೀತ ಲಕ್ಷಣಗಳಲ್ಲಿ ಮದುವೆ ಹಾಡುಗಳಿಗೆ ಸಮಾನವಾಗಿದ್ದು (ಅವುಗಳಿಗೂ ವೋವಿ ಮತ್ತು ವೆರ್ಸ್ ಎನ್ನುವುದುಂಟು.) ವರ್ಣಿಸಲ್ಪಡುವ ವಿಷಯವು ಮನೆಯಲ್ಲಿ ನಡೆಯುವ ಮದುವೆ ಸಮಾರಂಭಕ್ಕೆ ಹೊರಗಿನ ಯಾವುದಾದರೂ ಪ್ರಕರಣಕ್ಕೆ ಸಂಬಂಧಿಸಿರುತ್ತದೆ. ಮೂಲತಃ (ಮತ್ತು ಈಗಲೂ ಹೆಚ್ಚಿನ ಪರಿಸ್ಥಿತಿಗಳಲ್ಲಿ) ಈ ಎಲ್ಲಾ ಗೀತಗಳು ವೋವಿ ಛಂದಸ್ಸಿನಲ್ಲಿರುತ್ತವೆ. ಈ ಗೀತಗಳಿಗೆ ಪೋರ್ತುಗೀಸ್ ಹೆಸರು 'ವೆರ್ಸು', ಅದೇ ಕೊಂಕಣಿಯಲ್ಲಿ 'ವೆರ್ಸ್'. 18. 'ಪಾಳಣಾ'– ಜೋಗುಳ ಹಾಡುಗಳು. ತಾಯಿಯು ತನ್ನ ಮಗುವಿಗಾಗಿ ಹಾಡುವ ಗೀತಗಳ ಅತಿ ದೊಡ್ಡ ಶಾಖೆ ಇದಾಗಿದ್ದು, ಶಿಶುಗೀತಗಳಿಗಿಂತ ಪ್ರತ್ಯೇಕ ವಿಭಾಗವನ್ನಾಗಿ ಕೊಡುವುದು ಅಗತ್ಯ. 19. 'ಜನಪ್ರಿಯ ಕಲಾಗೀತಗಳು'– ಮಾಂಡೋದಂತೆ ಕ್ರಮಬದ್ಧ ರೂಪವಿಲ್ಲದ ನಾನಾ ವಿಧದ ಕಲಾ ಗೀತಗಳ ಒಂದು ಪ್ರತ್ಯೇಕ ವಿಭಾಗವಿದು. 20. 'ಗೊತ್ತುಗುರಿ ಯಿಲ್ಲದ ಜಾನಪದ ಗೀತಗಳು'– ಯಾವುದೇ ಒಂದು ನಿಶ್ಚಿತ ವಿಷಯ ಇಲ್ಲವೆ ಹೆಸರು ಇಲ್ಲದೆ, ಆದರೆ ಒಂದು ರೂಪವಿರಹಿತವಾದುದೇ ಇರಬೇಕೆಂಬ ನಿಯಮವಿಲ್ಲದ ಜಾನಪದ ಗೀತಗಳ ಸಂಗ್ರಹ. ರೂಪವಿದ್ದರೆ ಅದು ವೈಯಕ್ತಿಕ

ಸಂದರ್ಭಗಳಲ್ಲಿ ಹೊರತು ಒಂದು ಮಾದರಿಯಾಗಿ ಅಲ್ಲ. 21. 'ಪವಿತ್ರ ಕಲಾಗೀತ'– ದೇವರ ಸ್ತೋತ್ರಗೀತ', ಸಂವಾದ ಗಾನ ಮತ್ತು ಧಾರ್ಮಿಕ ಹಾಡುಗಾರಿಕೆ ಸಂಗೀತದ, ಮುದ್ರಿತ ಮಾಧ್ಯಮದ ಮೂಲಕ– ಪ್ರಸಾರವಾದ ಪ್ರಕಾರಗಳು. 22. 'ಪವಿತ್ರ ಜಾನಪದ ಗೀತ– ದೇವರ ಸ್ತೋತ್ರಗೀತಗಳು ಮತ್ತು ಜನಪ್ರಿಯ ಪ್ರಶ್ನೋತ್ತರ ರೂಪದ ಗೀತಗಳು ಮತ್ತು ಮಂತ್ರಗಳು. ಅವು ಸಂಪೂರ್ಣವಾಗಿ ಇಲ್ಲವೆ ಹೆಚ್ಚಾಗಿ ಬಾಯ್ದೆರೆಯ ಪರಂಪರೆಯಲ್ಲೇ ಜೀವಿಸಿರುವವುಗಳು. 23. 'ಕಥಾಗೀತಗಳು'– ಒಂದು ಕಥೆಯಲ್ಲಿ ಬರುವ ಹಲವು ಪಾತ್ರಗಳ ಸಂಭಾಷಣೆಗಳು ಹಾಡಿನ ರೂಪದಲ್ಲಿ. ಅವುಗಳು ಹೆಚ್ಚಾಗಿ ವರ್ಣನೆಯಿಂದೊಡಗೂಡಿದ ಹಾಡಲ್ಪಡುವ ಗದ್ಯರೂಪದಲ್ಲಿರುತ್ತವೆ. 24. 'ರಸ್ತೆ ಮಾರಾಟಗಾರರ ಕೂಗು'– ಇವು ಹೆಚ್ಚಾಗಿ ಒಂದು ವಾಕ್ಯದ ಸ್ವರ ವಿನ್ಯಾಸ ರೂಪದಲ್ಲಿವೆ. ರಸ್ತೆ ಮಾರಾಟಗಾರನ ಆಗಮನದ ಕಡೆಗೆ ಜನರನ್ನಾಕರ್ಷಿಸುವುದು ಹಾಡಿನ ಉದ್ದೇಶ. 25. 'ಸುದೀರ ಮದುವೆಯ ಹಾಡುಗಳು'– ಸುದೀರರು(ಶೂದ್ರರು) ಮದುವೆಯ ಧಾರ್ಮಿಕ ವಿಧಿಗಳು ನಡೆಯುವ ಮೊದಲು ಮತ್ತು ಅನಂತರ ಹಾಡುವ ಮದುವೆಯ ಹಾಡುಗಳು. 26. 'ತಾಲಗಡೀ'– ಗೌರ್ಡ್ಡೋಗಳ ಒಂದು ಗೀತ. 27. 'ತೇಆತ್ರ ಗೀತಗಳು'– ತೇಆತ್ರ (ಥಿಯೇಟರ್) ಅಥವಾ ನಾಟಕಗಳಲ್ಲಿ ಹಾಡಲ್ಪಡುವವುಗಳು. 28. 'ದುಡಿತದ ಹಾಡುಗಳು'– (ಕಾಯಕ ಗೀತಗಳು)– ಗದ್ದೆಗಳಲ್ಲಿ ದುಡಿಯುವವರು ತಮ್ಮ ದುಡಿಮೆಯ ಕಾಲದಲ್ಲಿ ಹಾಡುವವುಗಳು (ನಮ್ಮಲ್ಲಿ ಇವುಗಳನ್ನು ನೇಜಿ ನೆಡುವ ಹಾಡುಗಳೆನ್ನುತ್ತಾರೆ.) 29. 'ಜಾಗರ ಗೀತಗಳು'–ಜಾಗರ್ ಎಂದರೆ ಕುಣಬೀಗಳು ತಮ್ಮ ಸ್ವಂತ ಜೀವನದ ಕುರಿತು ಅಭಿನಯಿಸುವ ಒಂದು ಪ್ರಹಸನ. ಇದು ಬಹಳ ಬೀಜಭೂತವಾಗಿದ್ದು, ಗುಣದ ಮಟ್ಟಗೆ ಅಪಕ್ವವಾಗಿರುತ್ತದೆ. 30. 'ಜೋತೀ'–ಮದುವೆಯ ಕಾಲದಲ್ಲಿ ಉಚ್ಚರಿಸಲ್ಪಡುವ ಮಂತ್ರಗಳಿಗೆ ಕ್ರೈಸ್ತರು ಇಲ್ಲವೆ ಬಾರದೇಸಗಾರರು ಇಲ್ಲವೆ ಹಿಂದೂಗಳು ಅವರ ಶಿಗಮೋ ಉತ್ಸವಕಾಲದಲ್ಲಿ ಉಪಯೋಗಿಸುವ ಹಾಡಿನ ಒಂದು ರೂಪ. ಅವುಗಳಲ್ಲಿ–ಹುಡುಗರು ಗುಂಪಾಗಿ ಮನೆಮನೆಗಳ ಮುಂದೆ ಹಾಡುವ ವೀರ ಕಾವ್ಯ ಮತ್ತು ವರ್ಣನೆಯ ಗೀತಗಳೂ ಸೇರಿರುತ್ತವೆ.

ಧರ್ಮ, ಜಾತಿ, ವರ್ಗ ಮತ್ತು ವೃತ್ತಿ, ಭಾಷಾಕೂಟ, ಶಿಕ್ಷಣ, ಸಂಗೀತ, ಸಾಹಿತ್ಯ ರೂಪ, ವಿಷಯ, ನಿಯಮಿತ ಕಾರ್ಯ, ಪ್ರದೇಶ, ಲಿಂಗಭೇದ ಮತ್ತು ಯುಗ ಹೀಗೆ ಹದಿನೆರಡು ಬೇರೆ ಬೇರೆ ಪ್ರಮಾಣಗಳನ್ನವಲಂಬಿಸಿ ಗೋವೆಯ ಗೀತಗಳನ್ನು ವಿಮರ್ಶಾತ್ಮಕವಾಗಿ ವಿಭಜಿಸಬಹುದಾಗಿದೆ.

---

೧೯೭೭. 'ಸುದರ್ಶನ' – ಡಾ। ಟಿ.ಎಂ.ಎ. ಪೈ ಅಭಿನಂದನ ಗ್ರಂಥ : ಸಂ: ಅಡ್ಯನಡ್ಕ ಕೃಷ್ಣ ಭಟ್.

# ಕೊಂಕಣಿಗರ ವಿವಾಹಗಳಲ್ಲಿ ಜನಪದ ಹಾಡುಗಳು

– ಡಾ। ಜ್ಯೋತ್ಸ್ನಾ ಕಾಮತ್

---

ತಮ್ಮ ಏಕಮೇವ ಪುತ್ರಿಯ ವಿವಾಹವನ್ನು ಮುಂಬಯಿಯಲ್ಲಿ ಅತಿ ವಿಜೃಂಭಣೆಯಿಂದ ನೆರವೇರಿಸಲಿರುವದರಿಂದ ಖಂಡಿತವಾಗಿ ಬರಲೇಬೇಕು ಎಂದು ಸೋದರಮಾವ ಆಗ್ರಹ ಮಾಡಿದ್ದರಿಂದಲೂ, ಇತ್ತೀಚೆಗೆ ನಮ್ಮವರ ಯಾವ ಮದುವೆಯಲ್ಲೂ ಪಾಲುಗೊಳ್ಳಲಾಗದ್ದರಿಂದಲೂ, ಹತ್ತೆಂಟು ಕೆಲಸಗಳನ್ನು ಬದಿಯಲ್ಲಿಟ್ಟು ಹೋಗಿದ್ದೆ. ವಿವಾಹದ ಎಲ್ಲ ವಿಧಿಗಳನ್ನು ಕಾಟಾಚಾರಕ್ಕೆ ಎಂಬಂತೆ ನಡೆಸುವುದನ್ನು ನೋಡಿ ಬೇಜಾರಾಯಿತು. ಅನ್ಯಮನಸ್ಕಳಾಗಿ ಕುಳಿತಾಗ ಮನಸ್ಸು ತುಂಬ ಹಿಂದೆ ಹೋಗಿ ಕೃಷ್ಣಾಬಾಯಿಯ ಮದುವೆಯ ಸಂಭ್ರಮವನ್ನು ಮೆಲುಕು ಹಾಕಲಾರಂಭಿಸಿತು. ಅವಳ ಮದುವೆಯಲ್ಲಿ ಎಲ್ಲವನ್ನೂ ಶಾಸ್ತ್ರೋಕ್ತವಾಗಿ ನಡೆಸಲು, ಕಾಶಿಯಲ್ಲಿ ವೇದೋಪನಿಷತ್ತುಗಳನ್ನು ಕ್ರಮವಾಗಿ ಅಭ್ಯಸಿಸಿದ ಪಾಂಡುರಂಗ ಭಟ್ಟರು ಟೊಂಕಕಟ್ಟಿ ನಿಂತಿದ್ದರು. ಈ ನಗರದ ಪುರೋಹಿತರಿಗೋ ಸಂಸ್ಕೃತ ಪದಗಳ ಸರಿಯಾದ ಉಚ್ಚಾರವೂ ತಿಳಿಯದು. ಮೊಪೆಡ್ ಓಡಿಸಿ ಬಂದು, ಸತ್ಯನಾರಾಯಣ ಪೂಜೆ, ಶ್ರಾದ್ಧ, ಮುಂಜಿ, ಮದುವೆಗಳನ್ನೆಲ್ಲ ಕಾಲು, ಅರ್ಧ ಗಂಟೆಯಲ್ಲಿ ಮುಗಿಸಿಬಿಡುವ ಶ್ರೋತ್ರಿಯೋತ್ತಮರು. ಹುಲ್ಲಿನ ನಳಿಕೆಯಿಂದ ಬಾಟ್ಲಿಯಲ್ಲಿದ್ದ ತಂಪು ಪಾನೀಯ ಹೀರಿದ್ದಾಯಿತು. ಧಾರೆಯ ಮೊದಲೇ ಬಂದವರೆಲ್ಲ ಅವಸರದಿಂದ ಭೋಜನಶಾಲೆಗೆ ಹೊರಟರು. ಸ್ಥಿತಪ್ರಜ್ಞಳಂತೆ ಕುಳಿತವಳನ್ನು, ಮಾವನ ಮಗಳು ಬಂದು, 'ಮದುವೆಯ ಊಟಕ್ಕೆ ಈಗಲೇ ಪಾಳಿ ಹಚ್ಚದಿದ್ದರೆ, ಕೊನೆಯ ಪಂಕ್ತಿಯಲ್ಲಿಯೂ ನಿನ್ನ ಸರದಿ ಹತ್ತಲಿಕ್ಕಿಲ್ಲ, ಕ್ಯೂ ಹಚ್ಚು....' ಎಂದು ಎಚ್ಚರಿಸಿದಳು. ಸಹಪಾಠಿಯ ವಿವಾಹದ ನೆನಪುಗಳೇ ನಾಲ್ಕೂ ಕಡೆಯಿಂದ ಬಂದು ಮುತ್ತಿಕೊಂಡದ್ದರಿಂದ ಮೈಮರೆತೆ....

ಗೋಕರ್ಣದ ಭದ್ರಕಾಳಿ ಶಾಲೆಯ ವಿದ್ಯಾರ್ಥಿನಿ ಇದ್ದಾಗಲೇ ಗೆಳತಿ ಕೃಷ್ಣಾಬಾಯಿಯನ್ನು ನೋಡಲು ವರ ಬರಲಿದ್ದಾನೆಂದು ವಾರ್ತೆಯೇ ಗೆಳತಿಯರಿಗೆಲ್ಲ ಹೆಚ್ಚಿನ ರೋಮಾಂಚನ ನೀಡಿತ್ತು. ಹೆಸರಿನಂತೆ ಮೈ ಬಣ್ಣ ಹೊಂದಿದ್ದ ವಧು, ಗೌರ ವರ್ಣದ ಮೈತ್ರಿಣಿಯರಿಗೆ ಯಾರಿಗೂ ಮನೆಯ ಹತ್ತಿರ ಸುಳಿಯದಂತೆ ಬಿನ್ನವಿಸಿಕೊಂಡಿದ್ದಳು. ನಿಶ್ಚಯತಾಂಬೂಲವಾಯಿತೆಂದು ತಿಳಿದರೂ ಚುಡಾಯಿಸಲು ಮದುಮಗಳು ಸಿಕ್ಕಿರಲಿಲ್ಲ. ಕೊನೆಗೆ ಮಾಸ್ ಪರೀಕ್ಷೆಗಾಗಿ ವಧು ಪ್ರತ್ಯಕ್ಷಳಾದಳು.

ವರ್ಗದ ಗುರುಗಳೇ ಭಾವೀ ಗಂಡನ ಹೆಸರು ವಿಚಾರಿಸಿದಾಗ, ಹಾಡಿನ ರೂಪದಲ್ಲಿಯೇ ಹೇಳಿದ್ದಳು.

**ಶಾಳೆ ಸುತ್ತ ಆಸಾ, ಸುಂದರ ಫುಲಬಾಗ**
**ಮೆಗೆಲ್ ಹೊರ್ರ್ಯತಾಲೆನಾವ ಮೋಹನ ಶಾನಭಾಗ**

ವಿಶ್ರಾಂತಿಯ ವೇಳೆಯಲ್ಲಿ ನಮಗಾಗಿಯೇ ಪ್ರತ್ಯೇಕವಾಗಿ ಪತಿಯ ಹೆಸರು ಹೇಳಬೇಕು, ಎಂದು ಒತ್ತಾಯಿಸಿದಾಗ ಮೊದಲೇ ಯೋಚಿಸಿ ಇಟ್ಟಂತೆ ಥಟ್ಟನೆ ಹೇಳಿದ್ದಳು.

**ಬಲಿಚಕ್ರವರ್ತಿಲೆ ಸಂಹಾರ ಕೆಲ್ಲೆಲೊ ವಾಮನು**
**ಮಗೆಲ್ ಬರ್ಶಿ ಸಂಸಾರ ಕರ್ತಲೊ ಮೋಹನು**

ವಾರದನಂತರ ಹೂ ಮುಡಿಸುವುದಕ್ಕಾಗಿ ಗಂಡನ ಮನೆಯ ಹೆಂಗಳೆಯರ ತಂಡ ಬಂದಾಗ, ಏರ್ಪಟ್ಟ ವಿಶೇಷ ಊಟದಲ್ಲಿ ಪಾಲುಗೊಳ್ಳುವಂತೆ ನಮಗೂ ಆಮಂತ್ರಣವಿತ್ತು. ಮದುಮಗಳಿಗೆ, ಜರಿಬಣ್ಣದ ನೂಲು ಸೇರಿಸಿ ಕಟ್ಟಿದ ಮಲ್ಲಿಗೆ, ಜಾಜಿ, ಕನಕಾಂಬರ ದಂಡೆಗಳನ್ನು ಮುಡಿಸಿ, ಹೊಳೆಯುವ ಪವನಿನ ಸರವನ್ನು ಕೊರಳಿಗೆ ಹಾಕಿ, ರೇಶ್ಮೆ ಸೀರೆ ಉಡಿ ತುಂಬುತ್ತಿದ್ದಂತೆ, ನೆರೆದ ಮುತ್ತೈದೆಯರು ಕೊಂಕಣಿ ವೋವಿಗಳನ್ನು ವಿವಿಧ ಸನ್ನಿವೇಶಗಳಿಗೆ ಸರಿಹೊಂದುವಂತೆ ರಚಿಸಿ ಹಾಡಲಾರಂಭಿಸಿದರು.

ಹಿರಿಯರಿಗೆ ವೋವಿ ಹೇಳಲು ವಿನಂತಿಸಿದ್ದು ವೋವಿ ಮೂಲಕವೇ ಎಂದು ಮೋಜೆನಿಸಿತು:

**ಸಾಂಗೆ ಭಿತ್ತರಿಸಾಂಗ, ಮಶಿಂಗಾಚೆ ಸಾಂಗ**
**ಮ್ಹಾಲಗಡೆ ಏಸಕ್ಕಾ, ಬರಿಬರಿ ವೋವಿ ಸಾಂಗ**

ಬಿನ್ನಹ ಮನ್ನಿಸಿದ ಏಸಕ್ಕ ಈ ವಿವಾಹದ ಬಗ್ಗೆ ತಮಗೆ ಉಂಟಾಗಿದ್ದ ಕಾತರವನ್ನು ವಿವರಿಸಿದಳು:

**ಲಗ್ನಾ ಕಾರಣ ಮ್ಹಣು ಇತ್ಲೆ ದಿವಸ ಗೆಲೆ**
**ಹೊರ್ರ್ಯತಾವಾಟಪಳೊನು ಆಮಗೆಲೆ ದೊಳೆ ಭಾಗಲೆ**

ನಿಶ್ಚಯತಾಂಬೂಲಕ್ಕೆ ವಿಳಂಬವಾದ್ದಕ್ಕೆ ಕಾರಣವನ್ನು ಭಾವೀ ಅತ್ತೆ ಸೂಚಿಸಿದಳು:

**ವಾಡ್ಡಿಲೆ ಮಗ್ಗೆ ವಾಲ್ಲೇರಿ ಸರಸರತಾ**
**ವರದಕ್ಷಿಣೆ ಕಾಡ್ಟಾಕ ದಾಮ್ಮಾಮ್ ಥರಥರತಾ**

ಆದರೆ ವಧುವಿನ ತಾಯಿ ಪತಿಯ ನೆರವಿಗೆ ಧಾವಿಸಿ ಮದುವೆಗೆ ವಿಳಂಬ ತಮಗೆ ಏಕಮಾತ್ರ ಪುತ್ರಿಯಿದ್ದದ್ದು, ಎಂಬ ನೆಪ ತೋರಿದಳು:

**ಏಕ ಏಕಿ ಧುವ ಮ್ಹಣು ಚಲ್ಯಾವಾರಿ ಹೋಡಕೆಲೆ**
**ಸೋಣು ಏರ್ಚೆಕಶಿ, ಮ್ಹಣುಮನಸಾನ ಜಾಲೆ**

ಈ ವೋವಿಗಳ ಸರಸ ಯುದ್ಧವನ್ನು ಏಕಚಿತ್ತದಿಂದ ಆಲಿಸುತ್ತಿದ್ದ ನನ್ನನ್ನು ನೋಡಿದ ಗುಲ್ಲಕ್ಕಾ "ಈ ಗುಲಾಬೀ ಹೂ ಯಾವುದು? ಒಳ್ಳೆಯ ವರ ಸೂಚಿಸಲೇ?" ಎಂದಾಗ ಮೆಟ್ಟಬಿದ್ದೆ. ಇದೆಲ್ಲಿಯ ಗ್ರಹಚಾರ ಗಂಟುಬಿತ್ತು? ಎಂದು ಗಾಬರಿಗೊಂಡು, ವರರನ್ನೂ ನಾಚಿಸುವಷ್ಟು ತುಂಬ ಕಲಿಯಬೇಕೆಂದಿರು ವೆನು, ಎಂದು ವೋವಿಯ ರೂಪದಲ್ಲಿಯೇ ವಿವರಿಸಿ ಅಲ್ಲಿಂದ ಕಂಬಿಕಿತ್ತಿದ್ದೆ:

**ಹಾಂವೆ ದಾರಲ್ಯಾವಾರಿ ಶಿಕ್ಕಾ ಮಸ್ತ ಮಗ್ಗಿ**
**ಮಾಕ್ಕಾ ನಾಕ್ಕಾ ಕಾಂಯಿ ಲಗ್ನ ಇತ್ಲೆ ಬೆಗ್ಗಿ**

ಸೀರೆ, ಬಂಗಾರ, ಆಮಂತ್ರಣ, ಆತಿಥ್ಯ, ಹರಟೆ, ನಗೆಚಾಟಿಕೆ, ವೋವ್ಯೋ, ಹುಮ್ಮಾಣಿಗಳ ನಡುವೆ ಕೃಷ್ಣಾಬಾಯಿಗೆ ವಿದ್ಯಾಭ್ಯಾಸ ರುಚಿಸದ್ದರಿಂದ ಶಾಲೆಗೆ ತಿಲಾಂಜಲಿ ಕೊಟ್ಟಳು. ಇದರಿಂದ ಮದುವೆ ಮನೆಯ ಸ್ವಾರಸ್ಯದ ಘಟನೆಗಳು ನಮ್ಮ ಪಾಲಿಗೆ ಇಲ್ಲದಾಗಲಾರಂಭಿಸಿದ್ದರಿಂದ ನಾವೇ ಅವಳ ಮನೆಗೆ ಧಾಳಿ ಇಡಲಾರಂಭಿಸಿದೆವು.

ಕೃಷ್ಣಾಬಾಯಿ ತಂದೆಯವರ ಗದ್ದೆಗಳಿಂದ ಬಂದ ಬತ್ತವನ್ನು ಆರ್ದ್ರತೆಯಿಂದ ಕೆಡಬಾರದೆಂದು ಜಗಲಿಯ ಮೇಲೆ ದಾಸ್ತಾನು ಮಾಡಿದ್ದರು. ಮದುವೆಗೆ ಬೇಕಾಗುವ ಅಕ್ಕಿಯನ್ನು ಸಿದ್ಧಮಾಡಲು ಕಾರ್ಲೆ ಹೆಂಗಳೆಯರನ್ನು ನೇಮಿಸಲಾಗಿತ್ತು. ಅವರು ವೀಳ್ಯ ಜಗಿದು ತುಟಿ ಕೆಂಪಗೆ ಮಾಡಿಕೊಂಡು, ಬತ್ತವನ್ನು ಮಣ್ಣಿನ ಹಂಡೆಯಲ್ಲಿ ಕುದಿಸಿ, ಒಣಗಿಸಿ ಒನಕೆಯಿಂದ ಕುಟ್ಟುತ್ತಿದ್ದರು. ಮೂವರು ಕಾರ್ಲೆಯರು (ಖಾರ್ವಿ ಹೆಂಗುಸರು) ಕಾಲಿನಿಂದ ಬತ್ತ ಮುಂದೆ ತೂರುತ್ತ, ಕೈಯಲ್ಲಿ ಒನಕೆ ಹಿಡಿದು ಕುಟ್ಟುತ್ತ ಬಾಯಲ್ಲಿ ಕೊಂಕಣಿ ಹಾಡು ಜೊತೆಯಲ್ಲಿ ಹಾಡುತ್ತಿದ್ದರು:

**ಹೆಂ ಹೆಂ ಹೆತ್ತಾ । ಭಾತ ತಾಂದುಳ ಜಾತ್ತಾ**
**ಸಾನ ಆಮ್ಮಾಲ್ ಘೋವ್ ಜೆವಣಾ ಎತ್ತಾ**
**ಹೆಂ ಹೆಂ ಹೆತ್ತಾ ..................**

ಇವರ ಹಾಡು ಕೇಳಿಸಿಕೊಂಡವನಂತೆ, ಮೋಹನ ಶಾನಭಾಗನು, ಗೋಕರ್ಣ ಮಠದಲ್ಲಿ ಏನೋ ಕೆಲಸ ಇತ್ತೆಂದು ಕುಂಟು ನೆಪ ಹೇಳಿ, ಬಂದಿಳಿದನು. ಸಡಗರದಿಂದ ಭಾವೀ ಅತ್ತೆ, ಮಗಳು ಪಾಕ ವಿದ್ಯೆಯಲ್ಲಿ ಪಾರಂಗತೆ ಎಂದು ಅಳಿಯನಿಗೆ ಮನವರಿಕೆ ಮಾಡಿಕೊಡಲು ಒಲೆಯ ಮೇಲೆ ಕುದಿಯುತ್ತಿದ್ದ ಬೇಳೆಯಲ್ಲಿ ಸೌಟು ಆಡಿಸಲು ಸೂಚಿಸಿದಳು. ಯಾವ ಕೆಲಸವನ್ನೂ ಮಾಡಿ

ಅರಿಯದ ಮಗಳು ಬಲಗೈ ಮೇಲೆ ಎಸರು ಸಿಡಿದು, ಕೊಂಚ ಗುಳ್ಳೆ ತರಿಸಿಕೊಂಡಳು. ತಂದೆ, ತಾಯಿ, ತಿಂಡಿ ತಿನ್ನುತ್ತಿದ್ದ ಅಳಿಯ ಎಲ್ಲರೂ ಹೌಹಾರಿದರು. ತಾಯಿ ಕೆಂಪು ದಾಸವಾಳದ ಪಕಳೆಯನ್ನು ಸುಟ್ಟಲ್ಲಿ ಹಚ್ಚಿ ಕೋಣೆಯಲ್ಲಿ ವಿಶ್ರಮಿಸಲು ಸೂಚಿಸಿದಳು. ಸಮಯ ಕಾದು ಮೋಹನನು ಕೃಷ್ಣಾಬಾಯಿಯ ಬಳಿ ಬಂದು ತಲೆ ನೇವರಿಸಿದಾಗ, ಅವಳಿಗೆ ರೋಮಾಂಚನವಾಯಿತಂತೆ! ಸುಟ್ಟ ಗಾಯಕ್ಕೆ ಗಾಳಿ ಹಾಕುತ್ತ ಸುಖದುಃಖಗಳಲ್ಲಿ ತಾವು ಜೊತೆಯಾಗಿರಬೇಕೆಂದು ಸೂಚಿಸಿದನಂತೆ. ಕುತೂಹಲದ ಹುಡುಗರು, ಹಣಿಕೆ ಹಾಕಿ ಇವರಿಬ್ಬರನ್ನು ನೋಡಿ ಹೋದರು. ಅದೇ ವಿಚಾರವನ್ನು ಮೋಹನ ವೋವಿಯಲ್ಲಿ ತಂದನಂತೆ.

**ಚರಡುಂವ ಖೋಲಿ ಭ್ಯಾರ ಅರ್ಗುನ ಫೂಳೊವ್ನುಗೆಲಿ**
**ಸಂಸಾರಾ ಸುಖದುಃಖಾಂತ, ಕೃಷ್ಣಿ, ತೂ ಮೆಗೆಲಿ**

ಮದುವೆಗೆ ಇನ್ನೂ ಎರಡು ವಾರಗಳಿರುವಾಗಲೇ ನೆಂಟರು, ಆಪ್ತೇಷ್ಟರು, ಸರ್ವಕುಟುಂಬಗಳೊಂದಿಗೆ ನಾವೆಗಳಲ್ಲಿ, ಜೋಡಿ ಎತ್ತಿನ ಗಾಡಿಯಲ್ಲಿ ಪಯಣ ಕೈಕೊಂಡು ಬಂದಿಳಿದರು. ಅವರೆಲ್ಲ ತಂತಮ್ಮ ಕೆಲಸಗಳನ್ನು ತಾವೇ ಮಾಡಿಕೊಳ್ಳು ವದಲ್ಲದೇ ಸಾಮೂಹಿಕವಾಗಿ ಮದುವೆಯ ಸಿದ್ಧತೆಗೆ ಸಹಾಯ ಮಾಡುತ್ತಿದ್ದುದು ಅಂದಿನವರ ವೈಶಿಷ್ಟ್ಯವಾಗಿತ್ತು. ಅಂಗಳದಲ್ಲಿ ತೆಂಗಿನ ಸೋಗೆಗಳ ಬಲು ದೊಡ್ಡ ಚಪ್ಪರ ಹಾಕಿದ್ದರು. ಒಂದು ಮೂಲೆಯಲ್ಲಿ ಗುಂಡುಗಲ್ಲುಗಳ ದೊಡ್ಡ ದೊಡ್ಡ ಒಲೆ, (ರಶ್ಯಾರಾಂದಣಿ)ಗಳನ್ನು ಹೂಡಿದ್ದರು. ಅಡುಗೆಯ ಸರ್ವ ಜವಾಬ್ದಾರಿ ಯನ್ನೂ ಶೀನ ಮಾಮನಿಗೆ ವಹಿಸಲಾಗಿತ್ತು. ಆದರೆ ಸುಖನಿದ್ರೆಯಲ್ಲಿ ಹೆಚ್ಚು ವಿಶ್ವಾಸವಿಟ್ಟು ಅದಕ್ಕಾಗಿ ಸದಾ ಚಾಪೆ ಹುಡುಕುವ ಅವನ ಚಪಲವನ್ನು ಖಂಡಿಸಿ ಅಕ್ಷೆ (ಅಘನಾಶಿನಿ)ಯ ಚಂಪಕ್ಕ, ಹಾಡಿನ ಧೂಬಾಣ ಬಿಟ್ಟಿದ್ದಳು:

**ಕಾಳೆ ಕಿಟ್ಟ ಜಾನವೆ, ಗೋಪಿಚಂದನಾಚೆ ನಾಮ**
**ನಿಜ್ಞಾಕ ಮಾಂದ್ರಿ, ಸದಾ ಸೊತ್ತಾ, ಶೀನ ಮಾಮ**

ಎಲ್ಲ ತರದ ಚುಚ್ಚು ಹಾಡುಗಳನ್ನು ಕೇಳಿ ಬೆಳೆದ ಅಡುಗೆ ಭಟ್ಟನು, ತಾನೂ ಹಿಂಜರಿಯದೇ, ಚಂಪಕ್ಕ ಎಂಥ ಜಗಳಗಂಟಿ ಎಂಬರ್ಥ ಬರುವಂತೆ ಹಾಡಿದ:

**ರಾಂಚಾಕ ದಿಲ್ಯಾಹೀ ಆಜ್ಞಾ ಕಾಲಚೇಪಚಾಂಡಿ**
**ಅಕ್ಷೆಚೀ ಚಂಪಕ್ಕಾ ಆಸ್ಸ ಮಹಾಲಚಾಂಡಿ**

ಈ ವಾಗ್ಯುದ್ಧ ವಿಕೋಪಕ್ಕೆ ಹೋಗಬಾರದೆಂದು ಬರ್ಗಿಯ ಯಮುನಕ್ಕ ಹುಮ್ಮಾಣೆ (ಒಗಟು) ಹಾಕಲು ಪ್ರಾರಂಭಿಸಿದಳು:

**ಸರ್ ಸರ್ ಕರ್ತಾ ಸರ್ಪ ನಯಿ, ಗಡ್ ಗಡ್ ಕರ್ತಾ ಘಂಟೋ ನಯಿ,**
**ಗಳ್ಯಾಂತು ಜಾನವೆ ಬ್ರಾಹ್ಮಣ ನಯಿ, ಹೆಂ ಸಾಂಗಿಲೆ ಸೀತೆ ಸಮಾನ**

ಒಬ್ಬಳು ಮೊಸರು ಕಡೆಯುವ ಕಡೆಗೋಲು ಎಂದಳು. ಇನ್ನೊಬ್ಬಳು 'ನೂಲುವ ರಾಟೆ' ಎಂದು ಉತ್ತರಿಸಿದಳು. ಯಮುನಕ್ಕಳೇ 'ಬಾವಿಯ ಗಡಗಡೆ' ಎಂದು ಹೇಳಿದಾಗ ಮದುಮಗಳು ತಾನು ಅದನ್ನೇ ಹೇಳಬೇಕೆಂದಿದ್ದೆ, ಎಂದಳು. "ನಿನಗೆ ಮೋಹನ ಮುರಳಿ ಬಿಟ್ಟರೆ ಏನು ಗೊತ್ತುಂಟು?" ಎಂದು ವಚ್ಚಿ, ಕೊಂಕು ನುಡಿದಾಗ ಎಲ್ಲರೂ ಗಹಗಹಿಸಿ ನಕ್ಕರು.

ಶೀನಮಾಮನ ಮೇಲ್ವಿಚಾರಣೆಯಲ್ಲಿ ತಿಂಡಿ ಮಾಡಲು ಪ್ರಾರಂಭಿಸಿದರು. ಮಾಂಡೆ (ಮಂಡಿಗೆ), ನೆವರಿ (ಕರ್ಚಿಕಾಯಿ), ಸಾಠಿ (ಬಾಲೂಷಾ), ಖಿಡಿ (ಬರ್ಫಿ), ಗುಳಿ (ರವೆಲಾಡು), ಬೂಂದಿಲಾಡು, ಸೇವು, ಚೂಡಾ ಮುಂತಾದುವನ್ನು ಸಿದ್ಧ ಮಾಡಿ ದೊಡ್ಡ ದೊಡ್ಡ ಪೀಪೆಗಳಲ್ಲಿ ತುಂಬಿಡಲಾರಂಭಿಸಿದರು. ಸೀಮಂತ ಪೂಜೆಗೆಂದು ಬೃಹದಾಕಾರದ ಲಾಡು, ಚಕ್ಕುಲಿ, ಮಾಂಡೆಗಳನ್ನು ಮದುಮಗಳಿಂದಲೇ ಮಾಡಿಸಿದರು. ಚಿಕ್ಕ ಚಿಕ್ಕ ಹತ್ತು ಕರಚಿಕಾಯಿ ಹೊತ್ತ ದೊಡ್ಡ ದೊಡ್ಡ ಕರಚಿ ಕಾಯಿಯನ್ನು ಕರಿದು ಬರ್ಗಿಯ ಗಂಗಕ್ಕ ಕೈಗೆತ್ತಿಕೊಂಡು "ಇವಳು ಕೃಷ್ಣಾಬಾಯಿ, ಮುಂದೆ ಹತ್ತು ಮಕ್ಕಳ ತಾಯಿ" ಎಂದಾಗ ಎಲ್ಲರೂ ನಕ್ಕದ್ದೇ.

ಶಿವ ಭಂಡಾರಿಯ ಪಂಚ ವಾದ್ಯಗಳು ಮೊಳಗುತ್ತಿದ್ದಾಗ, ಗರ್ನಾಲುಗಳು ಸಿಡಿಯುತ್ತಿದ್ದಾಗ ನಾಲ್ಕಾಳು ಹೊತ್ತ ಮೇಣೆಯಲ್ಲಿ ಮೋಹನನು ರಾಜಠೀವಿಯಿಂದ ಬಂದು ಇಳಿದನು. ಸುಮಂಗಲೆಯರು ಕುಂಕುಮದ ನೀರಿನಿಂದ ದೃಷ್ಟಿ ಪರಿಹಾರ ಮಾಡಿ ಹಾಡಲಾರಂಭಿಸಿದರು:

**ಧನಧಾನ್ಯ ಮಸ್ತ, ಜಾಲ್ಯಾರ್ ಬರಿ ದೃಷ್ಟಿ**
**ಲಾಗನಯ ಹೊರ್ರೈತಾಕ ಆಯಿಲ್ ಗೆಲ್ಯಾಲ್ ದೃಷ್ಟಿ**

ತನ್ನ ಸೋದರ ಮಾವ ಎಷ್ಟೊಂದು ಸುಂದರನಾಗಿ ಕಾಣುತ್ತಾನೆಂದು ಮೋಹಿನಿ ಬಾಳಗಿ ವೋವಿಯ ರೂಪದಲ್ಲಿ ಹೇಳಿದಳು:

**ಹೊನ್ನಾವರ ತೆರಾಚೇರಿ ಶೋಭತಾ ಸೀತಾರಾಮ**
**ಹೊರ್ರೈತ ಜಾವ್ನು ಶೋಭತಾ ಆಮಗೆಲ್ ವೋಹನಮಾಮ**

ವರನ ಕಡೆಯ ಪುರೋಹಿತರಿಗೆ ಸಿಕ್ಕಿದ್ದೆಲ್ಲ ದೋಚಿಕೊಳ್ಳುವ ಹವ್ಯಾಸ, ಇದನ್ನು ಖಂಡಿಸಿ ನೀಲಕೋಡ ಏಸಕ್ಕಳಿಗೆ ಹಾಡಿನ ಏಟು ಹಾಕದೇ ಇರಲಾ ಗಲಿಲ್ಲ.

**ಬಾಯಲೆಕ ಸದಾಯ ಜಾಯ್ ಫೊವಾಲಿ ರಕ್ಷಣಾ**
**ಆಪಾಭಟ್ಯಾರ ಉಟ್ಲಾರ್ ಬಸಲ್ಯಾರ್ ಜಾಯಿ ದಕ್ಷಿಣಾ**

ಇದರಿಂದ ಭಟ್ಟರು ನೊಂದುಕೊಳ್ಳಬಾರದೆಂದು ಯಜಮಾನತಿ ಅವರಿಗೆ ಭರ್ಜರಿಯಾಗಿ ತಿಂಡಿತೀರ್ಥಗಳನ್ನು ಒದಗಿಸಿದ್ದರಿಂದ ಅವುಗಳಲ್ಲಿಯೇ ಮೈಮರೆ ಯುವಂತೆ ಆಯಿತು.

ವಿವಾಹದ ದಿನ, ನಸುಕು ಹರಿಯುವ ಮೊದಲೇ ಮದುಮಗಳಿಗೆ ಅಭ್ಯಂಜನ ಸ್ನಾನ ಮಾಡಿಸಿದರು. ಅದಾಗಲೇ ಪ್ರಾರಂಭವಾಗಿದ್ದ ಮಂಗಳ ವಾದ್ಯ, ಊರವರಿಗೆಲ್ಲ ಆಮಂತ್ರಣ ನೀಡಿತು. ಮಲ್ಲಿಗೆ, ಜಾಜಿ, ಸೇವಂತಿಗೆ, ಕನಕಾಂಬರ ದಂಡೆಗಳನ್ನು ಮುಡಿದು, ಆಕರ್ಷಕ ಬಣ್ಣಗಳ ಕಲಾಪತ್ತಿನ ರೇಶ್ಮೆ ಸೀರೆಗಳನ್ನು ಉಟ್ಟು, ಕಿವಿ, ಕೊರಳು, ತೋಳು, ಕೈಗಳಿಗೆ ರಾಶಿ ಆಭರಣಗಳನ್ನು ತೊಟ್ಟು ಬರುತ್ತಿದ್ದ ಲಲನೆಯರನ್ನು ನೋಡುತ್ತಿದ್ದಂತೆ ಅವರೆಲ್ಲ ದೇವಲೋಕದ ಅಪ್ಸರೆಯರಂತೆ ಕಂಡರು. ಆಗಂತುಕರೆಲ್ಲ ವಿವಿಧ ಕೆಲಸಗಳನ್ನು ಹಂಚಿಕೊಂಡು ಕಾರ್ಯೋನ್ಮುಖರಾದರು. ಕಲಾತ್ಮಕವಾಗಿ ರಂಗೋಲಿ ಹಾಕಿ, ಅದರ ನಡುವೆ ಅಲಂಕೃತವಾದ ಬೀಸುವ ಕಲ್ಲನ್ನು ಸ್ಥಾಪಿಸಿ ಉದ್ದು ಬೀಸುತ್ತ ಮಂಗಲ ಕಾರ್ಯಕ್ಕೆ ನಾಂದಿಯನ್ನು ಹಾಡಲಾರಂಭಿಸಿದರು:

**ದಾಂತೆ ಮಾಂಡೆಯಾ, ಉಡಿದು ಭರಡಯಾ**
**ದೇವಾನ ಕರಕಾದಯಾ ಕಾರಣೂಕ್**

ಯಾವ ಅಡೆತಡೆಗಳಿಲ್ಲದೇ ಸಮಾರಂಭ ಸಾಂಗವಾಗಿ ನಡೆಯಲೆಂದು ಗಣಪತಿ ದೇವನ ನೆರವನ್ನು ಕೋರಿದರು.

**ನವೆ ಘರಾಂತ ಜಾವಂಚೆ ಪೈಲೇಚೆ ಲಗ್ನ**
**ಗಣಪತಿ ದೇವಾ, ದೂರಕರಿ ಸರ್ವ ವಿಘ್ನ**

ಒಂದೊಂದೇ ವಿಧಿ ಪ್ರಾರಂಭವಾದಾಗ, ಹೆಂಗಳೆಯರೆಲ್ಲ "ವೋವ್ಯೋ" ಪೋಣಿಸಿ ಪೋಣಿಸಿ ಹಾಡುವ ಸ್ಪರ್ಧೆಯೂ ತುರುಸಿನದಾಯಿತು. ಯಜಮಾನಿಯ ಬೆಲೆ ಬಾಳುವ ಸೀರೆಯಿಂದ ಹೊಟ್ಟೆಕಿಚ್ಚು ಪಟ್ಟ ಪಾರ್ವತಕ್ಕ ಚುಚ್ಚುವಂತೆ ಹಾಡಿದಳು:

**ಚಾರಶಾ ಕಾಪಡ ನಾಕ್ ವ್ಹಣು ಪಾಂಯಶಾಚೆ ನೆಸಲಾ**
**ಹೊರ್‍ಯೆತಾಲಿ ಆಮ್ಮಾ ರಾಣೀ ಐಟೇನ್ ಬಸಲಾ**

ಎಲ್ಲ ಚಟುವಟಿಕೆಗಳತ್ತಲೂ ಲಕ್ಷ ಪೂರೈಸುತ್ತಿದ್ದ ಯಜಮಾನನಿಗೂ ವೋವಿಯ ಉಡುಗೊರೆ ಸಂದಿತು:

**ರಶ್ಯಾಚಾ ರಾನ್ನಿರಿ ಭಾಚ್ಚಾ ಘೂಲಾ ಪೊಳೊ**
**ಚಾರಿ ದಿಕಾನ ದೊಳೊ ಹೊರ್‍ಯೆತಾ ಬಾಪಸುಕ**

ವರದಕ್ಷಿಣೆಯನ್ನು ತುಸು ಹೆಚ್ಚಾಗಿಯೇ ಲಪಟಾಯಿಸಿದ್ದಾರೆ, ಎಂದು ಗಾಳಿ ಸುದ್ದಿ ಕೇಳಿದ ಮುಗುವೆಯ ಗೌರಕ್ಕ ಹಾಡಿದಳು:

**ಪಟ್ಟ ಭಿತ್ತರಿ ಪಟ್ಟ, ಜಾಯಜಾ ಕಳ್ಯಾ ಪಟ್ಟ**
**ವರದಕ್ಷಿಣಾ ಘೆವಚಾಕ ಘಟ್ಟ ಶೆಣ್ಯೆ ಮಾಮ**

ಸಾಲಂಕೃತಳಾಗಿ ಸುಂದರಿಯಾಗಿ ತೋರುತ್ತಿದ್ದ ಮದುಮಗಳನ್ನು ಸೋದರಮಾವ ಮಂಟಪಕ್ಕೆ ಕರೆತಂದಾಗ ವೋವಿ ಹೊಮ್ಮಿತು:

ಝುರೆಚೆ ಕಾಪಡ ದೆಗೆನ ಬಾರೀಕ
ಕೃಷ್ಣಾಬಾಯಿ ಮಳ್ಯಾರಿ, ರೂಪ್ಪಾನ ಮಾಣಿಕ

ಚೆನ್ನಾಗಿ ಪರೀಕ್ಷಿಸಿ ಮಾಡಿಕೊಂಡ ಹುಡುಗಿ ಅದೆಷ್ಟು ಉತ್ತಮ ಸೊಸೆಯಾಗ ಬಲ್ಲಳು, ಎಂದು ಅತ್ತೆಗೆ ತಿಳಿಹೇಳುವ ವೋವಿ:

ಪಾನ್ನಾರಿವಾಡಿಲ್ ಪೆಜ, ಜವಚಾ ಗೆಲ್ಯಾರಿ ಹೂಣ್
ಪದ್ಮಾವತೀನ ಹಾಡಚಿ; ಅರ್ತಿಚೀ ಸೂಣ್

ವಧುವಿಗೆ ತಂದ ಬಂಗಾರದ ಸೊಂಟಪಟ್ಟಿ (ಡಾಬು) ವಿವರ ತಿಳಿಸಲು ಸಾಲೆರಡು.

ದಾಮ್ ಮಾಮಾನ ದಕ್ಷಿಣೆಕ ದಿಂವಚೊಪ್ಯೆಸೋ ಖೊಟಾ
ಮೂರ್ತಾ ತಳೇರ್ ಮಾತ್ರಹಾಡಚೊ ಭಾಂಗ್ರಾಚೊ ಪಾಟ್ಟೊ

ಮದುಮಗನ ಪಾಲಿಗೆ ಬಂದ ಆಭರಣವೂ ಚಿಕ್ಕದೇನಲ್ಲ:

ಸೋಲ್ಲಾ ಭತರಿ ಸೊಲ ವಟಂಬಾಚಿ ಸೊಲ
ವೊಹನಾಕ ದಿಲಾ ಪಾಂಚಪವನಾಚಿ ಗೊಲ

ಅಳಿಯನ ಆಕಳಿನಂಥ ಸ್ವಭಾವವನ್ನು ವಿವರಿಸುತ್ತ:

ಕಟ್ಯಾ ಪಿಂಪಳಾ ರುಕ್ಯಾ ಪಾನ್ನ ಪಾತಳ
ಹೊರ್‍ಯತ ಗುಣಾನ ಆಸಭಾರೀ ಶೀತಳ

ಇತರರಿಗೆ ಗೊತ್ತಾಗದಂತೆ ವಧು ಕಡೆಗಣ್ಣಿನಿಂದ ಗಂಡನನ್ನು ನೋಡಿ ನಕ್ಕಿದ್ದು ಮುತ್ತೈದೆಯೊಬ್ಬಳ ಕಾಕದೃಷ್ಟಿಗೆ ಗೋಚರಿಸದಿರಲಿಲ್ಲ:

ಆಬೊಲಿ ಚೆ ಫೂಲ ತಾಂಬಡೆ ತಾಂಬಡೆ ದಿಸತಾ
ಘೊವಾ, ಪೊಳೊವ್ನ ಆಮಗೇಲ್ ಕೃಷ್ಣಿ ಹಾಸತಾ

ಮದುವೆಯ ಮುಹೂರ್ತ ಮುಗಿದು, ತನ್ನ ವೋವಿಗೆ ಅವಕಾಶ ಸಿಗಲಿಲ್ಲವೆಂದು ಚಡಪಡಿಸಿದ ಮಾಡಗೇರಿಯ ಶೇವಂತಕ್ಕಳಿಗೆ ದೊಡ್ಡ ಹೊಟ್ಟೆಯ ಭಟ್ಟರೇ ವೋವಿಗೆ ವಸ್ತುವಾದರು:

ಅರ್ತಿಚ್ಯಾ ಸುನೆಕ ಮಾವಾನ ಹಾಡಲಾ ತೊಡೊ
ಆಪಾ ಭಟಾಲ್ ಪೊಟ, ತಾಂದಳಾಚೊ ಮುಡೊ

ಎಲ್ಲದರಲ್ಲೂ ತಲೆ ಹಾಕುತ್ತಿದ್ದ ಅಧಿಕಪ್ರಸಂಗಿ ನಾದಿನಿಯನ್ನು ಮರ್ತೆಕ್ಕಳು ಹಾಡಿ ಹರಸಿದಳು:

**ಆ ಮಗೆಲ್ಯಾ ನವ್ಯಾ ಮಾಡ್ಯಾರುಕಾಕ ಸುಟ್ಲ್ಲಾ ಪಿಸುಂದರ**
**ಕೃಷ್ಣ ಬಾಯಿಲಿ ನಣದ ರಾಂಚ ಕುಡಿ ಧಾವಚಿ ಬೇಚುಂದ**

ಧಾರೆ ಎರೆದ ಅನಂತರ, ನವದಂಪತಿಗಳಿಗೆ ಆತ್ಮೀಯತೆ ಬೆಳೆಯಲೆಂದು ಹತ್ತಾರು ಚಟುವಟಿಕೆಗಳಲ್ಲಿ ತೊಡಗಿಸಿದರು. ಅವುಗಳಲ್ಲಿ ಆಪ್ತೇಷ್ಟರು ಸಕ್ರಿಯವಾಗಿ ಪಾಲುಗೊಳ್ಳುವುದರಿಂದ ಬಿಗಿಯಾದ ವಾತಾವರಣ ತಿಳಿಯಾಗಿ ಸಕಲರೂ ನಗೆ ಗಡಲಲ್ಲಿ ತೇಲಲು ನೆರವಾಗುತ್ತದೆ. ನೀರಿನಲ್ಲಿ ಉಂಗುರ ಮುಳುಗಿಸಿ ಹುಡುಕಲು ಹೇಳಿದಾಗ, ಮದುಮಗನು ಮೃದುವಾದ ಕರಸ್ಪರ್ಶವನ್ನು ಅನುಭವಿಸುತ್ತಿದ್ದಾಗ, ಪತ್ನಿ ಬೇಗನೆ ಉಂಗುರವನ್ನು ತನ್ನದನ್ನಾಗಿ ಮಾಡಿಕೊಂಡುಬಿಟ್ಟಳು. ಅಡಗಿಸಿಟ್ಟ ಪತ್ನಿಯನ್ನು ಹುಡುಕುವ ತೊಂದರೆ ತೆಗೆದುಕೊಳ್ಳದೇ 'ಸೋತೆ' ಎಂದಾಗ, ನೀನೆಂಥ ಗಂಡುಸು ಎಂದು ಹೆಂಗಳೆಯರು ಚುಡಾಯಿಸದೇ ಇರುವುದಿಲ್ಲ. ಮದು ಮಗಳಿಗೆ ಹಣ್ಣು, ಸಿಹಿತಿಂಡಿ ತಿನ್ನಿಸುವಾಗಲೂ ಹಾಡು ಹಾಡಿಸಿಯೇ ಬಿಡುವರು:

**ಮೊಂಟವಾಕ ಬಾಂದಲಾ ಸಾಗವಾನಿ ಎಳೆ**
**ಖಾಗೊ ಕೃಷ್ಣಾಬಾಯ್, ಗೊಡ ಮಿಟಕಾ ಕೆಳೆ**

ಉಂಡಿ ತಿನ್ನಿಸುವಾಗಲೂ ವೋವಿ ಹೇಳಿಯೇ ತೀರಬೇಕು:

**ಮಸ್ನಾತ್ ಆಚಾರ್ಯಾನ ಹಾತ್ತಾ ಧರ್ಲಾವಿಳಿ**
**ಕೃಷ್ಣಿ, ತೊಂಡಾಂತ ಘೆ, ಪ್ರೀತಿಚಿ ಗುಳಿ**

ದೇವರಿಗೆ ಮೀಸಲು ಹೊರಟಾಗ ಬಾಗಿಲು ಅಡ್ಡಗಟ್ಟಿ ನಿಂತು, ತಮ್ಮಾವರ ಹೆಸರು ಹೇಳಿಸುತ್ತಾರೆ. ಪತ್ನಿ ಪತಿಯ ಹೆಸರು ಹತ್ತಾರು ಬಾರಿ ಹೇಳಬೇಕು. ಹೊಸ ವೋವಿ ಹೇಳಬೇಕು:

**ಬಸಚಾಕ ಘಾಲಾ ತಾಂಬ್ಡಿ ಹೋಡ ಮಣಯ್**
**ಮೆಗೆಲ್ ರಾಯಾಲೆ ನಾವ, ಮೋಹನ ಶೆಣೈ**

ಇದಾದ ಅನಂತರ ಪತ್ನಿಯ ಹೆಸರನ್ನು ಪತಿಯಿಂದ ಹೊರ ತರುವುದು ಕಷ್ಟದ ಕೆಲಸವಲ್ಲ.

**ಕೃಷ್ಣಾಲಿ ಭಕ್ತಿಣ, ಸಂತ ಮೀರಾಬಾಯಿ**
**ಮೆಗೆಲಿ ಬಾಯ್ಲ ಹೀ ಚಂದ ಕೃಷ್ಣಾಬಾಯಿ**

ಸಕಲ ಚಟುವಟಿಕೆಗಳನ್ನು ಮುಗಿಸಿ, ಕನ್ನೆಯನ್ನು ಒಪ್ಪಿಸಿ, ಅವಳು ಪತಿಗೃಹಕ್ಕೆ ಹೊರಟು ನಿಂತಾಗ, ಆಗುವ ದುಃಖ ಕಳವಳಗಳಿಗೆ ಕೊನೆಮೊದಲಿಲ್ಲ. ಕಣ್ಣೀರು ಒರಸುತ್ತ ತಾಯಿ ಹಾಡುವಳು:

**ಇತ್ಲೆ ವರ್ಸ ಹೊಡಕೆಲ್ಲೆ ಘೂವಾ ತಾಬ್ಯಾದಿಲೆ**
**ಧೂರ ತೂ ವತ್ತಾ ಧುವೆ, ಆಮಗೆಲೆ ಮನ ಸಾನ ಜಾಲೆ**

ಬಿಕ್ಕುವ ಮಗಳನ್ನು ತಬ್ಬಿಕೊಂಡು ಸಂತೈಸುವ ದನಿಯಲ್ಲಿ

**ಕುಳಾರ ಧೂರ ಮ್ಹಣು ಬೇಜಾರ ಕರೂ ನಾಕಾ**
**ಘೊ ವಾಲ ಪುಣ್ಯಾನ ತುಕಾ ಸುಖ ಮೆಳ್ತಲೆ**

ಕೃಷ್ಣಾಬಾಯಿಯ ಮದುವೆಯಲ್ಲಿ ಆನಂದಿಸಿದಷ್ಟು ಇನ್ನಿತರ ಗೆಳತಿಯರ ವಿವಾಹದಲ್ಲಿ ಸಂತಸಪಡಲಾಗಲಿಲ್ಲ. ಇದಕ್ಕೆ ಮುಖ್ಯ ಕಾರಣ, ನಮ್ಮವರು ತಮ್ಮತನ ಬಿಟ್ಟು ಎಲ್ಲವನ್ನೂ ಯಾಂತ್ರಿಕವಾಗಿ ನಡೆಸಲಾರಂಭಿಸಿದ್ದು. ನಗರದವರು, ಹಾಡು, ಹಾಸ್ಯ-ವಿನೋದಗಳಿಗೆ ವೇಳೆ ಸಾಲದೆಂದರು. ಹೊಸ ಪೀಳಿಗೆಯವರು ಅದೆಲ್ಲ ಬಾದರಾಯಣನ ಕಾಲದ ರೀತಿಯೆಂದರು. ಕೆಲವರು ಇವನ್ನು ತಮ್ಮ ಅಂತಸ್ತಿಗೆ ಕುಂದೆಂದು ಬಗೆದರು. ಹಿರಿಯ ಹೆಂಗಳೆಯರು ಹಾಡಲು ಪ್ರಾರಂಭಿಸಿದಾಗ ಅವರನ್ನು ಗದರಿಸಿ ಬಾಯಿ ಮುಚ್ಚಿಸುವವರನ್ನು ಕಾಣುವಂತೆ ಆಯಿತು. ಎಷ್ಟು ಯತ್ನಿಸಿದರೂ ಕೃಷ್ಣಾಬಾಯಿಗೆ ದೊರೆತಂಥ ಮದುವೆಯ ಸಡಗರ ನನ್ನದಕ್ಕೆ ಮಾಡಲು ಸಾಧ್ಯವಾಗಲೇ ಇಲ್ಲ ಆದರೆ ಇಷ್ಟೊಂದು ಕಳಪೆ ಮದುವೆ ನಮ್ಮವರು ನಡೆಸಬಹುದೆಂದು ಕನಸುಮನಸಿನಲ್ಲಿಯೂ ಎಣಿಸಿರಲಿಲ್ಲ ಎಂದು ಕೊಂಡು ಕನಸಿನ ಲೋಕದಿಂದ ಇಹಲೋಕಕ್ಕೆ ಇಳಿದು ಬರುತ್ತಿದ್ದಂತೆ ಯಾರೋ ಕಿವಿಯಲ್ಲಿ "ಈಗ ವೀಡಿಯೋ ತೆಗೆಯುವ ಕಾರ್ಯಕ್ರಮ ಇದೆಯಂತೆ ಸುಂದರವಾಗಿ ಅಲಂಕರಿಸಿಕೊಂಡು, ಆಕರ್ಷಕ ಸೀರೆ ಉಟ್ಟುಕೊಂಡು ಬರುವಂತೆ ಮಾಮಾ ಸೂಚಿಸಿದ್ದಾರೆ" ಎಂದು ಪಿಸುಗುಟ್ಟಿದಾಗ ಪಿತ್ತ ನೆತ್ತಿಗೇರಿತು. ಊಟಮಾಡಿದೆಯಾ? ಎಂದು ಕೇಳುವ ಸೌಜನ್ಯ, ಒಬ್ಬರಿಗೂ ಇಲ್ಲದಿದ್ದರೂ ಮುಖಕ್ಕೆಲ್ಲ ಬಣ್ಣ ಬಳಿದು ಕೊಂಡು ಯಕ್ಷಗಾನ ಸ್ತ್ರೀವೇಷ ಧಾರಿಣಿಯಂತೆ ಬರಬೇಕಂತೆ. ಇವರ ಧನ, ದೌಲತ್ತು, ಪ್ರತಿಷ್ಠೆಗಳು ನನಗೆ ಬೇಕೂ ಇರಲಿಲ್ಲವೆಂದು ಲಗುಬಗೆಯಿಂದ ನಿವಾಸಕ್ಕೆ ಬಂದು, ಬಟ್ಟೆಬರೆ, ಗಂಟು, ಮೂಟೆ ಕಟ್ಟಿ ಮರು ಪ್ರಯಾಣ ಪ್ರಾರಂಭಿಸಿಯೇ ಬಿಟ್ಟೆ.

ಟಿಪ್ಪಣಿಗಳು :

೧. ಲೇಖನದಲ್ಲಿ ಬರುವ ವ್ಯಕ್ತಿ, ಘಟನೆಗಳೆಲ್ಲ ಕಾಲ್ಪನಿಕ.

೨. ವೋವಿ (ಬಹುವಚನ 'ವೋವ್ಯೊ')ಗಳಿಗೆ ಪ್ರಾಸಕೂಡಿಸುವುದಕ್ಕಾಗಿ, ದಿನಂಪ್ರತಿ ನೋಡುವ, ಅನುಭವಿಸುವ ಘಟನೆಗಳನ್ನು ಆರಿಸಿಕೊಂಡು, ಹೋಲಿಸಿ, ವಿನೋದ, ಹಾಸ್ಯ, ಕೊಂಕು, ಹೊಗಳಿಕೆ, ತೆಗಳಿಕೆಗಳ ಚುಟುಕುಗಳನ್ನು ಜೋಡಿಸುತ್ತಾರೆ. ಹಾಡು ಕಟ್ಟುವವರೆಲ್ಲ ಆಶುಕವಿಗಳು ಎಂಬುದು ಮುಖ್ಯ. ರಾಗಬದ್ಧವಾಗಿ ಹಾಡುವಾಗ, ಮೊದಲನೆಯ ಸಾಲನ್ನು ಎರಡು ಸಲ ಉಚ್ಚರಿಸಿ ಎರಡನೆಯದನ್ನು ಎಳೆದೆಳೆದು ಹಾಡುವುದು ರೂಢಿ. ಇವುಗಳ ಮಾಧುರ್ಯವನ್ನು ಕೇಳಿಯೇ ಸವಿಯಬೇಕು.

೩. ಅಂದಿನ ದಿನಗಳಲ್ಲಿ ಶಾಲೆ, ಕಾಲೇಜುಗಳಲ್ಲಿ ಬಿಗಿಬಿಗಿಯಾದ ಮಗ್ಗಿಗಳನ್ನು ಕಲಿಸುತ್ತಿರಬೇಕು ಎಂಬುದು ನನ್ನ ಭಾವನೆಯಾಗಿತ್ತು!

೪. ಕರ್ನಾಟಕದ ಮಧ್ಯಯುಗದ ಸಾಮಾಜಿಕ ಜೀವನದ ಕುರಿತು ಡಾಕ್ಟರೇಟಿಗಾಗಿ ಅಧ್ಯಯನ ನಡೆಸಿದಾಗ, ಹನ್ನೆರಡನೇ ಶತಕದಲ್ಲಿ ಚಾಲುಕ್ಯ ಅರಸು, ಮುಮ್ಮಡಿ ಸೋಮೇಶ್ವರ ವಿರಚಿತ ಸಂಸ್ಕೃತ ಗ್ರಂಥ 'ಮಾನಸೋಲ್ಲಾಸ'ದಲ್ಲಿ ''ಕರಾವಳಿಯ ಹೆಂಗುಸರು 'ಓವಿ' ಹಾಡುತ್ತ ಬತ್ತ ಕುಟ್ಟುತ್ತಾರೆ'' ಎಂಬ ಉಲ್ಲೇಖ ಓದಿ ಮೋಜೆನಿಸಿತು. ಶತಕಗಳಿಂದ ಹೆಂಗಳೆಯರು ಹಾಡುತ್ತ ಬಂದಿದ್ದ ಸಶಕ್ತವಾಗಿದ್ದ ಒಂದು ಜಾನಪದ ಪ್ರಕಾರ, ನಮ್ಮ ಕಣ್ಣೆದುರಿಗೇ ಕೊನೆಯುಸಿರು ಎಳೆಯುತ್ತಿರುವುದು ಅತ್ಯಂತ ಶೋಚನೀಯ.

---

೧೯೯೮. 'ಮೊಗರ್' - ಮಣಿಪಾಲದಲ್ಲಿ ಜರಗಿದ ಹದಿನೇಳನೆಯ ಕೊಂಕಣಿ ಸಾಹಿತ್ಯ ಸಮ್ಮೇಳನದ ಸವಿನೆನಪಿನ ಸಂಚಿಕೆ, ಸಂ: ಸಂತೋಷಕುಮಾರ ಗುಲ್ವಾಡಿ.

# ಕೊಂಕಣಿ ಕ್ರೈಸ್ತರ ಜಾನಪದ

– ಕ್ಯಾಥರಿನ್ ರಾಡ್ರಿಗಸ್, ಕಟಪಾಡಿ

---

ಕ್ರೈಸ್ತರ ಜನಜೀವನ, ಬದುಕು ವಿಭಿನ್ನ ಸಂಸ್ಕೃತಿಗಳ ಮಿಲನ. ಹಿರಿಯರ ಬಾಯಲ್ಲಿ ಇಂದಿಗೂ ಅಲ್ಪಸ್ವಲ್ಪವೂ ಜೀವಂತವಿರುವ ಹಾಡು ಹಾಗೂ ಕತೆಗಳು, ನಾವು ಹಳ್ಳಿಗಳತ್ತ ಪಾದ ಬೆಳೆಸಿದರೆ ಕೇಳಲು ಸಿಗುತ್ತಿವೆ. ಬದುಕಿನ ಚೌಕಟ್ಟಿನತ್ತ ಬಂದಲ್ಲಿ ಒಂದು ರೀತಿಯಲ್ಲಿ ತಮ್ಮ ಪ್ರಭಾವವನ್ನು ಬೀರಿದ ಈ ವಸ್ತು ನಿರ್ಲಿಪ್ತ ವಾಗಿದೆ. ಬೆಳಕನ್ನು ಚೆಲ್ಲುವವರ ಅಭಾವದಿಂದಲೋ ಅಥವಾ ನಾಗರಿಕತೆಯ ನೆಲೆ ಯಲ್ಲಿ ಯೋಚನಾಮಗ್ನನಾದ ಮಾನವನ ಪ್ರಭಾವದಿಂದಲೋ ಅದಿಂದು ಸೊರಗಿದೆ.

ಕ್ರೈಸ್ತರಲ್ಲಿ, ಹಿಂದೂಗಳಲ್ಲಿದ್ದ ಹಾಗೆ ಪಂಚವರ್ಣಗಳಿರುವ ಸಂಗತಿ ತಿಳಿಯ ದವರೇ ಬಹಳಷ್ಟು ಜನ. ರೋಮನ್ ಕೆಥೋಲಿಕರಲ್ಲಿ ಬಾಮುಣ್, ಚರೊಡಿ, ರೇಂದೆರ್, ಗೌಡಿ ಮತ್ತು ಸೂದಿರ ಎಂದು ಪಂಚವರ್ಣಗಳು ಇತ್ತೀಚಿನ ದಿನಗಳ ವರೆಗೂ ತಮ್ಮ ಕರಾಳ ಹಸ್ತವನ್ನು ಈ ಸಮಾಜ ಬಾಂಧವರ ನಡುವೆ ಚಾಚಿತ್ತು.

ಬಾಮುಣ್ ಅಂದರೆ ಬ್ರಾಹ್ಮಣರಂತೆ. ಅವರ ಹೆಣ್ಣನ್ನು ಬೇರೆ ನಾಲ್ಕು ವರ್ಣದವರಿಗೆ ಮದುವೆ ಮಾಡಿ ಕೊಡ್ತಾ ಇರಲಿಲ್ಲ. ಅವರು ೨ನೇ ವರ್ಣದ ಹೆಣ್ಣನ್ನು ಅನಿವಾರ್ಯ ಸಂದರ್ಭದಲ್ಲಿ ಮದುವೆ ಮಾಡಿಕೊಂಡು ಹೋದರೂ ಅವರನ್ನು ಚೆನ್ನಾಗಿ ನಡೆಸಿಕೊಳ್ತಾ ಇರಲಿಲ್ಲ. ಅಸ್ಪೃಶ್ಯರಂತೆ ಕಾಣ್ತಾ ಇದ್ದರು. ಈ ವರ್ತನೆಗೆ ಕಾರಣವಾದ ಒಂದು ಉಲ್ಲೇಖವು ಜನಪದ ಕತೆಯಲ್ಲಿ ದೊರಕುತ್ತಿದೆ.

೨ನೇ ವರ್ಣದ ಹೆಣ್ಣನ್ನು ಮನೆ ತುಂಬಿಸಿಕೊಂಡ ಮೇಲೆ ಆ ವಂಶದ ಮಗುವೊಂದು ಯಾವಾಗಲೂ ತನ್ನ ಮೊಣಕಾಲನ್ನು ತಿವಿಯುತ್ತಾ, ತಟ್ಟನೆ ಒಂದು ಕಾರ್ಯವನ್ನು ಮಾಡಿಕೊಂಡು ಕೈ ಸುಟ್ಟುಕೊಂಡು ಮತ್ತೆ ಯೋಚಿಸುತ್ತಾ ಇತ್ತು. ಇದೇ ರೀತಿ ಬೆಳೆದು ದೊಡ್ಡವನಾಗಿ ಮಾಡಿದ ಕೆಲಸಕ್ಕೆ ಮತ್ತೆ ಯೋಚಿ ಸುವ ಜಾಯಮಾನವನ್ನು ಬೆಳೆಸಿಕೊಂಡು ಮನೆಗೆ ಹಿಡಿದ ಗೆದ್ದಲಿನಂತಾದನು. ಇದಕ್ಕೆ ಕಾರಣ – ೨ನೇ ವರ್ಣದವರಿಗೆ ಕೆಲಸ ಕೆಟ್ಟ ಮೇಲೆ ಯೋಚಿಸುವ ಬುದ್ಧಿ ಯೆಂಬ ಮಾತು ವಾಡಿಕೆಯಲ್ಲಿತ್ತು. ಇದೇ ಕಾರಣವೆಂದು ಜರೆಯುವ ಪ್ರವೃತ್ತಿ ಹೊಂದಿದ ಈ ಸಮಾಜ ಇಂದಿಗೂ ಅವರನ್ನು ದೂರಕ್ಕೆ ಇಟ್ಟಿದೆ "ಚರೊಡ್ಯಾಂಕ ಪಾಡಿಂ ಬೂದಾ." (೨ನೇ ವರ್ಣದವರಿಗೆ ಹಿಂದೆ ಬುದ್ಧಿ.)

ಹೊಸ ಸಂಸಾರ ಕಟ್ಟುವಾಗ ವಂಶ ಮತ್ತು ಕುಲಕ್ಕೆ ಹೆಚ್ಚಿನ ಗೌರವ. ಇಲ್ಲಿ ಒಂದು ವಿಶೇಷ ಪ್ರತಿಯೋರ್ವನ ಮಾತು ನಡೆನುಡಿಯಲ್ಲಿ ಹತ್ತು ಹಲವಾರು ವ್ಯತ್ಯಾಸ. ಧಾಟಿಯಲ್ಲೂ ಎಳೆದಾಡುವರೆಂಬ ಅಪವಾದ. ಮಾತುಗಳು ಬಹಳಷ್ಟು. ಉಚ್ಚಾರ ಹಾಗೂ ಹೇಳುವಲ್ಲಿ ಹೆಚ್ಚುಕಮ್ಮಿ. ಇದರಿಂದಾಗಿ ಬಾಳುವೆ ಮಾಡಲು ಅಸಾಧ್ಯವೆಂಬ ನುಡಿ. ಮುಖಭಾವದಿಂದಲೇ ಯಾವ ವರ್ಣವೆಂದು ಹೇಳುವ ಶಕ್ತಿಯು ಇದ್ದಿತು. ಗೌಡಿ, ಸೂದಿರ್ ಮತ್ತು ರೇಂದೆರ್ ಇಲ್ಲಿ ಮೇಲಿನ ಎರಡು ವರ್ಣಗಳೊಂದಿಗೆ ಸಂಬಂಧ ಈಗಲೂ ಹಿರಿಯರು ನೋಡುವ ನೆಂಟಸ್ತಿಕೆಗಳಲ್ಲಿ ಆಗುವುದು ಬಹಳ ಅಪರೂಪ.

ನಾನು ಸಣ್ಣವಳಾಗಿರುವಾಗ ನನ್ನಪ್ಪ ಹೇಳ್ತಾ ಇದ್ದ ಮಾತುಗಳಿಗೆ ಸ್ಫೂರ್ತಿ ಕೊಡುವ ಜನಪದ ಸಾಹಿತ್ಯ ಈಗ ನನಗೆ ದೊರಕಿದೆ. ನನ್ನಪ್ಪ ಹೇಳಿದ ಮಾತುಗಳು ನನ್ನ ಮನಸ್ಸಿನ ಮೂಲೆಯಲ್ಲಿ ಪ್ರಶ್ನಿಸುತ್ತಾ ಇದ್ದವು. ಹೀಗೂ ಇರಲು ಸಾಧ್ಯವೇ? ಎಂದು ಕೇಳುತ್ತಲಿದ್ದೆ. ನಮ್ಮ ೫ ವರ್ಣದವರು ಒಂದೇ ಪಂಕ್ತಿಯಲ್ಲಿ ಸಹಭೋಜನ ಮಾಡ್ತಾ ಇರಲಿಲ್ಲವಂತೆ. ಅವರವರ ವರ್ಣಕ್ಕೆ ತಕ್ಕಂತೆ ಊಟಕ್ಕೆ ಪಂಕ್ತಿಗಳನ್ನು ಹಾಕುತ್ತಲಿದ್ದರಂತೆ. ಯಾರೂ ಅಪ್ಪಿತಪ್ಪಿಯೂ ಒಬ್ಬರ ಜೊತೆ ಒಬ್ಬರು ಕುಳಿತುಕೊಳ್ಳಲು ಸಾಧ್ಯವಿರಲಿಲ್ಲವಂತೆ. ನನ್ನಪ್ಪ ೧೦ ವರ್ಷದವರಾಗಿರುವಾಗ ಇಂತಹ ಕಡೆಗೆ ಹೋದಾಗ ಒಬ್ಬ ಹುಡುಗ ತಪ್ಪಿ ಬಾಮುಣ್‌ರವರ ಪಂಕ್ತಿಯಲ್ಲಿ ಕುಳಿತನಂತೆ. ಇದನ್ನು ತಿಳಿದ ಆ ಮನೆಯ ಯಜಮಾನ ಆ ಹುಡುಗನನ್ನು ಊಟದ ಎಲೆಯೊಡನೆ ಹೊರಗೆ ದಬ್ಬಿಬಿಟ್ಟರಂತೆ

ಅಂತಹ ಸ್ಥಿತಿ ಈಗ್ಗೆ ೭ ವರ್ಷಗಳ ಮೊದಲು ಸಿಕ್ಕಿದ ಜನಪದ ಕತೆ (ಗೌಡಾಚೊ ಪೂತ್) 'ಗೌಡನ ಮಗ' ಎಂಬ ಕತೆಗೆ ತಾಳೆಯಾಯ್ತು. ದೂಮಿಂಗ್ ಎಂಬವರ ಮನೆಯಲ್ಲಿ ೭ ದಿನಗಳ ಮದುವೆಯ ಸಂಭ್ರಮ. ಆ ಮದುವೆಗೆ ಅವರ ಮನೆಯಾಳಿನ ಮಗ ಮನೆಯವರ ಕಣ್ಣುತಪ್ಪಿಸಿ ಹೋಗಿ, ಊಟದ ಪಂಕ್ತಿ ಯಲ್ಲಿ ಕುಳಿತ. ಹುಡುಗ ಚೆನ್ನಾದ ಬಟ್ಟೆಯನ್ನೇ ಧರಿಸಿದ್ದ. ಆದರೆ ಅವರಲ್ಲಿ ಊಟದ ಪದ್ಧತಿಯಂತೆ ಮಾಂಸದ ಸಾರಲ್ಲಿ ಹಿಟ್ಟನ್ನು ಕಿವುಚಿ ತಿನ್ನುವುದಂತೆ. ಹುಡುಗ ಮನೆಯಲ್ಲಿ ಕಲಿತ ಪಾಠದಂತೆ ಊಟ ಮಾಡಿದ. ಇದನ್ನು ಅವನ ಬದಿಯಲ್ಲಿ ಕುಳಿತವರು ಕಂಡು ಮನೆಯ ಯಜಮಾನನನ್ನು ಕರೆದು 'ನಮ್ಮ ಕುಲ ಕೆಡಿಸಲು ಕರೆದೆಯಾ? ಶೂದ್ರನೊಂದಿಗೆ ಕುಳ್ಳಿರಿಸಿ ನಮಗೆ ಅವಮಾನ ಮಾಡಿದೆ' ಎಂದಾಗ ಕೋಪಗೊಂಡ ಪರ್ಬು ಹುಡುಗನನ್ನು ನಾಯಿಮರಿಯನ್ನು ಎತ್ತಿದಂತೆ ಎತ್ತಿ ಹೊರಬಿಸಾಡಿದನಂತೆ

ಅಂದರೆ.... ಹಿಂದಿನ ಬದುಕಿಗೂ ನಡೆದು ಬಂದ ಬದುಕಿಗೂ ಏನೋ ಸಂಬಂಧ ಕಲ್ಪಿಸಿಕೊಳ್ಳಲು ಸುಲಭವಾಯ್ತು.

ಸಂಪ್ರದಾಯಗಳತ್ತ ನೋಡಿದರೂ ಆ ನೆರಳಿನ ಕರಾಳಛಾಯೆ ಇರುವುದು ಸುಸ್ಪಷ್ಟ.

ಇಂತಹದೇ ಇನ್ನೊಂದು ಘಟನೆ. ಇತ್ತೀಚೆಗೆ ನಿಧನರಾದ ೯೮ ವರ್ಷದ ಹುಟ್ಟುಕುರುಡಿ ಸೇವ್ಯಾ ಒಂದು ಜಾನಪದದ ಭಂಡಾರ. ಅವರಲ್ಲಿದ್ದ ಅಪೂರ್ವ ಅಣಿಮುತ್ತುಗಳನ್ನು ಕಷ್ಟಪಟ್ಟು ಸಂಗ್ರಹಿಸಿದ್ದೆ. ಆದರೆ, ಕೆಲವೊಂದು ಕಾರಣಗಳಿಂದ ಆ ಸಂಗ್ರಹ ಉಳಿದಿದೆಯೋ ಇಲ್ಲವೋ ತಿಳಿದಿಲ್ಲ. ಉಳಿದರೆ ಅದೊಂದು ಕೊಂಕಣಿ ಜಾನಪದ ಸಾಹಿತ್ಯಕ್ಕೆ ಅಪೂರ್ವ ಸಂಪತ್ತು.

ಅವರದೊಂದು ಕತೆ 'ಗೌಡಿ ಮಾಂಯ್, ಬಾಮುಣ್ ರಾಯ್'. ಈ ಕತೆ ಇಡೀ ಒಂದು ಘಂಟೆಯ ಕ್ಯಾಸೆಟ್ಟಿನಲ್ಲಿ ತುಂಬಿತ್ತು. ಒಂದೂರಿನಲ್ಲಿ ಒಬ್ಬ ರಾಜ. ಅವನಿಗೊಬ್ಬ ಮಗ. ಆ ಮಗನಿಗೆ ಊರಿಡೀ ನೋಡಿದರೂ ಸರಿಯಾದ ಕನ್ಯೆ ದೊರಕದು. ಒಂದು ದಿನ ರಾಜನ ಮಗ ಓರ್ವ ಗೌಡನ ಮಗಳನ್ನು ನೋಡಿ ಅವಳ ಸೌಂದರ್ಯಕ್ಕೆ ಮರುಳಾಗುತ್ತಾನೆ. ಆದರೆ ಈ ಸಂಬಂಧಕ್ಕೆ ತಂದೆ ತಾಯಿ ಒಪ್ಪೊಲ್ಲ ಎಂಬುದು ಮೊದಲೇ ತಿಳಿದ ಸಂಗತಿ. ಅದಕ್ಕಾಗಿ ಹೆತ್ತವರೊಡನೆ ಹೆಣ್ಣಿನ ಕುಲವನ್ನು ಮರೆಸುವ ಉಪಾಯ ತಿಳಿಸಿ ಮದುವೆಯನ್ನು ಮಾಡಿಕೊಳ್ತಾನೆ.

ನಾಲ್ಕನೆಯ ದಿನ ಹೆಣ್ಣಿನ ಮನೆಯಲ್ಲಿ ಬೀಗರೌತಣ. ದುರ್ದೈವವಶಾತ್ ಅಂದೇ ಗೌಡ ಸತ್ತುಹೋಗ್ತಾನೆ. ಇಲ್ಲಿಂದ ಸುದ್ದಿ ಹೋಗುವ ಮೊದಲೇ ಮದುಮಗನ ೧೬ ಜನ ಸ್ನೇಹಿತರು ಹಾಗೂ ಯಜಮಾನರ ೧೬ ಜನ ಸ್ನೇಹಿತರನ್ನು ಕೂಡಿ ಕೊಂಡು ಅರಸನು ಸೊಸೆಯಲ್ಲಿ ಬೀಗರೌತಣದ ರಾತ್ರಿಯ ಊಟಕ್ಕೆ ಬರುವಾಗ ಆಗಷ್ಟೇ ಗೌಡನ ಸಮಾಧಿ ಮಾಡಿಕೊಂಡು ಬಂದು ಅವರಲ್ಲಿದ್ದ ಸಂಪ್ರದಾಯಕ್ಕೆ ಶರಣಾಗಿದ್ದರು. (ಹಿಂದೆ ಬೀಗರೌತಣ ರಾತ್ರಿ ನಡೆಯುವ ಸಂಭ್ರಮ.)

ಬಾಳೆಯ ತುದಿ ಎಲೆಯೊಂದನ್ನು ಹಾಸಿ ಅದರ ಮುಂದೊಂದು ತಂಬಿಗೆ ನೀರು, ಕುಳಿತುಕೊಳ್ಳಲು ದೊಡ್ಡ ಮಣೆ. ಎಲೆಯಲ್ಲಿ ತುಂಬಾ ಅನ್ನ ಅದರ ಮೇಲೆ ಕುಂಬಳಕಾಯಿಗೆ ಸಣ್ಣ ಸಿಗಡಿಯನ್ನು ಹಾಕಿ ಮಾಡಿದ ಪಲ್ಯ ಬಡಿಸಿದೆ. ಬದಿಯಲ್ಲೊಂದು ಗ್ಲಾಸಿನಲ್ಲಿ ಶರಾಬು. ನೆಂಟರಿಷ್ಟರು ಬಂದು ಕೈ ಮುಗಿದು ಮೃತ ಆತ್ಮಕ್ಕೆ ಹೇಳಿಕೊಂಡು ಬೆನ್ನು ತಿರುಗಿಸಿ ಹೊರಟು ಹೋದರು. ಆದರೆ ಮೃತನ ಹೆಂಡತಿ ಸಕಲ ಮುತ್ತೈದೆಯ ಸೊತ್ತುಗಳನ್ನು ಧರಿಸಿ ಅದನ್ನು ಊಟ ಮಾಡಿದಳು. ನಂತರ ಅ ಎಲೆಯನ್ನು ತೆಗೆದು ತನ್ನ ಎಲ್ಲಾ ಅಲಂಕಾರ ತೆಗೆದು ಬಿಳಿ ಸೀರೆ ಯುಟ್ಟು ಮೂಲೆ ಸೇರಿದಾಗ ಅರಸನಿಗೆ ಬಣ್ಣ ಬಯಲಾಗಿ ನಿಂತ ಹೆಜ್ಜೆಯಲ್ಲೇ ಹಿಂತಿರುಗಿದ್ದ.

ಈ ಸತ್ಯ ನಾನು ಮಾಡುತ್ತಿದ್ದ ಕ್ಷೇತ್ರಕಾರ್ಯದಲ್ಲಿ ತಿಳಿಯಿತು. ಈಗಲೂ ಈ ಪಂಗಡದ ಜನರು ಇದೇ ರೀತಿಯಾಗಿ ನಡೆದುಕೊಳ್ತಾ ಇದ್ದಾರೆ.

ಅಷ್ಟೇ ಅಲ್ಲದೆ ಅವರ ಆಚರಣೆಗಳು ವಿಭಿನ್ನತೆ ಪಡೆದುಕೊಂಡದ್ದು ತಿಳಿಯಿತು. ಇಂತಹ ವ್ಯಾಖ್ಯೆಯನ್ನು ಕಂಡಾಗ ನಮಗಿರುವ ಆ ಹಿನ್ನೆಲೆಯ ಬಗ್ಗೆ ತಲೆಕೆಡಿಸಿಕೊಳ್ಳುವ ಪ್ರಮೇಯವು ಬಂದಿಲ್ಲ. ಕ್ರೈಸ್ತ ಜನಾಂಗದ ಆಚಾರವಿಚಾರಗಳ ಹಿನ್ನೆಲೆ ಬಹಳಷ್ಟು ಪುರಾತನ. ಅದರ ಎಳೆಗಳು ಒಂದಿಲ್ಲ ಒಂದು ರೀತಿಯಲ್ಲಿ ನಮ್ಮ ಜೀವನದಲ್ಲಿ ಹಾಸುಹೊಕ್ಕಿವೆ. ಕೆಲವೊಮ್ಮೆ ಅದನ್ನು ಹೀಗಳೆದರೂ ಮತ್ತೊಮ್ಮೆ ಅದರ ದೃಢತೆಯ ಚೌಕಟ್ಟಿನೊಳಗೆ ನುಸುಳಿದಾಗ ನಮ್ಮಲ್ಲಿರುವ ಅದೇನೋ ಕಾಣದ ಕೈಯ ಶಕ್ತಿಯ ಬಗ್ಗೆ ಹೆಮ್ಮೆ ಎನಿಸುತ್ತದೆ.

ಮದುವೆಯನ್ನು ಮಾಡಿಸುವಾಗ ಹೆತ್ತವರ ಕಾಲಿನ ೭ ಜೊತೆ ಚರ್ಮ ಕಿತ್ತು ಹೋಗುತ್ತಲಿತ್ತು. ಇದು ಹೆಣ್ಣಿಗೆ ಗಂಡನ್ನು ಹೊಂದಿಸಿಕೊಡುವಾಗ ಎದ್ದೇಳುವ ಸಮಸ್ಯೆ. ಇದಕ್ಕೂ ಪೂರ್ವ ಹಿನ್ನೆಲೆ ದೊರಕಿದೆ. 'ಬೆಕ್ಕು ಮತ್ತು ಅಜ್ಜ' (ಮ್ಯಾಜಿರ್ ಆನಿ ಆಜಿ) ಎಂಬ ಕತೆಯಲ್ಲಿ ೪ ಅಣ್ಣಂದಿರ ಒಬ್ಬಳೇ ತಂಗಿಗೆ ಹುಡುಗನನ್ನು ಹುಡುಕಿ ಹುಡುಕಿ ಸೋತರು. ಅವರಲ್ಲಿದ್ದ ಒಂದೇ ಒಂದು ಕುಂದು ಎಂದರೆ, ಹುಡುಗಿಯ ತಂದೆಗೆ ಕುಷ್ಠ ಹಿಡಿದಿತ್ತು. ಈ ಬಗ್ಗೆ ತಿಳಿದ ಅದೇ ಊರಿನ ಇನ್ನೋರ್ವ ವ್ಯಕ್ತಿ ಅವರ ವಂಶದ ಬಗ್ಗೆ ಮಸಿ ಪಚ್ಚುವ ಬಗ್ಗೆ ತಿಳಿಯದೆ ವ್ಯಥಿತರಾದ ಮನೆಯವರು ನಿಟ್ಟುಸಿರುಬಿಡುವಾಗ ಹುಡುಗಿ ನಾಗರ ಹಾವಿಗೆ ಗಂಡನೆಂದು ಒಪ್ಪಿಕೊಳ್ಳುವುದು, ಇವೆಲ್ಲಾ ಯೋಚನೆಗೆ ಗುರಿ ಪಡಿಸುವ ವಿಚಾರಗಳು.

ಮದುವೆಯ ಹೊತ್ತಲ್ಲಿ ಈಗಲೂ ಬರುವ ಹೊರೆ ಕಾಣಿಕೆಗಳ ಸಾಲು, ಮದುವೆ ನಿಶ್ಚಯದಲ್ಲಿ ವೀಳ್ಯದ ಬದಲಾವಣೆಗೆ ತಂದೆ ತಾಯಿಯವರ ೭ ತಲೆಮಾರುಗಳ ಅಂತರದ ಸಂಬಂಧ ಮಾಡುವಿಕೆ, ಊರೆಲ್ಲಾ ನಿಶ್ಚಯದ ಬಗ್ಗೆ ಹೇಳಿಕೆ. ಮೂರು ವಾರಗಳಲ್ಲಿ ಪ್ರತಿ ಭಾನುವಾರ ಹೆಣ್ಣು, ಗಂಡಿನ ಸಂಪೂರ್ಣ ವಿವರ ತಿಳಿಸಿ ಏನಾದರೂ ಅಡಚಣೆಯಿದ್ದರೆ ಚರ್ಚಿನ ಹಿರಿಯರಿಗೆ ತಿಳಿಸಬೇಕೆಂಬ ಹೇಳಿಕೆ.

ಮದುವೆ ಮೊದಲ ದಿನ ಹೆಣ್ಣಿನ, ಗಂಡಿನ ಮುಗ್ಧತೆಯನ್ನು ತೊಳೆದಿಟ್ಟು ಸ್ತ್ರೀಯಾಗಿ ಪುರುಷನಾಗಿ ಇನ್ನೊಂದು ಕುಟುಂಬವನ್ನು ಬೆಳಗಿಸಲೆಂದು ಎಣ್ಣೆ ಹಾಗೂ ತೆಂಗಿನ ಹಾಲಿನಿಂದ ಶುದ್ಧಿಗೊಳಿಸಿ ಬಿಸಿನೀರ ಸ್ನಾನವನ್ನು ಮಾಡಿಸುವ ಪದ್ಧತಿ. ಇಲ್ಲೊಂದು ಮಾತು. ವಿಧವೆಯರಿಗೆ ಇಲ್ಲಿ ಮುಂದಕ್ಕೆ ಬರುವಂತಿಲ್ಲ. ಆ ಹೊತ್ತಲ್ಲಿ ಹಿರಿಯ ಮುತ್ತೈದೆಯವರ ಬಾಯಿಯಿಂದ ಜನಪದ ಹಾಡುಗಳ ಸುರಿಮಳೆ. ಅದರಲ್ಲೊಂದು ತುಣುಕು.

**"ಹಾಡ್ ಕುಂಬಾರ ಹಾಡ್ ಆಂವೆತು ಭಾಣ್ ಆಜ್ ನ್ಹಾತಾಂ ನಾಣ್ ವ್ಹಕಾರ್ ವ್ಹೊರೆತ್ ಆಂಕ್ವಾರ್ ವ್ಹೊಣ್"**

ತಾ ಕುಂಬಾರನೇ ತಾ ಕುಲುಮೆಯಲ್ಲಿ ಬೆಂದ ಹರಿಗೆಯನ್ನು ಇಂದು ಮಿಯ್ತ್ತಾನೆ(ಳೆ) ಸ್ನಾನ ಮದುಮಗ (ಮದುಮಗಳು) ಬ್ರಹ್ಮಚರ್ಯದ ಸ್ನಾನ. ನೆಂಟರಿಷ್ಟರು ಹಚ್ಚುವ ಆ ಅಪ್ಪಟ ಹಾಲಿನಷ್ಟು ಪರಿಶುದ್ಧವಾಗಿದೆ ಈ ಜನಪದದ ಹಾಡಿನ ಸೊಬಗು. ಮದುಮಗಳನ್ನು ಮರುದಿನ ಒಪ್ಪಿಸಿಕೊಡುವ ತನಕ ಜನ ಪದದ ಆ ಹಾಡುಗಳಾದ ವ್ಹೊವಿಯೊ ವೇರ್ಸ್ ಒಂದು ಅಪೂರ್ವ ಸಂಪತ್ತು. ಇಲ್ಲಿರುವ ಭಾಷಾ ಸಂಪತ್ತು ಬೆಲೆ ಕಟ್ಟಲಾಗದು. ಪ್ರತಿಯೊಂದು ಸಂದರ್ಭದಲ್ಲೂ ನಮ್ಮಲ್ಲಿ ಹಿಂದಿದ್ದ ಸಂಸ್ಕೃತಿಗೆ ಕನ್ನಡಿ ಹಿಡಿದಂತಾಗುತ್ತೆ. ಪ್ರೀತಿ, ವಾತ್ಸಲ್ಯ, ಮಮತೆ ಸ್ನೇಹ ಸೌಹಾರ್ದತೆಯ ವಿಶಾಲತೆಗೆ ಕುಂದಿಲ್ಲ.

ಅಷ್ಟೇ ಅಲ್ಲದೆ ಅಂದಿನ ದಿನಗಳ ಆ ಗುಮ್ಮಟದ ಹಾಡುಗಳು ನಮ್ಮಲ್ಲಿನ ಇನ್ನೊಂದು ಸಂಕಲನ. ಆ ಹಾಡುಗಳು ಜನಪದದ ಸೊಗಡಿನೊಂದಿಗೆ ಬೈಬಲಿನ ಕಥೆಗಳನ್ನು ಹೇಳುತ್ತವೆ. ಆ ಹಾಡುಗಳಲ್ಲಿ ಧ್ವನಿತವಾಗುವ ಏರಿಳಿತ, ಆ ಧ್ವನಿಗೆ ಜೋಡಣೆಯಾದ ಪದ ಸಂಪತ್ತು, ಧ್ವನಿ ಏರಿಸಿ ಆಡುವ ಉಳಿದವರ ಸೊಂಟ ಕುಣಿತ ಇಡೀ ಮದುವೆಯ ಮಂಟಪ ಹುಚ್ಚೆಂದು ಕುಣಿಯುತ್ತಲಿತ್ತು. ಪೊಲ್ಕ, ಬೈಲಾಗಳೆಂಬ ಹೆಸರನ್ನಿರಿಸಿಕೊಂಡ ಆ ಕುಣಿತದಲ್ಲೂ ಒಂದು ಹಿತಮಿತವಾದ ನಾಟ್ಯ. ಆ ಹೆಜ್ಜೆಗಳ ಕುಣಿತಕ್ಕೆ ಸರಿಯಾಗಿ ಎದ್ದೇಳುವ 'ವ್ವಾವ್ವಾ' ಎಂಬ ಉದ್ಗಾರ ಇವೆಲ್ಲಾ ಹೆಚ್ಚಾಗಿ ಮದುವೆಯ ಮನೆಯಲ್ಲಿ ಊಟ ಕಡಿಮೆ ಬಿದ್ದಾಗ ಚಾಣಾಕ್ಷ ಹಿರಿಯರು ಒಂದುಗೂಡಿಸುತ್ತಲಿದ್ದರು. ಅಂದರೆ ಇಲ್ಲಿ ಅಡಿಗೆ ಕಡಿಮೆಯಾಗಿ ನೆಂಟರಿಷ್ಟರು ದೂರುವಂತೆ ಆಗದಂತೆ ಎಲ್ಲವನ್ನೂ ನಿಯೋಜಿ ಸುತ್ತಲಿದ್ದರು. ಬಂದವರಿಗೆ ಇದೊಂದು ಮನರಂಜನೆಯಾಗಿ ಅವರು, ಆದರಲ್ಲಿಯೇ ಮಗ್ನರಾಗಿರುತ್ತಿದ್ದರು. ಅಡಿಗೆ ತಯಾರಾಗಿ ಪಂಕ್ತಿ ಹಾಕುವಾಗಲೇ ನೆರೆದವರಿಗೆ ಹಸಿವಿನ ಗೋಚರ ಅಂದರೆ, ಆ ಹಾಡುಗಳಿಗೆ ಅಷ್ಟೊಂದು ಆಕರ್ಷಿಸುವ ಶಕ್ತಿ ಆದರೆ ಇಂದು ಆ ಮಾಧ್ಯಮ ಸಂಪೂರ್ಣ ನಶಿಸಿ ಹೋಗಿದೆ. ಗುಮ್ಮಟ ನಮ್ಮ ವಾದ್ಯವಾಗಿತ್ತು ಎಂಬುದೇ ನಮಗೆ ತಿಳಿದಿಲ್ಲ. ಅದು ಅವರಿವರ ವಾದ್ಯವೆಂದು ಹೇಳಿಕೊಳ್ತಾಯಿದ್ದೇವೆ.

ಕ್ರೈಸ್ತರಲ್ಲಿ ಮಡಿ ಮೈಲಿಗೆ ಇಲ್ಲವೆಂದು ಹೇಳಿಕೊಳ್ತಾಯಿದ್ದೇವೆ. ಆದರೆ ಇದು ಸತ್ಯಕ್ಕೆ ದೂರವಾದ ವಿಚಾರ. ಅವರಲ್ಲಿ ಈಗಲೂ ಓರ್ವ ಬಾಣಂತಿಯು ೪೦ ದಿನಗಳಾಗದೆ ಚರ್ಚಿಗೆ ಅಥವಾ ಬೇರೆಲ್ಲೂ ಹೋಗಲಾರಳು. ಮೊದಲು ಅವಳು ಹೋಗುವುದೇ ಚರ್ಚಿಗೆ. ಅಂದು ಶುದ್ಧಳಾಗಿ ತನ್ನ ಕಾಣಿಕೆಯನ್ನು ಅರ್ಪಿಸುವಳು. ಇತ್ತೀಚೆಗೆ ಮಗುವಿಗೆ ಇದೇ ದಿನ ಹೆಸರಿಟ್ಟು ತೊಟ್ಟಲಿಗೆ ಹಾಕುವ ಶಾಸ್ತ್ರವನ್ನು ಮಾಡ್ತಾರೆ. ಆದರೆ ೧೦-೧೨ ವರ್ಷಗಳ ಮೊದಲು ೧೬ನೇ ದಿನ ಮಗುವಿಗೆ ಚರ್ಚಿಗೆ ಕೊಂಡೊಯ್ದು ನಾಮಕರಣ ಮಾಡಿ ಅದೇ ದಿನ ಮಗುವಿನ

ಅಪ್ಪನ ಮನೆಯವರ ಉಪಸ್ಥಿತಿಯಲ್ಲಿ ಮಗುವಿಗೆ ತೊಟ್ಟಿಲಿಗಿಡುವ ಶಾಸ್ತ್ರವನ್ನು ಪೂರೈಸುತ್ತಲಿದ್ದರು.

ಅಂದೇ ಬಾಣಂತಿಗೆ ಮಾಡಬೇಕಾದ ಎಲ್ಲಾ ಮದ್ದುಗಳನ್ನು, ಹಾಗೂ ಅವಳಿಗೆ ಪುಷ್ಟಿಯಾಗಲು ಬೇಕಾಗಿರುವ ಸಾಮಗ್ರಿಗಳನ್ನು ಹೊರೆಸಿ ತವರಿಗೆ ತರುತ್ತಲಿದ್ದರು. ಜನಪದ ಕತೆಯೊಂದರಲ್ಲಿ, ಹೆಂಡತಿಯ ಮೇಲೆ ಪ್ರೀತಿಯಿದ್ದ ಗಂಡ ಅವಳಿಗೆ ದೊಡ್ಡ ಮದ್ದು (ಕೊಂಕಣಿಯಲ್ಲಿ – ತಿಕ್ಲೆ) ತಯಾರಿಸಲು ಅಂಗಡಿ ಅಂಗಡಿಗೆ ಹೋಗಿ ೧೦ ವರಂತಗಿನ ಸೊತ್ತುಗಳನ್ನು ಇಬ್ಬರು ಆಳುಗಳ ಹತ್ತಿರ ಕಳುಹಿಸಿ ಕೊಡುವನು. ಆದರೆ ಸೊಸೆಯ ಮೇಲೆ ಉರಿ ಕಾರುತ್ತಲಿದ್ದ ಅತ್ತೆ ಅದರಲ್ಲಿ ಕನ್ನಡಿಹಾವಿನ ಕೊಬ್ಬನ್ನು ತುಪ್ಪದೊಡನೆ ಬೆರಸಿ ಕಳುಹಿಸುವಳು. ಮದ್ದನ್ನು ತಯಾರಿಸಲು ತಾಯಿ ಹೊರಟಾಗ ಬೆಕ್ಕೊಂದು ಬಂದು ಆ ತುಪ್ಪದ ಪಾತ್ರೆಯತ್ತ ಹಾರುವುದು. ಕೈಯಲ್ಲಿದ್ದ ತುಪ್ಪ ಕೆಳ ಚೆಲ್ಲುವುದು. ಕೋಪಗೊಂಡ ಅವಳು ಅದಕ್ಕೆ ಹೊಡೆಯಲೆಂದು ಕೋಲು ಹಿಡಿದು ಬರುವಾಗ ತುಪ್ಪವನ್ನು ನೆಕ್ಕಿದ ಬೆಕ್ಕು ವಿಲವಿಲನೆ ಒದ್ದಾಡುತ್ತಿರುವುದು. ಒಂದಿಷ್ಟು ಹೊತ್ತಲ್ಲಿ ಅದು ಒಡತಿಯನ್ನು ನೋಡುತ್ತಾ ಸತ್ತಾಗ ಮೋಸ ತಿಳಿದು ಮಗಳ ಪ್ರಾಣವನ್ನು ಕಾಪಾಡಿದ ಬೆಕ್ಕಿಗಾಗಿ ಕಣ್ಣೀರು ಹಾಕುವಳು.

ಇಂದಿಗೂ ಕೆಲವೊಂದು ಈ ಸಂಪ್ರದಾಯಗಳು ನಮ್ಮೊಳಗೆ ಜೀವಂತ ವಾಗಿವೆ. ಮಗು ಹುಟ್ಟಿದ ಸುದ್ದಿಯನ್ನು ಹೊತ್ತುಕೊಂಡು ಹೋದ ಮಾವನಿಗೂ ದೊಡ್ಡ ಕಾಣಿಕೆ. ಇಲ್ಲೂ ಹಿನ್ನೆಲೆ ಸ್ಪಷ್ಟ. ಮಾವನಿಗೆ ಶಾಲು ಹಾಕಿ ಸನ್ಮಾನಿಸಬೇಕೆಂದು ಹೇಳುತ್ತದೆ. ವಂಶದ ಕುಡಿ ಬೆಳೆದು ವಂಶವನ್ನು ಮುಂದುವರಿಸುವ ಮುಂಚೂಣಿ ತೊಟ್ಟವರಿಗೆ ಸನ್ಮಾನಿಸಲೇಬೇಕೆನ್ನುತ್ತಿವೆ ಕಳೆದ ದಿನಗಳು. ಇಲ್ಲೂ ಅವಮಾನ ಮಾಡಿದರೆ ವಂಶಕ್ಕೆ ಕುಂದೆಂದು ಸಾರುತ್ತಿದೆ. ಆದುದರಿಂದ ಇಂದಿಗೂ ಹೊಸ ಜೀವಿಯ ಬಗ್ಗೆ ಹೇಳುವ ಹಕ್ಕು ಮಾವನಿಗೆ ಸಂದಿದೆ.

ಹುಟ್ಟು ಮತ್ತು ಮದುವೆಯಲ್ಲಿ ಮಾತ್ರವಲ್ಲ ಸತ್ತಲ್ಲೂ ಬಿಡೋಲ್ಲಾ. ಇಲ್ಲಿರುವ ಜಾನಪದ ನೆರಳಲ್ಲಿ ಅದು ನಿಜ. ಜೀವವೊಂದು ಹೊರಟ ಕ್ಷಣ ಮಾಡಿಟ್ಟ ಎಲ್ಲಾ ಪದಾರ್ಥಗಳು ಅಶುದ್ಧ ಹೊರ ಚೆಲ್ಲಲೇಬೇಕು. ಹೆಣ ಎತ್ತುವ ತನಕ ಬೆಂಕಿ ಹೊತ್ತಿಸುವಾಗಿಲ್ಲ. ಗುಡಿಸಿ ಒರಸುವಂತಿಲ್ಲ. ದೇವರ ಧ್ಯಾನ, ಮೃತರ ಆತ್ಮಕ್ಕೆ ಶಾಂತಿಯನ್ನು ಕೋರುವ ದೇವಸ್ತುತಿಗಳು ಮಾತ್ರ ಕೇಳಿಸುವುವು. ಮೃತ ಶರೀರವನ್ನು ಮಣ್ಣುಮಾಡಿ ಬಂದ ನಂತರ ಎಲ್ಲಾ ಕುಟುಂಬದ ಸದಸ್ಯರು ಒಂದಾಗಿ ಆ ಮನೆಯವರಿಗೆ ಸಾಂತ್ವನ ನೀಡಬೇಕು. ಹಾಗೂ ಕುಟುಂಬದ ಸ್ತ್ರೀಯರು ಅಂದು ಮಾಡಿದ ಗಂಜಿಂಸು ತಿಳಿಯನ್ನು ಒಂದು ಚಮಚೆಯಷ್ಟಾದರೂ

ಸೇವಿಸಲೇಬೇಕು. ಇದನ್ನು ತಿರಸ್ಕರಿಲೇಬಾರದು. ಇದನ್ನು ಬಿಟ್ಟುಬಂದಲ್ಲಿ ಅವರ ಕುಟುಂಬ ಒಂದಾಗಿಲ್ಲ ಎನ್ನುವುದು ಸ್ಪಷ್ಟ. ವೈಷಮ್ಯಕ್ಕೆ ಕನ್ನಡಿ ಹಿಡಿದಂತಾಗುತ್ತೆ. .

ಇಲ್ಲೊಂದು ಸ್ಪಷ್ಟನೆ. ಹಿಂದೆ ಸತ್ಯದ ಆ ಕಾಲದಲ್ಲಿ ಇಬ್ಬರು ಅಣ್ಣ ತಮ್ಮಂದಿರಿದ್ದರು. ಹಿರಿಯರ ಪಾಲಿನಲ್ಲಿ ತಕರಾರು ಎದ್ದು ಇಬ್ಬರೊಳಗೂ ವೈರ ಬೆಳೆಯಿತು. ಒಬ್ಬರ ಅಂತ್ಯಕ್ಕೆ ಮತ್ತೊಬ್ಬರು ಕಾಯುವ ಪರಿಸ್ಥಿತಿ ಕೂಡಿತು. ತಮ್ಮನ ಮಗ ಇದ್ದಕ್ಕಿದ್ದಂತೆ ಸತ್ತು ಹೋಗಿ ಅಣ್ಣಾ... ತಾನು ಒಳ್ಳೆಯವರೆಂದು ತೋರಿಸಲು ಮಣ್ಣು ಮಾಡುವ ಕಾರ್ಯದಲ್ಲಿ ಸಕ್ರಿಯವಾಗಿ ಭಾಗವಹಿಸಿದ. ಆದರೆ ಸಾವಿನ ಗಂಜಿಯಲ್ಲಿ ಪಾಲ್ಗೊಳ್ಳದೆ ತಮ್ಮನಿಗಾದ ನಷ್ಟಕ್ಕೆ ಸಂತೋಷಪಟ್ಟು ಸಂತೋಷಕೂಟ ಏರ್ಪಡಿಸಲು ಸಾಕಿದ ಕುರಿಯನ್ನು ಕಡಿದ. ಅದೇ ಕ್ಷಣ ಅವನ ಒಬ್ಬನೇ ಮಗ ಒಳ ಕೋಣೆಯಲ್ಲಿ ರಕ್ತಕಾರಿ ಸತ್ತ.

ಎಷ್ಟೇ ದ್ವೇಷ ಇದ್ದರೂ ಸಾವಿನೊಡನೆ ತೋರಿಸಬಾರದೆಂದು ಕೊಂಕಣಿ ಜನಪದ ಸಾಹಿತ್ಯ ಸಾರಿ ಸಾರಿ ಹೇಳುತ್ತಲಿದೆ. ಅಷ್ಟೇ ಅಲ್ಲದೆ ಮನೆಯಲ್ಲಿ ಓರ್ವ ವ್ಯಕ್ತಿ ಸತ್ತರೆ ಅವನ ಹತ್ತಿರದ ಬಂಧುಗಳು ಒಂದು ವರ್ಷದ ವರೆಗೆ ಯಾವುದೇ ಶುಭ ಕಾರ್ಯಗಳನ್ನು ಮಾಡಲು ಹೆಚ್ಚಾಗಿ ಹೋಗೊಲ್ಲ. ಹಬ್ಬ ಹರಿದಿನಗಳಲ್ಲಿ ಔತಣವನ್ನು ಏರ್ಪಡಿಸೊಲ್ಲ.

ಒಟ್ಟಿನಲ್ಲಿ ಕೊಂಕಣಿ ಜನಪದದ ಸಂಪತ್ತು ವಿಪುಲವಾಗಿದೆ ಎಂದರೆ ಅತಿಶಯೋಕ್ತಿಯಾಗದು. ಆದರೆ ಆ ಬಗ್ಗೆ ಯೋಚನೆ-ಯೋಜನೆಗಳಿಗೆ ಮಾತ್ರ ಬರಗಾಲ ಬಡಿದಿದೆ. ನಮ್ಮಲ್ಲಿಯೇ ಏನಿದೆ ಎಂದು ತಿಳಿಯದ ಪರಿಸ್ಥಿತಿ ನಮ್ಮದಾಗಿದೆ. ಒಟ್ಟಾರೆ ಇಂದಿನ ಜನಜೀವನದಲ್ಲೂ ಜಾನಪದದ ಹಿನ್ನೆಲೆ ಇದ್ದೇ ಇದೆಯೆಂಬ ಮಾತಲ್ಲಿ ಎರಡಿಲ್ಲ. ಕಾಪಿಡುವ ರಕ್ಷಿಸುವ ಹಾಗೂ ಬೆಳಗಿಸುವ ಕೆಲಸ ಪ್ರತಿಯೋರ್ವ ಕೊಂಕಣಿ ಮಾತನಾಡುವ ವ್ಯಕ್ತಿಯ ಆದ್ಯ ಕರ್ತವ್ಯವಾಗಿದೆ.

---

೧೯೯೬

---

# ಕೊಂಕಣಿ ರಂಗಭೂಮಿ

- ಬಿ. ಎಸ್. ಬಾಳಿಗಾ
ಅಲ್ಫಾನ್ಸೋ ಡೆಕೋಸ್ತಾ

---

"ಡಾ॥ ಟಿ.ಎಂ.ಎ. ಪೈ ಪ್ರತಿಷ್ಠಾನ, ಮಣಿಪಾಲ" ಇವರು, ಉಡುಪಿಯ "ರಂಗಭೂಮಿ(ರಿ.)" ಇದರ ಸಹಕಾರದೊಂದಿಗೆ ಸತತ ಮೂರನೇ ಬಾರಿಗೆ ಉಡುಪಿಯಲ್ಲಿ ತಾ. ೨೧-೧-೯೨ರಿಂದ ತಾ. ೨೯-೧-೯೨ರವರೆಗೆ ಅಖಿಲ ಭಾರತ ಕೊಂಕಣಿ ನಾಟಕ ಸ್ಪರ್ಧೆಯನ್ನು ಏರ್ಪಡಿಸಿದ್ದರು.

ಈ ಬಾರಿಯ ಸ್ಪರ್ಧೆಯನ್ನು ಉಡುಪಿಯ ಕೇಂದ್ರಸ್ಥಳವಾದ ಮಹಿಳಾ ಶಿಕ್ಷಕ ತರಬೇತಿ ಸಂಸ್ಥೆಯ ಬಯಲು ರಂಗಮಂಟಪದಲ್ಲಿ ನಡೆಸಿದ್ದರಿಂದ ಸ್ಪರ್ಧೆಗೆ ಜನಾಕರ್ಷಣೆ ದೊರಕಿ, ಪ್ರತಿದಿನ ಗಣನೀಯ ಪ್ರೇಕ್ಷಕವರ್ಗ ಸೇರಿತ್ತು. ನಾಟಕ ತಂಡಗಳ ಸಂಖ್ಯೆಯ ತುಲನಾತ್ಮಕ ದೃಷ್ಟಿಯಿಂದಲೂ ಉತ್ಸಾಹ ವೃದ್ಧಿಯು ಗೋಚರಿಸಿದೆ. ದಕ್ಷಿಣ ಕನ್ನಡದ ಮೂರು, ಗೋವಾದ ನಾಲ್ಕು ಮತ್ತು ದೂರದ ಬೆಂಗಳೂರಿನ ಒಂದು ತಂಡವೂ ಪಾಲುಗೊಂಡಿರುವುದು ಪ್ರಶಂಸಾರ್ಹ. ಮಂಗಳೂರು ಮತ್ತು ಉಡುಪಿಯ ತಂಡಗಳ ಅನಾಸಕ್ತಿಯೂ ಅಷ್ಟೇ ಗಮನಾರ್ಹ.

ಮೊದಲ ದಿನ ಶ್ರೀ ಗಣೇಶೋತ್ಸವ ಸಮಿತಿ, ಗಂಗೊಳ್ಳಿ ಇವರಿಂದ ಪ್ರದರ್ಶಿತವಾದ "ಬಂಧನಾಂತುಲಿ ವ್ಹಾರ್ಡಿಕ" ಹಾಸ್ಯಪ್ರಧಾನ ಸಾಮಾಜಿಕ ನಾಟಕ. ಎಲ್ಲ ನಟನ ಕಲಾವಿದರೂ ಪ್ರಾಯಶಃ ಇನ್ನೂ ಮತದಾನದ ವಯೋಮಿತಿ ಗಳಿಸದ ಉತ್ಸಾಹೀ ಎಳೆಯರು. ಹವ್ಯಾಸೀ ನಟ-ನಟಿಯರಿಗೆ ತಮ್ಮದೇ ಆದ ಇತಿಮಿತಿಗಳಿರುವುದರಿಂದ ಭಾವೋತ್ಕರ್ಷದ ಸನ್ನಿವೇಶಗಳನ್ನು ಸಹಜವಾಗಿ ಅಭಿನಯಿಸಲು ಆತಂಕವಾಗುತ್ತದೆ. ಈ ನಾಟಕದ ದೃಶ್ಯವೊಂದರಲ್ಲಿ ಅಪಹೃತ ತಂಗಿ (ಪಾತ್ರಧಾರಿ: ಸ್ತ್ರೀ)ಯನ್ನು ಪೊಲೀಸ್ ಅಣ್ಣ (ಪಾತ್ರಧಾರಿ: ಪುರುಷ) ಬಂಧನದಿಂದ ಮುಕ್ತಗೊಳಿಸುವಾಗ ಕನಿಷ್ಠಪಕ್ಷ ಮಮತೆಯಿಂದ ತನ್ನ ತಂಗಿಯ ತಲೆಯನ್ನು ಸವರುವಷ್ಟು ಮಟ್ಟಿನ ಸಹಜಾಭಿನಯವನ್ನು ಮಾಡಬೇಕಲ್ಲ? ಆದರೆ ಹವ್ಯಾಸಿಗಳಿಗೆ ಇಂತಹ ಸನ್ನಿವೇಶಗಳು ಸಮಸ್ಯೆಯೇ ಆಗುತ್ತವೆ. ನಾಟಕದ ಯಶಸ್ಸಿಗೆ ರಂಗದ ಮೇಲೆ ಸಹಜ ಅಭಿನಯ ಅತಿ ಅಗತ್ಯ. ಎರಡನೆಯ ಪ್ರಯೋಗ ಮೂಲ್ಕಿಯ ಜಿ. ಎಸ್. ಬಿ. ಸಭಾದವರಿಂದ ಅಭಿನಯಿಸಲ್ಪಟ್ಟ ಮತ್ತೊಂದು ಹಾಸ್ಯ ನಾಟಕ "ಪಿಶ್ಯಾ ಸಾಂತ್". ದಕ್ಷಿಣ ಕನ್ನಡದ ಸಾರಸ್ವತ ಕೊಂಕಣಿ ನಾಟಕಗಳ ವಿಶೇಷತೆಯೆಂದರೆ ಬರೇ ಹಾಸ್ಯರಸ. ನವರಸಗಳಲ್ಲಿ ಇತರ ಒಂದೆರಡು ರಸಗಳ ಮಿಶ್ರಣವಿದ್ದರೆ ಹಾಸ್ಯದ ಏಕತಾನತೆಯಿಂದ ಮುಕ್ತವಾಗ

ಬಹುದು. ವೈಚಾರಿಕ ಮಹತ್ವವುಳ್ಳ ನಾಟಕಗಳನ್ನೂ ಅಭಿನಯಿಸಲು ತಂಡಗಳು ಪ್ರಯತ್ನಿಸಬೇಕು.

ಮೊದಲ ಎರಡೂ ದಿನಗಳ ನಾಟಕಗಳು ಪ್ರಹಸನಗಳು. ಆದರೆ ದ್ವಂದ್ವಾರ್ಥದ ಕುಚೋದ್ಯಗಳಿಲ್ಲದೆ ಮನೋರಂಜಕವಾಗಿದ್ದುವು ಎನ್ನಲಡ್ಡಿಯಿಲ್ಲ. ನಾಟಕವೂ ಒಂದು ಪ್ರಭಾವೀ ಸಮೂಹ ಮಾಧ್ಯಮವಾಗಿರುವುದರಿಂದ ನಾಟಕದಲ್ಲಿ ಶಬ್ದೋಚ್ಚಾರ ಶುದ್ಧವಾಗಿರುವಂತೆ ನೋಡಿಕೊಳ್ಳುವ ಅಗತ್ಯವಿದೆ. 'ಚ' ಮತ್ತು 'ಜ' ಕಾರ ಯುಕ್ತ ಶಬ್ದಗಳಿಗೆ ಮರಾಠಿಯಂತೆ ಕೊಂಕಣಿಯಲ್ಲೂ ಉಚ್ಚಾರವಿದೆಯೆಂಬುದು ಸಾರಸ್ವತ ಕೊಂಕಣಿ ನವಜನಾಂಗಕ್ಕೆ ತಿಳಿದಂತಿಲ್ಲ. 'ಗೊತ್ತಿದೆ' ಎಂಬುದಕ್ಕೆ 'ಹಾಂವಂ ಜಾಣ', 'ಗೊತ್ತಿಲ್ಲ' ಎಂಬುದಕ್ಕೆ 'ಹಾಂವಂ ನೆಣ' ಎಂಬಿತ್ಯಾದಿ ಶಬ್ದಗಳು ಈಗಿನ ವರಿಗೆ 'ಲ್ಯಾಟಿನ್'ನಂತಾಗಬಹುದೋ ಏನೋ. 'ಸೇರ್ವತಾ', 'ತೀರ್ವತಾ', 'ಹಗೆ ತೀರ್ಸಿತಾ', 'ಹೆಬಗ್ಗೆ' ಎಂಬಂತಹ ಪದಪ್ರಯೋಗಗಳಿಂದ ಭಾಷೆಯ ಕಲಸು ಮೇಲೋಗರವಾದೀತು. ನಾಟಕ ಸಾಹಿತ್ಯ ರಚನೆಯ ಸಂದರ್ಭದಲ್ಲಿ ಸ್ವಭಾಷಾ ಪರಿಣತರನ್ನು ಸಂಪರ್ಕಿಸಿ ಭಾಷಾಶುದ್ಧತೆಯ ಬಗೆಗಿನ ಸಂಶಯಗಳನ್ನು ಪರಿಹರಿಸಿ ಕೊಳ್ಳಬೇಕು.

ಮೂರನೆಯ ದಿನ ಗೋವಾದ ಕ್ಯೂಪೆರ್ಮ್‌ನ 'ಪಡ್ಡೆಚಿ ಕಿರ್ಣಂ' ತಂಡದ 'ತುಜೆಂ ದೇಶಾಕ್ ಕಿತೆಂ ಕೊರೂಂ ಯೆತಾ' ಎಂಬ ನಾಟಕ ಪ್ರಯೋಗಿಸಲ್ಪಟ್ಟಿತು. ಮರಾಠಿ ರಂಗಭೂಮಿಯ ನಿಕಟ ಪ್ರಭಾವ, ಅನುಭವ ವಲಯದಲ್ಲಿರುವ ಈ ತಂಡವು ವಿಫಲವಾದುದು ವಿಸ್ಮಯಕರ. ಉದ್ದುದ್ದ ಹಾಡುಗಳು, ಒಂದೇ ತರದ ರಾಗಗಳು ನಾಟಕಕ್ಕೆ ಪೂರಕವಾಗಲಿಲ್ಲ. ದೇಶಸೇವೆಯ ದೀಕ್ಷೆ ಹೊತ್ತ ತರುಣನೊಬ್ಬ ಎಲ್ಲರ ಎಲ್ಲ ಸಮಸ್ಯೆಗಳಿಗೆ ಮೇಲಧಿಕಾರಿಗಳಿಗೆ ಕೇವಲ ಅರ್ಜಿ ಬರೆಯುವುದರಿಂದ ಪರಿಹಾರ ದೊರಕಿಸುವ ಪ್ರಯತ್ನ ನಮ್ಮ ದೇಶ ಕಾಲಕ್ಕೆ ಹೊಂದಿಕೆಯಾಗುವುದಿಲ್ಲ. ದೇಶಕ್ಕಾಗಿ ಪ್ರತಿಯೊಬ್ಬ ಪ್ರಜೆಯು ಕಿಂಚಿತ್ತಾದರೂ ದುಡಿಯಬೇಕೆನ್ನುವ ನಾಟಕಕಾರರ ಸಂದೇಶದ ಅಭಿವ್ಯಕ್ತಿಯು ಅಯಶಸ್ವಿಯಾಗಿತ್ತು.

ಶ್ರೀ ಚಾ.ಪ್ರಾ. ದೆಕೋಸ್ತಾ ಕೃತ 'ಅಂಕ್ವಾರ್ ಮೇಸ್ತ್ರಿ' ನಾಟಕವು ನಾಲ್ಕನೆಯ ದಿನ ಶಂಕರಪುರದ 'ಕೆಥೊಲಿಕ್ ಯೂತ್ ಮೂವ್‌ಮೆಂಟ್' ತಂಡದಿಂದ ಅಭಿನಯಿಸಲ್ಪಟ್ಟಿತು. ಅತ್ಯಂತ ಸುಂದರ ಮತ್ತು ಶಕ್ತಿಶಾಲಿ ಭಾಷೆ ಹಾಗೂ ಬದುಕಿಗೆ ಹೊಂದಿಕೆಯಾಗುವ ನುಡಿಗಟ್ಟುಗಳಿಂದ ತುಂಬಿದ ಸಂಭಾಷಣೆಯಿಂದ ಕೂಡಿದ ಈ ನಾಟಕವನ್ನು ಶಂಕರಪುರದ ಎಳೆಯರು (ಕಾಲೇಜು ವಿದ್ಯಾರ್ಥಿ ವಿದ್ಯಾರ್ಥಿನಿಯರು) ಯಶಸ್ವಿಯಾಗಿ ಪ್ರದರ್ಶಿಸಿದರು. ಸಹಜ ಅಭಿನಯವನ್ನು ನೀಡಿದ ಈ ತಂಡದ ಪ್ರಯತ್ನ ಪ್ರಶಂಸನೀಯ. ನಾಟಕಕ್ಕೆ ಸಂಗೀತವಿರುತ್ತಿದ್ದರೆ ಹೆಚ್ಚು ರಂಜನೀಯವಾಗುತ್ತಿತ್ತು. ಭಾಷೆಯ ಪ್ರಗತಿಯ ದೃಷ್ಟಿಯಿಂದ ಇಂತಹ ನಾಟಕಗಳು ಹೆಚ್ಚಿನ ಸಂಖ್ಯೆಯಲ್ಲಿ ಪ್ರದರ್ಶಿಸಲ್ಪಡಬೇಕು. ಐದನೆಯ ದಿನ ಬೆಂಗಳೂರಿನ ರಂಜನಾ ಆರ್ಟ್ಸ್ ತಂಡದಿಂದ ಅಭಿನಯಿಸಲ್ಪಟ್ಟ 'ಜಗ್ಗಾಲಿ ಝಾಂಕಿ' ಮತ್ತೊಂದು ಪ್ರಹಸನ. ಆಬಾಲವೃದ್ಧ ಪ್ರೇಕ್ಷಕರನ್ನು ಹಾಸ್ಯದಿಂದ

ಸೊರೆಗೊಂಡಿತು. ಪ್ರಧಾನ ಭೂಮಿಕೆಯ ಶ್ರೀಮತಿ ತಾರಾ ಮಲ್ಯ ಮತ್ತು ನಿರ್ದೇಶಕ ಮೈಕೋ ಚಂದ್ರು ಚಲಚ್ಚಿತ್ರ-ಟಿ.ವಿ. ರಂಗಗಳಲ್ಲಿ ಖ್ಯಾತರು. ತಾರಾ ಮಲ್ಯರು ಸಹಜ ಅಭಿನಯದಿಂದ ಪ್ರೇಕ್ಷಕರ ಮೆಚ್ಚುಗೆ ಗಳಿಸಿದರು. ಪ್ರಹಸನಗಳಲ್ಲಿ ಪ್ರತ್ಯಕ್ಷ ನಟರಿಗಿಂತ ಅಪ್ರತ್ಯಕ್ಷ ನಾಟಕಕಾರನೇ ಮುಖ್ಯವೆನಿಸುತ್ತಾನೆ. ಪಾತ್ರಗಳು ಸೂತ್ರದ ಗೊಂಬೆಗಳೆನಿಸುತ್ತವೆ. ಈ ನಾಟಕವು ಸ್ಪರ್ಧೆಯಲ್ಲಿ ತೃತೀಯ ಬಹುಮಾನಗಳಿಸಿತು.

ಗೋವೆಯ ಬಾಂದೋರಾದ 'ಅಂತ್ರುಝ ಲಲಿತಕ್' ತಂಡವು ಪ್ರದರ್ಶಿಸಿದ 'ರಥೋತ್ಸವ್' ನಾಟಕವು ಈ ವರ್ಷದ ಸ್ಪರ್ಧೆಯಲ್ಲಿ ಪ್ರಥಮ ಪುರಸ್ಕಾರವನ್ನು ಗಳಿಸಿತು. ತಲತಲಾಂತರಗಳಿಂದ ರಥವನ್ನು ಕಟ್ಟಿ ಶೃಂಗರಿಸುವ ಮನೆತನದವನಾದ 'ಬಾಬುಶಾ' ಕಾರಣಾಂತರಗಳಿಂದ ತನ್ನ ಸೇವೆಯಿಂದ ವಂಚಿತ ನಾಗಿ ಚಿಂತೆಗೆ ಒಳಗಾಗುತ್ತಾನೆ. ಬೇರೆಯವರಿಂದ ಕಟ್ಟಲ್ಪಟ್ಟ ರಥವು ಜನರು ಎಷ್ಟು ಪ್ರಯತ್ನಪಟ್ಟು ಎಳೆದರೂ ಜಗ್ಗಾಡುವುದಿಲ್ಲ. ದೇವಳದ ಧರ್ಮದರ್ಶಿಗಳು ರಥೋತ್ಸವದ ಶತಾಬ್ದ ಪ್ರಯುಕ್ತ ಬಾಬುಶಾನನ್ನು ಸನ್ಮಾನಿಸುವ ವಚನವಿತ್ತುದನ್ನು ಜ್ಞಾಪಿಸಿಕೊಂಡು, ಸಕಲ ಬಿರುದಾವಳಿಯೊಂದಿಗೆ ಅವನ ಗುಡಿಸಲಿಗೆ ಹೋಗಿ ಉಡುಗೊರೆಯಿತ್ತು ಅವನನ್ನು ಸನ್ಮಾನಿಸಿದಾಗ ರಥ ಚಲಿಸುತ್ತದೆ. ಮಾಮೂಲಿ ಪ್ರಹಸನಗಳಿಗೆ ತದ್ವಿರುದ್ಧವಾಗಿ ಗಹನ ವಿಚಾರ, ಹೃದಯಸ್ಪರ್ಶಿ ಸನ್ನಿವೇಶಗಳು, ನೈಜ ಅಭಿನಯ, ಉತ್ತಮ ಬೆಳಕು ಮತ್ತು ರಂಗಪರಿಕರ, ಸಂದರ್ಭೋಚಿತವಾಗಿ ಪೋಣಿಸಿದ ಧ್ವನಿಮುದ್ರಿತ ಸಂಗೀತಗಳಿಂದ ನಾಟಕವು ಅತ್ಯಂತ ಯಶಸ್ವಿ ಯಾಯಿತು. ಹಾಸ್ಯವಿಲ್ಲದೆಯೂ ನಾಟಕ ಯಶಸ್ವಿಯಾಗುತ್ತದೆ ಎಂಬುದನ್ನು 'ರಥೋತ್ಸವ್' ನಾಟಕ ಸಿದ್ಧಪಡಿಸಿ ತೋರಿಸಿದೆ.

ಗೋವಾ ಸಾಂತಾಕ್ರೂಜ್ಞ್‌ನ 'ಮಾಚಿ ಮೋಗಿ' ತಂಡವು ಪ್ರದರ್ಶಿಸಿದ 'ಕಾಳೋಖಿ ಸೋಮಾಜ್' ನಾಟಕವು ಬಹುಮಾನ ಗಳಿಸದೇ ಹೋದರೂ ಒಂದು ಉತ್ತಮ ಪ್ರಯೋಗ (ಕಳೆದ ವರ್ಷದ ಸ್ಪರ್ಧೆಯಲ್ಲಿ ಈ ತಂಡವು ದ್ವಿತೀಯ ಬಹುಮಾನ ಪಡೆದಿತ್ತು.) ಮಾನವೀಯ ಮೌಲ್ಯಗಳ ಹ್ರಾಸವಾಗುವ ನಿರಪರಾಧಿ ಗಳು ಶ್ರೀಮಂತಿಕೆಯ ದೌರ್ಜನ್ಯಕ್ಕೆ ಸಿಲುಕಿ ಬವಣೆಪಡುವ ಶಕ್ತಿಶಾಲಿ ಕಥಾವಸ್ತು, ಔಚಿತ್ಯಪೂರ್ಣ ರಂಗಪರಿಕರ, ಪರಿಣತ ಬೆಳಕಿನ ಸಂಯೋಜನೆ, ನಿರರ್ಗಳವಾಗಿ ಹರಿದುಬಂದ ದೀರ್ಘಸಂಭಾಷಣೆಗಳಿಂದ ನಾಟಕವು ಒಂದು ಸ್ತುತ್ಯ ಪ್ರಯತ್ನ ವೆನಿಸಿತು. ಆದರೆ ಅಭಿನಯದಲ್ಲಿ ಸ್ತ್ರೀಪಾತ್ರವೊಂದನ್ನು ಬಿಟ್ಟು ಉಳಿದವು ಅಪೇಕ್ಷಿತ ಮಟ್ಟವನ್ನು ತಲಪಲಿಲ್ಲ.

ಸ್ಪರ್ಧೆಯ ಕೊನೆಯ ದಿನ 'ರಂಗಮಾಚಿ, ವೊಳ್ಪಾಯಿ, ಗೋವ' ಇವರು ಪ್ರದರ್ಶಿಸಿದ 'ರಕ್ತ ಖೇವ' ಒಂದು ಗಮನಾರ್ಹ ಪ್ರಯೋಗ. ಆಕಾಶವಾಣಿಯ ಅಖಿಲ ಭಾರತ ಭಾಷಾ ನಾಟಕಗಳಲ್ಲಿ ಎರಡು ಬಾರಿ ತನ್ನ ಕೊಂಕಣಿ ನಾಟಕಗಳಿಗೆ ಸರ್ವಪ್ರಥಮ ಬಹುಮಾನ ಗಳಿಸಿರುವ ಶ್ರೀ ಪುಂಡಲೀಕ ವಿ. ನ್ಯಾಕ್ ಅವರ ತೀಕ್ಷ್ಣ ಲೇಖನಿಯಿಂದ ರಚಿತವಾಗಿರುವ ಈ ನಾಟಕವು ಒಂದು ವೈಚಾರಿಕ ಸಾಹಸ. ಪತಿ, ಪತ್ನಿ, ತಂದೆ, ತಾಯಿ, ಅಣ್ಣ, ತಂಗಿ ಇತ್ಯಾದಿ

ಸಂಬಂಧಗಳು ವಾಸ್ತವದ ಕಠೋರತೆಯಲ್ಲಿ ಸಿಲುಕಿದಾಗ ಹಾಸ್ಯಾಸ್ಪದವೆನಿಸುತ್ತವೆ. ರಕ್ತ ಸಂಬಂಧಗಳು ವಿಧಿಯ ವಿಡಂಬನೆಗೆ ಒಳಗಾಗುತ್ತವೆ ಎಂಬುದನ್ನು ನಾಟಕಕಾರರು ಪರಿಣಾಮಕಾರಿಯಾಗಿ ನಿರೂಪಿಸಿದ್ದಾರೆ. ತಂಗಿಗೆ ತನ್ನಣ್ಣನೇ ಪ್ರಿಯಕರನಾಗುವುದು ಅಸಂಭವವೇನಲ್ಲವೆಂಬ ಸಂಕೀರ್ಣ ವಿಚಾರವನ್ನು ನಾಟಕವು ಪ್ರತಿಪಾದಿಸಿದೆ. ಸೂಕ್ಷ್ಮ ಸನ್ನಿವೇಶಗಳನ್ನು ಸಾಂಕೇತಿಕವಾಗಿ ಅಭಿವ್ಯಕ್ತಿಸುವ ನಿರ್ದೇಶಕ ಸುರೇಂದ್ರ ವೊಳ್ವಾಯಿಕರ್ ಅವರ ನಿರ್ದೇಶನ ಕೌಶಲ ಅಸದೃಶ. ಶ್ರೇಷ್ಠ ನಟಿ ಪ್ರಥಮ ಪ್ರಶಸ್ತಿ ಗಳಿಸಿರುವ ಈ ನಾಟಕದ ಕಲಾವಿದೆ ಶ್ರೀಮತಿ ಸ್ವಪ್ನಾಲಿ ವೊಳ್ವಾಯಿಕರ್ ಅವರ ಅಭಿನಯ– ಸಂಭಾಷಣೆಗಳು ಉನ್ನತ ಮಟ್ಟದವುಗಳು. ಈ ನಾಟಕವು ಸ್ಪರ್ಧೆಯಲ್ಲಿ ದ್ವಿತೀಯ ಸ್ಥಾನ ಗಳಿಸಿತು.

ಗುಣಮಟ್ಟದಲ್ಲಿ ಈ ಬಾರಿಯ ಕೊಂಕಣಿ ಸ್ಪರ್ಧಾ ನಾಟಕಗಳು ಹಿಂದಿನ ವರ್ಷಗಳಿಗಿಂತ ಚೆನ್ನಾಗಿದ್ದವು. ಪ್ರೇಕ್ಷಕರ ಸಂಖ್ಯೆಯಲ್ಲೂ ಗಮನಾರ್ಹ ವೃದ್ಧಿಯಿತ್ತು. ಆದರೆ ಸಾರಸ್ವತರು ಸಾರಸ್ವತ ಕೊಂಕಣಿ ನಾಟಕಗಳಿಗೆ ಮತ್ತು ಕೆಥೊಲಿಕರು ಕೆಥೊಲಿಕ್ ಕೊಂಕಣಿ ನಾಟಕಗಳಿಗೆ ಮಾತ್ರ ಉಪಸ್ಥಿತರಾಗುವುದು ಸಮಂಜಸವಲ್ಲ. ಕಲೆಗೆ ಪ್ರೋತ್ಸಾಹ ನೀಡುವುದರಲ್ಲಿ ಭಾಷೆಯ ಪ್ರಾದೇಶಿಕ ಅಥವಾ ಮತಸಂಬಂಧವಾದ ಭಿನ್ನತೆಗಳು ಅಡ್ಡಿಯಾಗಬಾರದು. ಕೊಂಕಣಿ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿಗಳ ಪುನರುತ್ಥಾನಕ್ಕಾಗಿ ಕೈಗೊಳ್ಳಲಾಗುವ ಕಾರ್ಯಕ್ರಮ ಗಳಿಗೆ ಎಲ್ಲ ಪ್ರಕಾರದ ಕೊಂಕಣಿ ಭಾಷಿಗರೂ ಪ್ರೋತ್ಸಾಹ ನೀಡುವುದು ಅವಶ್ಯ. ಉಡುಪಿಯ ೩ನೆಯ ಅಖಿಲ ಭಾರತ ಕೊಂಕಣಿ ನಾಟಕ ಸ್ಪರ್ಧೆಯನ್ನು ಅತ್ಯಂತ ಯಶಸ್ವಿಯಾಗಿ ನಡೆಸಿದ ಮಣಿಪಾಲದ ಡಾ॥ ಟಿ. ಎಂ. ಎ. ಪೈ ಪ್ರತಿಷ್ಠಾನ ಮತ್ತು ಉಡುಪಿಯ ರಂಗಭೂಮಿ ನಾಟಕ ಸಂಸ್ಥೆ ಅಭಿನಂದನೀಯ.

---

೧೯೯೨, ಫೆಬ್ರವರಿ ೨೮. 'ಉದಯವಾಣಿ', ಮಣಿಪಾಲ

# ಕೊಂಕಣಿ ರಂಗಭೂಮಿ

**– ಶಾಂ ಬಾಳಿಗಾ**

---

ಕೊಂಕಣಿ ಕಲಾವಿದರ ಪ್ರತಿಭಾ ವಿಕಾಸ, ಪ್ರಚಾರ, ಕೊಂಕಣಿಯ ಬೆಳವಣಿಗೆಗೆ ಉತ್ತೇಜನ ಇತ್ಯಾದಿ ಉದ್ದೇಶಗಳಿಂದ ಮಣಿಪಾಲದ ಡಾ। ಟಿ.ಎಂ.ಎ. ಪೈ ಪ್ರತಿಷ್ಠಾನವು ಉಡುಪಿಯ ರಂಗಭೂಮಿ (ರಿ.)ಯ ಸಹಯೋಗದೊಂದಿಗೆ ಉಡುಪಿಯ ಸರಕಾರಿ ಮಹಿಳಾ ಶಿಕ್ಷಕ ತರಬೇತಿ ಸಂಸ್ಥೆಯ ರಾಮರುಕ್ಮ ರಂಗ ಮಂಟಪದಲ್ಲಿ ಏರ್ಪಡಿಸಿದ ಐದನೇ ಅಖಿಲ ಭಾರತ ಕೊಂಕಣಿ ನಾಟಕ ಸ್ಪರ್ಧೆಯಲ್ಲಿ ೯ ನಾಟಕಗಳು ಪ್ರದರ್ಶನಗೊಳ್ಳಲು ನಿರ್ಧರಿತವಾಗಿದ್ದರೂ ಗೋವೆಯ ಎರಡು ತಂಡಗಳ ಅನಿವಾರ್ಯ ಅನುಪಸ್ಥಿತಿಯಿಂದ ೭ ಮಾತ್ರ ಅಭಿನಯಿಸಲ್ಪಟ್ಟವು. ಕೇರಳದ ಕೊಟ್ಟಯಂನಿಂದ, ಬೆಂಗಳೂರು ಹಾಗೂ ಶಂಕರಪುರ (ದ.ಕ.)ದಿಂದ ಒಂದೊಂದು ಹಾಗೂ ಗೋವೆಯಿಂದ ೪ ತಂಡಗಳು ಸ್ಪರ್ಧೆಯಲ್ಲಿ ಭಾಗವಹಿಸಿದವು.

ಮೊದಲ ದಿನದಂದು 'ಇಷ್ಟದಾನ'ವೆಂಬ, ಶ್ರೀ ಪಿ.ಎಸ್. ಪ್ರದೀಪ್ ರಚಿತ, ನಿರ್ದೇಶಿತ ಮತ್ತು ಕೊಟ್ಟಯಂ ಜಿ.ಎಸ್.ಬಿ. ಕಲಾ ಕೇಂದ್ರದಿಂದ ಅಭಿನಯಿಸಲ್ಪಟ್ಟ ನಾಟಕದಲ್ಲಿ ವೃದ್ಧ ಜನ್ಮದಾತರ ಬಗ್ಗೆ ತಾತ್ಸಾರ, ನಿರಾಸಕ್ತಿ, ಸಂಪತ್ತಿನಲ್ಲಿ ತಮ್ಮ ಪಾಲು, ಹಕ್ಕುಗಳ ಬಗ್ಗೆ ಮಾತ್ರ ಮಕ್ಕಳ ಚಿಂತನೆ, ಕರ್ತವ್ಯ ವಿಮುಖತೆ ಇಂತಹ ಪ್ರಚಲಿತ ಸಾಂಸಾರಿಕ ಸಮಸ್ಯೆಗಳನ್ನು ಪ್ರತಿಪಾದಿಸಲಾಗಿದೆ. ಈ ನಾಟಕದಲ್ಲಿ ರಂಗ ಪರಿಕರ, ಬೆಳಕು, ವಸ್ತ್ರಾಲಂಕಾರಗಳು ಕಥೆ, ಸನ್ನಿವೇಶಗಳಿಗನುಗುಣವಾಗಿ ಸರಳ ವಾಗಿದ್ದರೂ ಇನ್ನೂ ಉತ್ತಮಗೊಳಿಸಿದ್ದರೆ ನಾಟಕಕ್ಕೆ ಕಳೆಯೇರುತ್ತಿತ್ತು. ಅತಿ ದೂರದ ಕೊಟ್ಟಯಂನಿಂದ ಮಾತ್ರವಲ್ಲದೆ ಕೇರಳದಿಂದ ಭಾಗವಹಿಸಿದ ಮೊದಲ ತಂಡವೆನ್ನುವ ಅಭಿಮಾನ ಈ ತಂಡದ ಪಾಲಿಗಿದೆ.

ಸ್ಪರ್ಧೆಯ ಎರಡನೇ ನಾಟಕ ವೊಳ್ವಾಯ್, ಗೋವಾದ 'ರಂಗ ಸಂಗತಿ' ತಂಡದವರು ಅಭಿನಯಿಸಿದ 'ಪಿಂಪಳ್ ಪೆಟ್ಲಾ' ಪ್ರಕೃತಿಯ ಮೂಲ ಆಶಯಕ್ಕೂ ವಸಂತೋತ್ಸವ ಇತ್ಯಾದಿ ಮಾನವ ಕಲ್ಪಿತ ಆಚರಣೆಗಳಿಗೂ, ಪಂಚಭೂತಾತ್ಮಕ ದೇಹದೊಳಗೆ ಬುದ್ಧಿಯ ವಿಕಲ್ಪದಿಂದ ಉರಿಯುತ್ತಿರುವ ಕಾಮಾದಿ ವಿಕಾರಗಳಿಗೂ ಉರಿಯುತ್ತಿರುವ ಅಶ್ವತ್ಥಕ್ಕೂ, ಸಂಬಂಧ, ಸಾಮ್ಯಗಳನ್ನು ಕಲ್ಪಿಸಿ ಮರಕ್ಕೆ ಹತ್ತಿಕೊಂಡ ಉರಿಯನ್ನು ಆರಿಸಹೊರಟ ಒಬ್ಬೊಬ್ಬರೂ ತಮ್ಮ ಸ್ವಾರ್ಥ, ವಿಕಾರಗಳಿಗೆ ಬಲಿಯಾಗಿ ಸೋಗಲಾಡಿಗಳಾಗಿ ಉರಿವ ಮರವು ಉರಿದುಕೊಂಡೇ

ಇರುವುದನ್ನು ಸಾಂಕೇತಿಕವಾಗಿ ಸಾಕಾರಗೊಳಿಸಿದ ಈ ನಾಟಕ ಗೋವಾದ ಪ್ರಸಿದ್ಧ ನಾಟಕಕಾರ ಶ್ರೀ ಪುಂಡಲೀಕ ನಾಯಕರ ಒಂದು ಉತ್ತಮ ವೈಚಾರಿಕ ಕೃತಿ. ಕಳೆದ ವರ್ಷದ ಪ್ರಥಮ ಪುರಸ್ಕಾರ ಪಡೆದ ನಾಟಕ 'ಸುರೀಂಗ'ದ ಕರ್ತೃವೂ ಶ್ರೀ ಪುಂಡಲೀಕ ನಾಯಕರು. ರಂಗಪರಿಕರದಲ್ಲಿ ಭವ್ಯವಾಗಿ ಕಾಣುತ್ತಿದ್ದ ಬೃಹದಾಕಾರದ ಶಿವಲಿಂಗ, ಚಂಚಲ ಮನಸ್ಸಿನ ವಿಕಾರಗಳನ್ನು ಅಭಿವ್ಯಕ್ತಗೊಳಿಸುವ ಸಂಭಾಷಣೆಯ ಸಮಯ ದಲ್ಲಿ ಮರದ ಬೆಂಕಿಯು ದಗದಗಿಸುವುದನ್ನು ಸೂಚಿಸಲು ಝುಗಝುಗಿಸುವ ಕೆಂಪು ಬೆಳಕುಗಳ ಸಂಯೋಜನೆಯಿಂದ ನಿರ್ದೇಶಕರ ಉದ್ದೇಶವನ್ನು ಫಲಪ್ರದವಾಗಿ ಅಭಿನಯಿಸಲಾಗಿದೆ. ಗಂಗಿಯ ಪಾತ್ರಧಾರಿ ನಿರ್ದೇಶಕಿ ಶ್ರೀಮತಿ ಜ್ಯೋತಿ ಕಂಕೋಲಿಂಕರ್ ಮತ್ತು ನಾಥ ಪಾತ್ರದ ಶ್ರೀ ಹೇರಂಬ ದೇಸಾಯಿಯವರ ಅಭಿನಯ ಸ್ಮರಣೀಯ.

ಮೂರನೆಯ ನಾಟಕ ಬೆಂಗಳೂರಿನ ರಂಜನಾ ಆರ್ಟ್ಸ್ ತಂಡದವರ ಶ್ರೀ ಎಸ್. ನಾಗರಾಜ ರಾವ್ ರಚಿತ, ಮೈಕೋ ಚಂದ್ರು ನಿರ್ದೇಶಿತ 'ಏಕಿ ಗಾಡ್ವಾಕಾಣಿ'. ನಾಟಕದ ಕಥಾವಸ್ತು ನಮ್ಮೆಲ್ಲರ ಪ್ರಿಯ ಮಹಾನ್ ಭಾರತದಲ್ಲಿ ಸರಕಾರಿ ಇಲಾಖೆಗಳಲ್ಲಿಂದು ಸಾರ್ವಜನಿಕರ ದೂರು, ಅಹವಾಲುಗಳು ಯಾವ ಶೈಲಿಯಲ್ಲಿ ಪರಿಹರಿಸಲ್ಪಡುತ್ತಿವೆ. 'ಕೆಂಪು ಪಟ್ಟಿ'ಯ (Red Tapism) ವ್ಯಾಪ್ತಿಯ ಬಗೆಗಿನ ವಿಡಂಬನೆ.

ನಾಟಕದ ಪ್ರಾರಂಭದಲ್ಲಿ ಪಾತ್ರಧಾರಿಗಳೆಲ್ಲ ರಂಗಮಂಟಪಕ್ಕೆ ಬಂದು ನಿಂತು, ಪ್ರಾರ್ಥನೆಯ ಪೀಠಿಕೆಯ ಅನಂತರ ಚದರುವಾಗ ಅರೆ ಜೀವವಾಗಿ ಬಿದ್ದಿದ್ದ ಕತ್ತೆಯನ್ನು ಸೂತ್ರಧಾರ ಎಡವಿ ಕತ್ತೆಯು ಸತ್ತಿರಬೇಕೆಂದು ಬಗೆದು ಮುನಿಸಿಪಾಲಿಟಿಯವರಿಗೆ ಫೋನ್ ಮಾಡಿದಾಗ ಅವರು ಬಂದು ಕತ್ತೆಯನ್ನೆತ್ತಿ ತಮ್ಮ ವಾಹನದಲ್ಲಿ ಹಾಕಬೇಕೆನ್ನುವಾಗ ಕತ್ತೆ ಕೈಕಾಲು ಅಲ್ಲಾಡಿಸುತ್ತದೆ. ಇಲ್ಲಿಂದಲೇ ಕೆಂಪು ಪಟ್ಟಿಯ ದರ್ಶನ ಪ್ರಾರಂಭ. ಹೆಣವನ್ನಷ್ಟೆ ಕೊಂಡೊಯ್ಯುವುದು ತಮ್ಮ ಕೆಲಸ. ಕತ್ತೆ ಸತ್ತಿಲ್ಲವಾದುದರಿಂದ ಯಾರಾದರೂ ಬಡಿದು ಅದನ್ನು ಸಾಯಿಸಿದರೆ ಅದನ್ನು ಕೊಂಡೊಯ್ಯುವುದಾಗಿ ಹೇಳುತ್ತಾರೆ. ಇದೆಲ್ಲವನ್ನು ಕೇಳಿದ ಕತ್ತೆ ಎದ್ದು ತನ್ನ ಕತೆಯನ್ನು ಹೇಳುತ್ತದೆ. Flash Back ತಂತ್ರವನ್ನಳವಡಿಸಿ ನಾಟಕವು ಪ್ರದರ್ಶಿಸಲ್ಪಡುತ್ತದೆ. ನಾಟಕದ ಹೀರೋ ಕತ್ತೆ, ಭಾರತದಲ್ಲಿಂದು ಜನ ಸಾಮಾನ್ಯರ ಕತ್ತೆ ಪಾಡನ್ನು ಚೆನ್ನಾಗಿ ಅಭಿವ್ಯಕ್ತಿಗೊಳಿಸಿದೆ. ಹೀರೋ ಪಾತ್ರಧಾರಿ ಮಿ. ಗಧಾ ಆಗಿ ಶ್ರೀ ರಾಧಾಕೃಷ್ಣ ಭಟ್ ಅವರು ಉತ್ತಮ ಅಭಿನಯ ನೀಡಿದ್ದಾರೆ. ಇತರೆಲ್ಲರೂ ತಮ್ಮ ಪಾತ್ರಗಳಿಗುಚಿತವಾಗಿ ಅಭಿನಯಿಸಿ ನಾಟಕಕ್ಕೆ ಕಳೆ ತುಂಬಿದ್ದಾರೆನ್ನಬಹುದು. ಶ್ರೀ ಕೋದಂಡರಾಮ ಕುಡ್ವಾರವರ ಸಂಗೀತವೂ ನಾಟಕಕ್ಕೆ ಚೈತನ್ಯ ನೀಡಿದೆ. ರಂಗಸಜ್ಜಿಕೆ, ಬೆಳಕಿನ ಸಂಯೋಜನೆಯೂ ಚೆನ್ನಾಗಿದ್ದವು. ಇದೊಂದು ಪ್ರಶಂಸನೀಯ ಪ್ರಯೋಗ.

ಸ್ಪರ್ಧೆಯ ನಾಲ್ಕನೇ ನಾಟಕ ಗೋವಾದ ವೊಳ್ವಾಯ್‌ಯ ರಂಗ ಮಾಚಿ ವೃಂದದವರು ಪ್ರದರ್ಶಿಸಿದ, ಶ್ರೀ ಬಾಲಕೃಷ್ಣ ಖಾಂಡೆಪಾರ್ಕರ್ ರಚಿತ, ಶ್ರೀ ಸುರೇಂದ್ರ ವೊಳ್ವಾಯ್‌ಕರ್ ನಿರ್ದೇಶಿತ 'ದೇಮಾಯ್ಡ್' ಕಥೆ ಜೀತದಾಳುಗಳ ವ್ಯಥೆಯದು. ಸ್ಪರ್ಧೆಯಲ್ಲಿ ಮೂರನೇ ಬಹುಮಾನ ಗಳಿಸಿದ ಈ ನಾಟಕ ಸ್ವಾತಂತ್ರ್ಯ ಪ್ರಾಪ್ತಿಯ ನಾಲ್ಕೈದು ದಶಕಗಳ ಅನಂತರವೂ ದೇಶದಲ್ಲಿ ಅಲ್ಲಲ್ಲಿರ ಬಹುದಾದ ಜಮೀನ್ದಾರಿ ಪದ್ಧತಿ, ಜೀತದಾಳುಗಳ ಬವಣೆ, ವಿದ್ಯಾಭ್ಯಾಸದ ಮಹತ್ವ, ದಲಿತರ ಜಾಗೃತಿ, ಐಕ್ಯ ಇವುಗಳಿಂದ ಗುಲಾಮಗಿರಿಯ ಕೊನೆ, ಬದ ಲಾಗುವ ಸಾಮಾಜಿಕ ಮೌಲ್ಯಗಳ ವಿಚಾರಗಳನ್ನು ಪ್ರತಿಪಾದಿಸಿ, ಪ್ರದರ್ಶಿಸಿ ಯಶಸ್ವಿಯಾಗಿದೆ. ಭಾಟ್‌ಕಾರನ ಪಾತ್ರಧಾರಿ ಶಾಂಖಾ ಸಾವಂತ್, ಕುಡುಕ ದೇವ್ಯಾನ ಪಾತ್ರಧಾರಿ ಶ್ರೀ ಚಂದನ ವೆಂಗುರ್ಲೆಕರ್ ಗಣ್ಯಾನ ಪಾತ್ರಧಾರಿ ಶ್ರೀ ಸುರೇಂದ್ರ ವೊಳ್ವಾಯ್‌ಕರ್ ಸಹಜ, ಪ್ರಭಾವೀ ಅಭಿನಯದಿಂದ ತಮ್ಮ ಪಾತ್ರಗಳನ್ನು ಸ್ಮರಣೀಯವಾಗಿಸಿದ್ದಾರೆ. ಇತರ ಪಾತ್ರಗಳೂ ಚೆನ್ನಾದ ಅಭಿನಯ ನೀಡಿದ ಇದೊಂದು ಉತ್ತಮ ನಾಟಕ.

ಸ್ಪರ್ಧೆಯಲ್ಲಿ ಪಾಲುಗೊಂಡ ೫ನೆಯ ನಾಟಕ ಶಂಕರಪುರ (ದ.ಕ.)ದ ಕೆಥೊಲಿಕ್ ಯೂತ್ ಮೂವ್‌ಮೆಂಟ್ ತಂಡದವರು ಅಭಿನಯಿಸಿದ 'ಸ್ವಾರ್ಥಿ ಸಂಸಾರ್'. ಸ್ವಾರ್ಥದಿಂದಾಗಿ ಮನುಷ್ಯ ಯಾವ ನೀಚ ಮಟ್ಟಕ್ಕೆ ಇಳಿಯುವನೆಂದು ಸಾಕಾರಗೊಳಸುವ ಪ್ರಯತ್ನದಲ್ಲಿ ತಂಡವು ಸಫಲವಾಗಿದೆ. ಚಾರ್ಲಿಯಾಗಿ ಶ್ರೀ ಜೋರ್ಜ್ ಪಿಂಟೊ ಹಾಗೂ ಬೊಸ್ತುವಾಗಿ ಶ್ರೀ ಕ್ಲೇವಿನ್ ಡಿ'ಸೋಜಾ ಉತ್ತಮ ಅಭಿನಯ ನೀಡಿದ್ದಾರೆ. ರಂಗಪರಿಕರ, ಪ್ರಕಾಶ ಸಂಯೋಜನೆ, ವಸ್ತ್ರಾಲಂಕಾರ ಚೆನ್ನಾಗಿದ್ದ ಇದು ದ.ಕನ್ನಡದ ಮಾನ ಕಾಯ್ದು, ಸ್ಪರ್ಧೆಗಿಳಿದ ಜಿಲ್ಲೆಯ ಏಕೈಕ ತಂಡವಾಗಿ ಅಭಿನಂದನೀಯವಾಗಿದೆ.

ಆರನೆಯ ನಾಟಕ 'ಝೂಝ್'. ನಾಟಕ ತಂಡ 'ಮಾಚಿ ಮೋಗಿ' ಇಲ್ಹಾಸ್, ಗೋವಾ. ಶ್ರೀ ಎ.ಎಂ. ಅರೌಜೋ ನಾಟಕಕರ್ತೃ ಹಾಗೂ ನಿರ್ದೇಶಕ. 'ಝೂಝ್' ಎಂಬುದು ಯುದ್ಧ ಎಂಬ ಶಬ್ದದ ಕೊಂಕಣಿ ತದ್ಭವ. ತಂದೆ ಮಕ್ಕಳ ನಡುವೆ, ಗಂಡಹೆಂಡತಿಯರೊಳಗೆ, ಅಣ್ಣತಮ್ಮಂದಿರಲ್ಲಿ ವಿರಸಕ್ಕೆ ಕಾರಣ ವಾಗಬಹುದಾದ ಹಣ, ಆಸ್ತಿ ಅಥವಾ ಅಹಂಕಾರ, ತಪ್ಪು ಕಲ್ಪನೆ, ಕ್ಷಣಿಕ ಕೋಪಗಳಿಂದ, ಮನಸ್ತಾಪಗಳಿಂದ ಕ್ಷುಲ್ಲಕವಾದ ಕಾರಣವೂ ಪ್ರತಿಷ್ಠೆಯ ಪ್ರಶ್ನೆ ಯಾಗಿ ದುರಂತವಾಗಿ ಪರಿಣಮಿಸುವ ಕಥಾವಸ್ತುವುಳ್ಳ ನಾಟಕ.

ಸಾಂಸಾರಿಕ ಕಲಹ, ಅಸಾಮರಸ್ಯ, ಕೃಷಿಭೂಮಿಯಲ್ಲೂ ಹಣದಾಸೆಗೆ ಕಾಂಕ್ರೀಟು ಕಟ್ಟಡಗಳ ನಿರ್ಮಾಣ, ಪದವಿ ಪಡೆದು ಸರಕಾರಿ ನೌಕರಿಗಾಗಿ ಕಾಯುತ್ತಾ, ಸ್ವೋದ್ಯೋಗದ ಬಗ್ಗೆ ಯೋಚಿಸಲಸಾಧ್ಯವಾದ ಪರಿಸ್ಥಿತಿ, ಈ ಬಗ್ಗೆ ಯುವಕರ ನಿರ್ಲಕ್ಷ್ಯ ಇಂತಹ ವಿಚಾರಗಳನ್ನು ವಿವೇಚಿಸುವ ಪ್ರಯತ್ನವಾಗಿ

